ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಣೆ-೪೬೨

ಪ್ರಾಚ್ಯಕಾವ್ಯಮಾಲೆ-೧೦೧

ಪ್ರಧಾನ ಸಂಪಾದಕ

ಡಾ. ಎಚ್. ತಿಪ್ಪೇರುದ್ರಸ್ವಾಮಿ

ವಿಭಾಗ ಸಂಪಾದಕ

ಎನ್. ಬಸವಾರಾಧ್ಯ

ಸಂಪಾದನೆಯ ಪರ್ವತೇಶ ವಿರಚಿತ

# ಚತುರಾಚಾರ್ಯ ಚಾರಿತ್ರ

ಸಂಪಾದನೆಯ ಪರ್ವತೇಶ ವಿರಚಿತ

# ಚತುರಾಚಾರ್ಯ ಚಾರಿತ್ರ

ಸಂಪಾದಕ

ಎನ್. ಬಸವಾರಾಧ್ಯ




ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೮೬

*CHATURACHARYA CHARITRA—by Sampadaneya Parvatesha ; Edited by N. Basavaradhya ; Published by the Institute of Kannada Studies, University of Mysore, Manasagangotri, Mysore-570 006*
*First edition : 1986, Pp. :* xii+160+930



**ಬೆಲೆ : ರೂ. 95=00**

ಮಾರಾಟಗಾರರು : ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೧೨
ಮುದ್ರಕರು : ಶ್ರೀ ರಾಜೇಂದ್ರ ಪ್ರಿಂಟರ್ಸ್, ಶಿವರಾಮಪೇಟೆ, ಮೈಸೂರು-೧

# ಮುನ್ನುಡಿ

1966ರ ಕೊನೆಯಲ್ಲಿ ಕನ್ನಡ ಅಧ್ಯಯನ ಸಂಸ್ಥೆಯು ಸ್ಥಾಪನೆಯಾದಾಗ, ಪ್ರಾಚ್ಯ ಸಂಶೋಧನಾಲಯದಲ್ಲಿದ್ದ ಕನ್ನಡ ಹಸ್ತಪ್ರತಿಗಳ ಮತ್ತು ಗ್ರಂಥಗಳ ವಿಭಾಗವನ್ನು ಅಧ್ಯಯನ ಸಂಸ್ಥೆಯ ಒಂದು ವಿಭಾಗವನ್ನಾಗಿ ವಿಲೀನಗೊಳಿಸಿ 'ಸಂಪಾದನ ವಿಭಾಗ' ವೆಂಬ ಹೆಸರನ್ನು ಕೊಡಲಾಯಿತು. ಈ ವಿಭಾಗದಲ್ಲಿ ಅತ್ಯಂತ ಪ್ರಾಚೀನ ಹಸ್ತಪ್ರತಿಯಿಂದ ಹಿಡಿದು ಇತ್ತೀಚಿನ ಹಸ್ತಪ್ರತಿಗಳವರೆಗೆ ಸುಮಾರು 10,000 ಹಸ್ತಪ್ರತಿಗಳಿದ್ದು, ಇದು ನಮ್ಮ ನಾಡಿನ ಸುಸಜ್ಜಿತ ಹಸ್ತಪ್ರತಿ ಭಂಡಾರಗಳಲ್ಲಿ ಒಂದೆನಿಸಿಕೊಂಡಿದೆ. ಹೊಸ ಹಸ್ತಪ್ರತಿಗಳಶೋಧನೆ ಮತ್ತು ಸೇರ್ಪಡೆಗಳ ವಿಷಯದಲ್ಲಿ ಮಾತ್ರವಲ್ಲದೆ, ಹಸ್ತಪ್ರತಿಗಳ ಸಂರಕ್ಷಣೆಗೆ ಅಗತ್ಯವಾದ ಏರ್ಪಾಡುಗಳನ್ನು ಮಾಡುವ ವಿಷಯದಲ್ಲಿಯೂ ಸಂಸ್ಥೆ ಎಚ್ಚರ ವಹಿಸಿದೆ. ಶುದ್ಧೀಕರಣ ಮತ್ತು ತೈಲಲೇಪನ ಹಾಗೂ ಪ್ರಧೂಮನ ಉಪಚಾರಗಳನ್ನು ಕೈಗೊಂಡಿರುವುದು ಮಾತ್ರವಲ್ಲದೆ, ಮೈಕ್ರೋಫಿಲ್ಮಗಳ ರೂಪದಲ್ಲಿ ಅವುಗಳನ್ನು ಕಾಯ್ದಿರಿಸಲೂ ಕ್ರಮಕೈಗೊಳ್ಳಲಾಗಿದೆ. ಸಂಸ್ಥೆಯಲ್ಲಿ ಇರುವ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯನ್ನು (9 ಸಂಪುಟಗಳು) ಹೊರತಂದಿರುವುದಲ್ಲದೆ, ಮೈಕ್ರೋ ಫಿಲ್ಮಗಳ ಸೂಚಿಯನ್ನೂ ಸಿದ್ಧಪಡಿಸಲಾಗಿದೆ,

ಸಂಸ್ಥೆಯ ಸಂಪಾದನ ವಿಭಾಗದ ಸಂಶೋಧನ ಸಹಾಯಕರು ಹಾಗೂ ಅಧಿಕಾರ ವರ್ಗದವರು ವ್ಯವಸ್ಥಿತ ಯೋಜನೆಯ ಅಂಗವಾಗಿ ಶಾಸ್ತ್ರೀಯವಾಗಿ ಸಂಪಾದಿಸಿ ಈ ಹಸ್ತಪ್ರತಿಗಳನ್ನು ಪ್ರಕಟಿಸುತ್ತ ಬಂದಿದ್ದಾರೆ. ಇಲ್ಲಿಯ ಹಸ್ತಪ್ರತಿಗಳನ್ನು ಬಳಸಿಕೊಂಡು ಇತರ ವಿದ್ವಾಂಸರು ಸಂಪಾದಿಸಿದ ಗ್ರಂಥಗಳನ್ನೂ ಸಂಸ್ಥೆ ಪ್ರಕಟಿಸಿದೆ. ಹೀಗೆ, ಅಧ್ಯಯನ ಸಂಸ್ಥೆ ಹೊರತರುತ್ತಿರುವ ಗ್ರಂಥಗಳ ಸಂಖ್ಯೆ ಸದ್ಯದಲ್ಲಿಯೇ ನೂರರ ಗಡಿಯನ್ನು ದಾಟಿದೆ ಎಂಬುದು ಸಂತೋಷದ ಸಂಗತಿ. ಸಂಖ್ಯೆಯ ದೃಷ್ಟಿಯಿಂದ ಮಾತ್ರವಲ್ಲದೆ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದಲೂ ಮಹತ್ವದ್ದಾದ ಕೆಲಸ ಇದು. ಈಗ ಪ್ರಮುಖವಾಗಿ ಅಪ್ರಕಟಿತ ಕೃತಿಗಳನ್ನೇ ಅವುಗಳ ಕಾಲಾನುಕ್ರಮಕ್ಕೆ ಅನುಗುಣ ವಾಗಿ ಪ್ರಕಟಿಸುವ ಕ್ರಮವನ್ನು ಕೈಗೊಂಡಿದೆ. ಕೃತಿಗಳ ಗುಣಾವಗುಣಗಳು ಏನೇ ಇರಲಿ, ಅವು ಅಜ್ಞಾತವಾಸದಿಂದ ಹೊರಬರಬೇಕಾಗಿರುವುದು ಮೊದಲು ಆಗಬೇಕಾ ಗಿರುವ ಕಾರ್ಯ. ಮುಂದೆ ಹೆಚ್ಚಿನ ಪ್ರತಿಗಳು ಲಭಿಸಿದಾಗ ಹಾಗೂ ಹೊಸ ಶೋಧನೆ–ಸಂಶೋಧನೆಗಳ ಬೆಳಕಿನಲ್ಲಿ ಅಗತ್ಯವಾದ ಪರಿಷ್ಕರಣಕಾರ್ಯವನ್ನೂ ಕೈಗೊಳ್ಳಬಹುದಾಗಿದೆ. ಒಟ್ಟಿನಲ್ಲಿ, ವಿದ್ವಾಂಸರಿಗೆ, ಸಾಹಿತ್ಯಾಸಕ್ತರಿಗೆ, ಸಂಶೋಧಕರಿಗೆ ಆಕರಸಾಮಗ್ರಿಯನ್ನು ಒದಗಿಸುವ ಮೂಲಭೂತಕಾರ್ಯವನ್ನು ನೆರವೇರಿಸಿದಂತಾಗು ತ್ತದೆ ಎಂಬುದು ಸಮಾಧಾನದ ಸಂಗತಿ.

ಈ ವಿಭಾಗದ ಅನೇಕ ಪ್ರಕಟಣೆಗಳು ಈ ವಿಷಯಕ್ಕೆ ಮೀಸಲಾಗಿರುವ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನಗಳನ್ನು ಗಳಿಸಿವೆ ಎಂಬುದು ಈ ವಿಭಾಗದ ಅಚ್ಚುಕಟ್ಟಾದ ಹಾಗೂ ಶಾಸ್ತ್ರೀಯವಾದ ಕಾರ್ಯನಿರ್ವಹಣೆಗೆ ಸಾಕ್ಷಿಯಾಗಿದೆ. ಶ್ರದ್ಧೆ–ಉತ್ಸಾಹಗಳಿಂದ ಈ ಸಾಧನೆಯನ್ನು ತಮ್ಮದಾಗಿಸಿಕೊಂಡಿರುವ ಸಂಪಾದನ ವಿಭಾಗದ ಕಾರ್ಯಕರ್ತರಿಗೆ ನಮ್ಮ ವಿಶೇಷ ಅಭಿನಂದನೆಗಳು.

ಈಗ ಪ್ರಕಟವಾಗುತ್ತಿರುವ 'ಚತುರಾಚಾರ್ಯ ಚಾರಿತ್ರ' ಸಂಪಾದನ ವಿಭಾಗದ 101ನೆಯ ಕೃತಿ. ಸಂಪಾದನ ವಿಭಾಗ ಮುಖ್ಯರಾಗಿರುವ ಶ್ರೀ ಎಸ್. ಬಸವಾರಾಧ್ಯ ಅವರೇ ಇದನ್ನು ಶಾಸ್ತ್ರೀಯವಾಗಿ ಸಂಪಾದಿಸಿಕೊಟ್ಟಿದ್ದಾರೆ. ಅವರಿಗೂ, ಕರಡು ಪರಿಶೀಲನೆಯಲ್ಲಿ ನೆರವಾಗಿರುವ ಶ್ರೀ ಜಿ. ಜಿ. ಮಂಜುನಾಥನ್ ಮತ್ತು ಇತರರಿಗೂ, ಮುದ್ರಣಕಾರ್ಯದಲ್ಲಿ ಸಹಕರಿಸಿರುವ ಶ್ರೀ ರಾಜೇಂದ್ರ ಪ್ರಿಂಟರ್ಸ್, ಮೈಸೂರು, ಅವರಿಗೂ ವಂದನೆಗಳು.

ಎಚ್. ತಿಪ್ಪೇರುದ್ರಸ್ವಾಮಿ
ನಿರ್ದೇಶಕರು

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು–೬
೧೨–೨–೮೬

# ವಿಷಯಾನುಕ್ರಮಣಿಕೆ



## ಪ್ರಥಮಕಾಂಡ



## ದ್ವಿತೀಯ ಕಾಂಡ

## ತೃತೀಯ ಕಾಂಡ



## ಚತುರ್ಥ ಕಾಂಡ

## ಪಂಚಮ ಕಾಂಡ



## ಷಷ್ಠಮ ಕಾಂಡ



## ಅನುಬಂಧಗಳು

# ಪೀಠಿಕೆ

## ೧. ಕವಿ ಕಾವ್ಯ ವಿಚಾರ

ಚತುರಾಚಾರ್ಯರ ಚಾರಿತ್ರ್ಯದ ಕರ್ತೃ ಸಂಪಾದನೆಯ ಪರ್ವತೇಶ. ಈತನ ಕಾಲ ಕ್ರಿ. ಶ. 1698. ಕವಿಯೇ ತನ್ನ ಕೃತಿ ರಚನಾ ಕಾಲವನ್ನು ಹೇಳಿಕೊಂಡಿದ್ದಾನೆ.

ಬಿದಿಯ ಮಾನದೊಳಗಿಪ್ಪತ್ತೆಂಟನೆಯ ಕಲಿಯ
ಮೊದಲಲ್ಲಿ ವೈವಸ್ವತಾಖ್ಯ ಮನ್ವಂತರಧಿ
ಕದಲಿದಬ್ದಗಳೆಣಿಸೆ ಶಾಲಿವಾಹನ ಶಕದಿ ನವಚಂದ್ರರಸಶಶಿಗಳು
ಅದರೊಳೀಶ್ವರ ವತ್ಸರದ ಮಾಘ ಪೌರ್ಣಿಮೆಯೊ
ಳುದಿಸಿದೀ ಕಾವ್ಯ ಚತುರಾಚಾರ್ಯ ಚಾರಿತ್ರ
ಮಿದಕೆ ರಕ್ಷಕರು ಕಲ್ಯಾಣಪಟ್ಟಣದ ಬಸವಾದಿ ಪ್ರಮಥರಾಗಲಿ

(೬-೮-೫೦)

ಈ ಪದ್ಯದ ಪ್ರಕಾರ ಕೃತಿರಚನಾ ಕಾಲ ಶಕ 1619 ಎಂದರೆ ಕ್ರಿ. ಶ. 1698ನೆಯ ಜನವರಿ 16 ಭಾನುವಾರವಾಗುತ್ತದೆ. ಕರ್ಣಾಟಕಕವಿಚರಿತೆಕಾರರೂ ಈ ಕಾಲವನ್ನೇ ಹೇಳಿದ್ದಾರೆ.

ಸಂಪಾದನೆಯ ಪರ್ವತೇಶನ ಗುರುಪರಂಪರೆ ಬಹಳ ದೊಡ್ಡದು. ತನ್ನ ಗುರುಪರಂಪರೆಯನ್ನು ಮುಕ್ತಕಂಠದಿಂದ ಸ್ಮರಿಸಿದ್ದಾನೆ, ಕೊಂಡಾಡಿದ್ದಾನೆ. ಆ ವಂಶ ವೃಕ್ಷವನ್ನು ಹೀಗೆ ತೋರಿಸಬಹುದು.



ಸಂಪಾದನೆಯ ಪರ್ವತೇಶ ಚತುರಾಚಾರ್ಯ ಚಾರಿತ್ರವನ್ನು ಬಿಟ್ಟು ಮತ್ತಾವ ಕೃತಿಯನ್ನೂ ಬರೆದಂತೆ ಕಂಡುಬಂದಿಲ್ಲ. ಚತುರಾಚಾರ್ಯಚಾರಿತ್ರದಲ್ಲಿ ಆರು ಕಾಂಡಗಳೂ ಐವತ್ತನಾಲ್ಕು ಸಂಧಿಗಳೂ ಮೂರುಸಾವಿರದ ಒಂದುನೂರ ಎಂಬತ್ತೇಳು ಪದ್ಯಗಳೂ ಇವೆ. ಇದು ವಾರ್ಧಕಷಟ್ಪದಿಯಲ್ಲಿ ರಚಿತವಾಗಿದೆ. ಇದರಲ್ಲಿ ರೇಣುಕ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ ಈ ನಾಲ್ವರು ಆಚಾರ್ಯರ ಚರಿತ್ರೆ ನಿರೂಪಿತವಾಗಿದೆ. ಪ್ರತಿಸಂಧಿಯ ಕೊನೆಯಲ್ಲಿ ನಿಯತವಾಗಿ ಬರುವ ಮುಂದಿನ ಪದ್ಯಗಳಲ್ಲಿ ಈ ವಿಷಯ ಸ್ಪಷ್ಟವಾಗುತ್ತದೆ.

ಇದು ಚತುರ್ಯುಗದೊಳಾಚಾರ್ಯ ರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಲ ಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತಮಾಹೇಶ್ವರರ್ಗಿಷ್ಟಾರ್ಥವಹುದು ಸತ್ಯಂ
(೧–೧–೫೭)

ಸತತೋಜ್ವಲಾನಂದ ಸಂದೋಹರೂಪ ಸ
ನ್ಮುತ ವೇದಪೌರಾಣಿಕಾಗಮಾದ್ಯಖಿಳ ವರ
ಮತಶಾಸ್ತ್ರಮಂಜುಳ ಸುಪುಂಜರುಜಿತ ಪುರಾತನವಚನ ಸಮ್ಮತವಹ
ಅತಿಶಯ ಮಹಾಲಿಂಗಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಪ್ರಥಮ
ದತಿನೂತ್ನವಹ ಕಾಂಡದೊಳ್ ನೋಡಲೊಂದನೆಯ ಸಂಧಿ ಸಂಪೂರ್ಣವಾಯ್ತು
(೧-೧–೫೮)

ಆದರೆ ಸಂಪಾದನೆಯ ಪರ್ವತೇಶ ಕೃತಿಯ ಮೊದಲಲ್ಲಿ—

ಆಚಾರ್ಯ ರೇವಣಾಸಿದ್ಧೇಶ ಮರುಳಸಿ
ದ್ಧಾಚಾರ್ಯ ಪಂಡಿತಾರಾಧ್ಯ ಏಕೋರಾಮ
ಆಚಾರ್ಯ ವಿಶ್ವೇಶ್ವರಾಚಾರ್ಯರೆನಿಪ ಪಂಚಕಕಲಶದಾಚಾರ್ಯರ
ಸ್ವಾಚಾರ್ಯಚಾರಿತ್ರ ಸಕಲಶಿವಶರಣರ್ಗೆ
ಗೋಚರಿಸುವಂದದಿಂ ರಚಿಸುವೆಂ ಕೃತಿಯನ
ತ್ಯಾಶ್ಚರ್ಯವಪ್ಪುದಿದು ಗುರುಚರಣಕಂಜವಿಕಸನಮಾಗೆ ಹೃದಯದಲ್ಲಿ
(೧-೧–೫೫)

ಈ ರೀತಿ ಹೇಳಿಕೊಂಡಿದ್ದಾನೆ. ಮೇಲಿನ ಎರಡು ಪದ್ಯಗಳಲ್ಲಿ "ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ ಸದಮಲ ಸುಚಾರಿತ್ರ", "ಚತುರ್ಗುರು ಚರಿತ" ಎಂದು ಘೋಷಿಸಿದ್ದರೂ ಈ ಎರಡು ಪದ್ಯಗಳಿಗಿಂತ ಹಿಂದಿನ ಪದ್ಯದಲ್ಲಿ "ಪಂಚಕಕಲಶ

ದಾಚಾರ್ಯರ ಸ್ವಾಚಾರ್ಯಚಾರಿತ್ರ ಸಕಲಶಿವಶರಣರ್ಗೆ ಗೋಚರಿಸುವಂದದಿಂ ರಚಿಸುವೆಂ ಕೃತಿಯಂ'' ಎಂದು ಹೇಳಿಕೊಂಡಿರುವುದಕ್ಕೆ ಕಾರಣವೇನಿರಬಹುದು ? ಈ ಪಂಚಕಕಲಶದಾಚಾರ್ಯರ ಪಟ್ಟಿಯಲ್ಲಿ ವಿಶ್ವೇಶ್ವರಾಚಾರ್ಯರನ್ನು ಕೈಬಿಟ್ಟಿರುವು ದಾದರೂ ಏಕಿರಬಹುದು ? ಇದು ತೀರ ಗಹನವಾದ ಸಮಸ್ಯೆಯಾಗಿದೆ. ವೀರಶೈವ ಧರ್ಮೋದ್ಧಾರಕರಾದ ಪಂಚಾಚಾರ್ಯರನ್ನು ಕೃತಿಯ ಮೊದಲಲ್ಲಿ ಸ್ತುತಿಸಬೇಕೆಂಬುದು ಬಹುಶಃ ಕವಿಯ ಮನೋಭಾವವಾಗಿದ್ದಿರಬಹುದೆಂದು ಊಹಿಸಬಹುದಲ್ಲವೆ ? ಆದರೂ ''ರಚಿಸುವೆಂ ಕೃತಿಯಂ''ಎಂಬುದನ್ನು ಸಮರ್ಥಿಸಿಕೊಳ್ಳುವುದು ಕಷ್ಟಸಾಧ್ಯವೆನಿಸುತ್ತದೆ.

ಕಾವ್ಯದ ಆರಂಭದಲ್ಲಿ ಪರ್ವತೇಶ ತನ್ನ ಗುರುವಾದ ಚೆನ್ನಮಲ್ಲಿಕಾರ್ಜುನ ದೇವರ ಪಾದಕ್ಕೆ ನಮಸ್ಕರಿಸಿ ''ತರುಣಾರ್ಕಕೋಟಿಪ್ರಕಾಶ ಕಲ್ಯಾಣಾದ್ರಿವಾಸ ಸರ್ವೇಶ ಗುರುವೆ ಧರಣಿಯೊಳ್ ಮೆರೆವ ಚತುರಾಚಾರ್ಯರನ್ವಯವ ಕರುಣದಿಂದೊರೆದು ಕೃತಕೃತ್ಯನಂ ಮಾಳ್ಪುದು'' ಎಂದು ಪ್ರಾರ್ಥಿಸಿಕೊಳ್ಳಲು ''ಹರುಷದಿಂ ಪೇಳ್ದರು, ಆ ವಾಕ್ಯಾಮೃತವ ಪದವ ಮಾಳ್ಪುದು'' ಎಂದು ಅಪ್ಪಣೆಯಿತ್ತರು. ಆಮೇಲೆ ರೇವಣ ಸಿದ್ಧರನ್ವಯದ ಪೌರಾಣಿಕ ಬಸವಯ್ಯನೂ ಶರಣಜನವೂ ''ಮೂಲ ಚತುರ್ಗುರುಗಳ ಪದೇಶವಿಧಿಯಂ ನೀಂ ಪಾಲಿಸುವುದು'' ಎಂದು ಪರ್ವತೇಶನನ್ನು ಕೇಳಿಕೊಳ್ಳಲು ಈ ಕಾವ್ಯವನ್ನು ರಚಿಸಿದುದಾಗಿ ಹೇಳಿಕೊಂಡಿದ್ದಾನೆ. ಈ ಚತುರಾಚಾರ್ಯರ ಮಹಾತ್ಮೆ ಯನ್ನು ವರ್ಣಿಸುವುದಕ್ಕೆ ತಾನು ಹೇಗೆ ಸಮರ್ಥ ಎಂದು ಚಿಂತಿಸುತ್ತಿರುವಾಗ ಗುರು ಆತನ ಕನಸಿನಲ್ಲಿ ಬಂದು ತಲೆದಡಹಿ ಹೃತ್ಕಂಜದಲ್ಲಿ ನಿಂದು ಕೃತಿಯನ್ನು ಹೇಳಿಸಿದನಂತೆ. ಇದೇ ಸಂಗತಿಯನ್ನು ಕೃತಿಯ ಕಡೆಯಲ್ಲಿ ಹೀಗೆ ವಿವರಿಸಿದ್ದಾನೆ—

ಮೆರೆವ ಸಂಪಾದನಾ ಸಿದ್ಧವೀರೇಶ್ವರನ
ಕರಕಮಲಸಂಜಾತ ಮಲ್ಲಿಕಾರ್ಜುನದೇವ
ರರುಹಿಸಲ್ಬೇಕೆಂದು ಸಿದ್ಧಪುರದೊಳಗೆ ಮೂರ್ತಗೊಂಡು ಲಿಂಗವಾದ
ವರ ಬೋಳಬಸವೇಶ್ವರಂ ಚತುರ್ವಿಧರಾದ
ಗುರುಗಳ ಚರಿತ್ರಮಂ ಕೇಳಲವರಿಂಗೊರೆಯೆ
ಪರುವತೇಶ್ವರ ನಮ್ಮ ಗುರುಚರಣರಾಕಾಲದೊಳಗಲ್ಲಿ ಕೇಳಿರ್ದರು
(೬-೮-೩೦)

ಕಾಲಾಂತರಕ್ಕೆ ಪೌರಾಣಿಕಂ ಬಸವಯ್ಯ
ಬಾಲಕಂ ನಮ್ಮಡಿಗೆ ನಮಿಸಿ ನೀವಾ ಕಥೆಯ
ಪೇಳಬೇಕೆಂದು ಬಿನ್ನವಿಸಲ್ಕೆ ನಾವೆಂತು ಪೇಳಬಹುದೆಂದಿರಂತಿರೆ
ಮೇಲೆ ಮತ್ತಾ ರಾತ್ರಿಯಲ್ಲಿ ಶಂಭುಗಣದಿ ವಿ
ಶಾಲದಯೆಯಿಂ ಚೆನ್ನಮಲ್ಲಿಕಾರ್ಜುನಗುರುಲ
ಲಾಮಗೆ ಕನಸಿನೊಳ್ ಪ್ರತ್ಯಕ್ಷವಾಗಿ ಭಯಬೇಡ ನಿನಗೆಂದಭಯಮಂ
(೬-೮-೩೧)

ಸಲಿಸಿ ನಾವೇ ನಿನ್ನ ಹೃದಯಸರಸೀರುಹದಿ
ನೆಲಸಿ ಪೇಳಿಸುವೆಮೆಚ್ಚತ್ತು ನೀಂ ಗುರುಪಾದ
ನಳಿನಕ್ಕಭಿನಮಿಸಿಯುಪ್ಪಣೆವಡೆದಂ ಪೇಳೆಂದು ನಿಜಹಸ್ತಮಂ ಪ್ರೀತಿಯಿಂ
ತಲೆಯ ಮೇಲಿಡಲೆನ್ನನಸುಗಳಿದ ಕಾಯಕ್ಕೆ
ತಳಿದಂತೆ ದಿವ್ಯಾಮೃತವ ಘನಾನಂದಸಂ
ವಲಿತಮಾನಸನಾಗಲಾಕ್ಷಣಂ ಕನಸಳಿದುದೇನೆಂಬೆನಚ್ಚರಿಯನು॥

(೬-೮-೩೨)

ಆಗಲೇ ಗವಿಂಸಿ ಪರಮಾನಂದಮುಕ್ಕೀರೆ
ಶ್ರೀಗುರುವಿನಡಿಗೆರಗಿ ಸ್ವಾಸ್ಥಿಕಸ್ಥಿತಿಯ ಚೆ
ನ್ನಾಗಿ ಪೇಳಲ್ ಕೇಳಿ ಸಂತೋಷದಿಂದ ಕರಕಮಲಮಂ ಮಸ್ತಕದಲಿ
ಯೋಗಮಂ ಗೈದಂ ಪೌರಾಣಿಕಂ ಬಸವಯ್ಯ
ನೇ ಗಿರಿಶಕೃಪೆಗೆ ಪಾತ್ರನೊ ಭಲಾ ಎಂದು ಮೇ
ಲಾಗತಕ್ಕುದನಾಗರಿಪುದೆನುತ್ತಂ ನಿರೂಪಿಸಿದ ಪರ್ವತೇಶಂ॥

(೬-೮-೩೩)

## ೨. ಕಥಾಸಾರ

### ಪ್ರಥಮಕಾಂಡ

ದೇವತಾಪ್ರಾರ್ಥನೆ, ಗುರುಂಪರಂಪರೆಯ ಸ್ತುತಿ, ಕಾವ್ಯರಚನೆಯ ಹಿನ್ನೆಲೆಗಳ ನಿರೂಪಣೆಯೊಂದಿಗೆ ಕಾವ್ಯ ಪ್ರಾರಂಭವಾಗಿದೆ. ಪೂರ್ವಕವಿಗಳಲ್ಲಿ ಮಲುಹಣ, ಕೇಶಿರಾಜ, ರಾಘವ, ಭೀಮ, ಪಾಲ್ಕುರಿಕೆ ಸೋಮ, ಪದ್ಮರಾಜ, ಮಲಯರಾಜ, ಗುರ್ಜರ, ಹಲಾಯುಧ, ಮಾಯಿದೇವಾಚಾರ್ಯ, ಚಾಮರಸ, ಜಕ್ಕಣ್ಣ, ನಿಜಗುಣರನ್ನು ಸ್ಮರಿಸಿದ್ದಾನೆ. ರೇಣುಕ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ ಮತ್ತು ವಿಶ್ವಾರಾಧ್ಯರು ತನ್ನನ್ನು ಕಾಪಾಡಲೆಂದು ವಿಶೇಷವಾಗಿ ಪ್ರಾರ್ಥಿಸಿದ್ದಾನೆ.

ಎಲ್ಲೆಲ್ಲಿಯೂ ಪರುಷದ ಕಣೆ, ಸಿದ್ಧರಸದ ದೋಣೆಗಳಿಂದ ಕೂಡಿದ ಕೈಲಾಸದಲ್ಲಿ ಶಿವನ ಒಡ್ಡೋಲಗ ನೆರೆದಿತ್ತು. ಸರ್ವಲೋಕದ ಮಾತೆ ಸ್ಥಾಣುವಿನ ವಾಮಾಂಗದಲ್ಲಿದ್ದಳು. ವಿನತೆ, ಸಿಂಹಿಕೆ. ಕದ್ರುಕಾಳಿಯರು ಶಿವನನ್ನು ಓಲೈಸುತ್ತಿದ್ದರು. ಅರುಂಧತಿ, ಅನಸೂಯೆ ಮೊದಲಾದ ದ್ವಾದಶ ಪತಿವ್ರತೆಯರು ಬಂದು ಶಿವನನ್ನು ಹರಸಿದರು. ಬ್ರಾಹ್ಮಿ, ಮಾಹೇಶ್ವರಿ ಮೊದಲಾದ ದೂತಿಯರು ಶಿವನನ್ನು ಓಲೈಸುತ್ತಿದ್ದರು. ಬ್ರಹ್ಮ,

ಸಪ್ತರ್ಷಿಗಳು, ಸಿದ್ಧಚಾರಣರು, ಗಂಧರ್ವ, ಯಕ್ಷ, ಕಿನ್ನರ, ಕಿಂಪುರುಷರು, ವಿದ್ಯಾಧರರು ಶಿವನನ್ನು ಓಲೈಸಲು ಬಂದರು. ಶಿವನು ತನ್ನ ಸಮ್ಮುಖದಲ್ಲಿದ್ದ ಭಾಸುರ ಗಣಾನೀಕರೊಳಗೆ ಅಗ್ರಗಣ್ಯರೂ ಶ್ರುತಿಪುರಾಣಾಗಮಪ್ರಶಸ್ತರೂ ಶಾಶ್ವತಾನಂದೇಷ್ಟ ಫಲದಾತರೂ ಆದ ಚತುರಾಚಾರ್ಯರನ್ನು ನೋಡುತ್ತ, ಆದಿವೃಷಭೇಶ್ವರನು ಬಸವ ನಾಮವನ್ನು ಧರಿಸಿ ಸಕಲ ಪ್ರಮಥಾಳಿ ಸಹವಾಗಿ ಭೂಲೋಕಕ್ಕೆ ಹೋಗುತ್ತಾನೆ. ನೀವು ಅವನಿಗಿಂತ ಮೊದಲೇ ಭೂಲೋಕಕ್ಕೆ ಹೋಗಿ ವೀರಶೈವೋಪದೇಶವನ್ನು ಮಾಡುತ್ತ ಧರೆಯನ್ನು ಪಾವನಮಾಡಿ ಎಂದು ಆಜ್ಞಾಪಿಸಿದನು. ಅದಕ್ಕೆ ಅವರು "ದೇವ ನಿಮ್ಮ ಪಾದಸೇವೆಯನ್ನೂ ಗಣಗಳನ್ನೂ ಬಿಟ್ಟು ನಾವು ಭೂಮಿಗೆ ಹೇಗೆ ಹೋಗುವೆವು" ಎಂದರು. "ನಾನು ನಿಮ್ಮನ್ನು ನಿರಂತರವಾಗಿ ರಕ್ಷಿಸುತ್ತೇನೆ" ಎಂದು ಹೇಳಿ ನಾಲ್ವರನ್ನೂ ಮುಂಡಾಡಿ ಕರುಣಪ್ರಸಾದವನ್ನು ಕೊಟ್ಟು ನಿಮ್ಮ "ನಿಮ್ಮ ಸ್ವಯಂಭುಗಳಲ್ಲಿ ಮಹಿಮೆ ಯನೆಯ್ದಿ" ಎಂದು ಆಜ್ಞಾಪಿಸಿದರು. ಆ ಆಚಾರ್ಯರು ರತ್ನಖಚಿತ ಪುಷ್ಪಕವನ್ನೇರಿ ಶಿಷ್ಯರೊಡನೆ ಪ್ರಯಾಣಮಾಡಿದರು.

ಚತುರಾಚಾರ್ಯರು ಶಾಂಭವಲೋಕದಿಂದ ಮುಕ್ತಿಲೋಕಕ್ಕೆ ಬರುವಾಗ ವೈಕುಂಠ, ಬ್ರಹ್ಮಲೋಕ, ಜನಲೋಕ, ಮಹರ್ಲೋಕ, ಸ್ವರ್ಗಲೋಕಗಳನ್ನು ಸಂದರ್ಶಿಸಿದರು. ದೇವೇಂದ್ರನು ಅವರನ್ನು ಸತ್ಕರಿಸಿದನು. ಧ್ರುವಲೋಕಕ್ಕೆ ಬಂದು ಶಿಂಶುಮಾರಕ ನನ್ನು ನೋಡಿಕೊಂಡು ಸಪ್ತರ್ಷಿಮಂಡಲಕ್ಕೆ ಬರಲು ಅಲ್ಲಿದ್ದ ಮರೀಚಿ, ಅತ್ರಿ ಮೊದ ಲಾದ ಋಷಿಗಳು ಬಂದು ಆಚಾರ್ಯರಿಗೆ ನಮಸ್ಕರಿಸಿದರು. ಅಲ್ಲಿಂದ ಅವರು ಅಶನಿ ಮಂಡಲ ಶುಕ್ರಮಂಡಲ ಅಂಗಾರಕನ ಮಂಡಲವನ್ನು ನೋಡುತ್ತ ಹೊರಟರು. ಮಂಗಳಲೋಕ ಚಂದ್ರಲೋಕಗಳನ್ನೂ ನೋಡಿಕೊಂಡು ದ್ವಾದಶ ಋಷಿಗಳನ್ನೂ ದ್ವಾದ ಶಾದಿತ್ಯರನ್ನೂ ಸಂದರ್ಶಿಸಿದರು. ಏಕಾದಶರುದ್ರರು ನಮಿಸಿ ಸ್ತುತಿಸಿದರು. ಅವರು ದೇವಗಂಗೆಯನ್ನು ಸಂದರ್ಶಿಸಿ ಭೂಲೋಕವನ್ನು ಸಾರಿದರು.

ಹೇಮಂತಗಿರಿಯ ದಕ್ಷಿಣದಲ್ಲಿ ಕಾಶಿದೇಶ ಮೆರೆಯುತ್ತಿತ್ತು. ಅದು ಪರಶಿವನ ಮುಕ್ತಿಯ ಆಗರವೆನಿಸಿತ್ತು. ಅಲ್ಲಿಯ ವಿಶ್ವೇಶ್ವರನ ಆಲಯ ಮುಕ್ತಿಮಂಟಪವೆನಿಸಿತ್ತು. ಆ ದೇವಾಲಯದಲ್ಲಿ ವಾರನಾರಿಯರು ನರ್ತಿಸುತ್ತಿದ್ದಾಗ ಶಿವಲಿಂಗದಿಂದ ನಾದ ಜನಿಸಿತು. ಕೋಟಿಸಿಡಿಲರವದಂತೆ ಶಿವನು ನುಡಿದನು. ಅಂತಕಾಂತಕಲಿಂಗದಿಂದ ಮೂಡಿದ ಜ್ಯೋತಿ ಭೂಮಿಯಲ್ಲೆಲ್ಲ ಆವರಿಸಿತು. ಸಭಿಕರು ವಿಸ್ಮಯದಿಂದ ನೋಡ ನೋಡು ತ್ತಿರುವಂತೆಯೇ ವಿಶ್ವೇಶ್ವರಲಿಂಗದಿಂದ ಪಂಡಿತಾರಾಧ್ಯರು ಜನಿಸಿದರು.

ಕಾಶಿಯ ದಕ್ಷಿಣದಲ್ಲಿ ಶ್ರೀಗಿರಿ ರಾಜಿಸುತ್ತಿತ್ತು. ಆ ಪುರದ ಶಿವಾಲಯದ ಗರ್ಭ ಗೃಹದಲ್ಲಿ ಸಿದ್ಧೇಶ್ವರನಿದ್ದನು. ಆ ಜ್ಯೋತಿರ್ಲಿಂಗದಾಕಾರದೊಳಗೆ ಜ್ಯೋತಿಯೊಳು ಪ್ರತ್ಯೇಕ ಜ್ಯೋತಿ ಉದಿಸುವಂತೆ ಏಕೋರಾಮ ತಂದೆಗಳು ಉದಿಸಿದರು.

ಶ್ರೀಗಿರಿಯ ಪಶ್ಚಿಮದಲ್ಲಿ ಪೂರ ಎಂಬ ಪುರವರ. ಅಲ್ಲಿ ತುಂಗಭದ್ರಾನದಿ ಹರಿಯುತ್ತಿತ್ತು. ಅಲ್ಲಿ ಪರುಷಮಲ್ಲೇಶನೆಂದು ಹೆಸರಾದ ಬಾಲಬ್ರಹ್ಮೇಶ್ವರಲಿಂಗವಿದ್ದಿತು.

ಆ ಲಿಂಗದಿಂದ ಮರುಳುಸಿದ್ಧೇಂದ್ರನು ಆವಿರ್ಭವಿಸಿದನು.

"ಶ್ರೀಗುರುವರರ ಉದಯವನ್ನು ಈ ವರೆಗೆ ತಿಳಿಸಿದಂತೆ ರೇವಣಸಿದ್ಧನ ಉತ್ಪತ್ತಿಯೆನ್ನು ಹೇಳಿ ಕೃತಕೃತ್ಯನನ್ನಾಗಿ ಮಾಡು" ಎನ್ನಲು ಗುರುಚನ್ನಮಲ್ಲನು "ಪರ್ವತೇಶ್ವರನೇ ಕೇಳು" ಎಂದು ಹೇಳತೊಡಗಿದನಂ. ಚಪ್ಪನ್ನದೇಶದಲ್ಲಿ ತ್ರಿಲಿಂಗದೇಶ ಪ್ರಸಿದ್ಧವಾದುದು. ಅದರಲ್ಲಿ ಕೊಲ್ಲಿಪಾಕಿಯಲ್ಲಿ ಸೋಮೇಶನಾಲಯವಿತ್ತು. ಅಲ್ಲಿ ನೆರೆದಿದ್ದವರೆಲ್ಲ ಶಿವಲಿಂಗವನ್ನು ನೋಡುತ್ತಿರಲು ಸಿದ್ಧೇಂದ್ರಯತಿಯ ಪ್ರಭೆ ತೋರಿತು. ಸಿದ್ಧಲಿಂಗನ ಜನನದಿಂದ ಸರ್ವರಿಗೂ ಸರ್ವಸಿದ್ಧಿಗಳು ಲಭಿಸಿದುವು. ವಾಸುದೇವನೆಂದು ವೈಷ್ಣವರು, ಸಾಂಬಶಿವನೆಂದು ಶೈವರು, ಷಡ್ದರ್ಶನವ್ರಾತದವರು, ತಮ್ಮ ಕುಲದೈವವೆಂದು ನಮಸ್ಕರಿಸಿದರು. ಚತುರ್ವಿಧಗುರುಗಳ ಆವಿರ್ಭಾವವನ್ನು ಆಗಮಪುರಾಣಗಳಲ್ಲಿ ಹೇಳಿದ ರೀತಿಯಲ್ಲಿ ಹೇಳಿದೆವು.

ವೀರಾಗಮದ ಪ್ರಕಾರ ಆಚಾರ್ಯರ ಉತ್ಪತ್ತಿ ಹೀಗಿದೆ—

ಸಾಂಬಶಿವನ ಆಜ್ಞೆಯಂತೆ ಕೊಲ್ಲಿಪಾಕದ ಸೋಮನಾಥಲಿಂಗದಿಂದ ರೇವಣಪ್ರಭು ಜನಿಸಿದನು. ಸಿದ್ಧವಟಪುರದ ಜ್ಯೋತಿರ್ಲಿಂಗದಿಂದ ಮರುಳಸಿದ್ಧನುದಯಿಸಿದನು. ಮುದ್ರಾಪುರದ ಶ್ರೀರುದ್ರನ ಆಜ್ಞೆಯಿಂದ ಏಕೋರಾಮಂ ಉದ್ಭವಿಸಿದನಂ, ಗೋಕರ್ಣಗುರುವರ ಅಮರಗುಂಡದ ಮಲ್ಲಿಕಾರ್ಜುನ ಲಿಂಗದಲ್ಲಿ ಆವಿರ್ಭವಿಸಿದನು, ಕಾಶಿಯ ವಿಶ್ವೇಶಲಿಂಗದಲ್ಲಿ ವಿಶ್ವನಾಥಾರ್ಯ ಜನಿಸಿದನು.

ರೇವಣಸಿದ್ಧರು ಜನಿಸಿದ ಕೊಲ್ಲಿಪಾಕಿ ಸಿಂಗರಗೊಂಡಿತು. ಸಾಲುಬೀದಿಗಳಲ್ಲಿ ಪನ್ನೀರನ್ನು ಚಿಮುಕಿಸಿದರು. ಕುಂಕುಮದ ಸಾರಣೆ ಕತ್ತುರಿಯ ಕಾರಣೆಗಳಾದುವು. ಕನಕತೋರಣ, ಮಕರತೋರಣ, ಮುಕುರತೋರಣಗಳಿಂದ ಆ ನಗರ ರಾಜಿಸಿತಂ. ರೇವಣಸಿದ್ಧನ ಪುಷ್ಪಕೋತ್ಸವ ನಡೆಯಿತು, ದೇವದುಂದುಂಭಿಗಳು ಮೊಳಗಿದುವು. ನಕ್ಷತ್ರಗಳು ಮೂಡಿದುವೋ ಎನ್ನುವಂತೆ ಆರತಿಗಳಿದ್ದವು. ರೇವಣಸಿದ್ಧನಂ ಬರುತ್ತಿದ್ದ ಪುಷ್ಪಕದ ಮುಂದೆ ಸುವಾಸಿನಿಯರುಂ ಪನ್ನೀರನ್ನು ಚಿಮುಕಿಸಿ ರಂಗವಲ್ಲಿಯನ್ನಿಟ್ಟರು. ಪುಷ್ಪಾಂಜಲಿಗಳನ್ನು ಕೊಟ್ಟರು. ವಿಭೂತಿ ವೀಳೆಯವನ್ನು ತಂದು ರೇವಣಾರಾಧ್ಯರಿಗೆ ಶರಣರು ಎಡೆಮಾಡುತ್ತಿದ್ದರು. ಮೆರವಣಿಗೆಯಲ್ಲಿ ರೇವಣಸಿದ್ಧರು ಬಂದು ಸೋಮೇಶನಾಲಯದ ಮುಂದೆಸೆಯಲ್ಲಿ ಅಲಂಕಾರಮಾಡಿದ್ದ ಹಜಾರದಲ್ಲಿ ಮೂರ್ತಗೊಳಿಸಿದರು. ನಾನಾವಿಧವಾದ ಮಂಗಳಗೀತಗಳನ್ನು ಹಾಡಿ ನಮಸ್ಕರಿಸಿದರು. ಈ ಪುರದಲ್ಲಿ ನೆಲಸಿರೆಂದು ಭಕ್ತಾಟಗಳು ರೇವಣಸಿದ್ಧರನ್ನು ಪ್ರಾರ್ಥಿಸಿಕೊಂಡರು. ಆಗ ರೇವಣರು ಶಿವನ ನಿರೂಪವನ್ನು ಮೀರಿ ಉಳಿಯಲು ಸಾಧ್ಯವಿಲ್ಲವೆಂದು ತಿಳಿಸಿ ಎಲ್ಲರನ್ನೂ ಬೀಳ್ಕೊಟ್ಟು ಸ್ವರ್ಗಾಭಿಮುಖರಾದರು.

## ದ್ವಿತೀಯಕಾಂಡ

ರೇಣುಕಗಣೇಶನು ಸ್ವರ್ಗದಿಂದ ಹೊರಟು ಮಲಯಾಚಲವನ್ನು ತಲಪಿದನು. ಅಲ್ಲಿ ಬೇಡರ ಬಲ ಕಾಲನ ಸೇನೆಯಂತಿತ್ತು. ಶಬರಿಯರು ವನದೇವತೆಯರಂತೆ ಮೆರೆಯುತ್ತಿದ್ದರು. ಋಷಿಗಳು ಗಿರಿಯ ಕೋಡುಗಲ್ಲಿನ ಮೇಲೂ, ಬಂಡೆಗಳಮೇಲೂ ತಪಸ್ಸು ಮಾಡುತ್ತಿದ್ದರು. ಅವರ ಮಧ್ಯೆ ಅಗಸ್ತ್ಯನಿದ್ದನು. ಆತನು ವೇದದಲ್ಲಿ ಗಾಯತ್ರಿವರ್ಣ, ಮಂತ್ರಗಳಲ್ಲಿ ಶಿವಮಂತ್ರ, ದೇವತೆಗಳಲ್ಲಿ ಪರಶಿವನು ಹೇಗೋ ಹಾಗೆ ಇದ್ದನು. ಕಾವೇರಿಯ ಉಭಯ ತಟಗಳಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಿ ಪೂಜಿಸುತ್ತಿದ್ದನು. ಅಗಸ್ತ್ಯನ ಶಿಷ್ಯರು ರಜತಾಚಲಕ್ಕೆ ಹೋಗಿ ಅಲ್ಲಿ ಶಿವನಿಲ್ಲದುದನ್ನು ತಿಳಿದು ಆತನು ಎಲ್ಲಿಗೆ ಹೋದನೆಂದು ವಿಚಾರಿಸಲು ಗಣಪುಂಗವರ್ಗೆ ರಾಹಸ್ಯಾರ್ಥದಿರವನ್ನುಪದೇಶಿಸಲು ಮಂದರಾದ್ರಿಗೆ ಹೋದರು ಎಂದು ಅಲ್ಲಿನವರು ಹೇಳಿದರು. ಈ ವಿಚಾರವನ್ನು ಶಿಷ್ಯರಿಂದ ಅಗಸ್ತ್ಯರು ತಿಳಿದು ಮನಸ್ಸಿನಲ್ಲಿ ಚಿಂತೆಯನ್ನು ತಾಳಿ ಇದರ ಅಂತಸ್ಥವೇನು ಪರಮರಾಹಸ್ಯ ಎಂಬ ಹೆಸರು ಯಾರಿಂದ ಬಂದಿತು, ಇದರಲ್ಲಿ ಭೇದಾಭೇದವೇನುಂಟು ಎಂಬುದನ್ನು ಅರಿಯಲು ತಪಸ್ಸುಮಾಡತೊಡಗಿದನು. ಆಗ ಶಿವನು ನಂದಿಯಿಂದ ತನ್ನ ಚಿತ್ಕಳಾಮೂರ್ತಿಯನ್ನು ಕರೆದು ನೀನು ಭೂಲೋಕಕ್ಕೆ ಹೋಗಿ ತಪಸ್ಸನ್ನು ಮಾಡುತ್ತಿರುವ ಅಗಸ್ತ್ಯನಿಗೆ ರಹಸ್ಯವನ್ನು ಕುರಿತು ಬೋಧಿಸು ಎಂದನು. ಅದರಂತೆ ಚಂದನಗಿರಿಗೆ ಬಂದ ರೇಣುಕ ಗಣೇಶನನ್ನು ಅಗಸ್ತ್ಯನು ಸ್ವಾಗತಿಸಿದನು. ಯಮಿಗಳು ಅಂತರಿಕ್ಷದಲ್ಲಿ ಬರುವವರು ಯಾರು ಎಂದು ಪ್ರಶ್ನಿಸಿದಾಗ— "ಈ ಮೂರ್ತಿ ಅಖಿಳಾಂಡತತಿಯ ಅಂತರಾಳದೊಳು ಬೆಳಗುವ ಪರಂಜ್ಯೋತಿ, ಅಣುವಿಗೆ ಅಣು ಗುರುವಿಗೆ ಗುರು" ಎಂದು ಹೇಳಿದನು. ಕೊಲ್ಲಿಪಾಕಿಯ ಸೋಮನಾಥ ಲಿಂಗದಿಂದ ಉದಿಸಿದ ಜಗದ್ಗುರು ಭೂಲೋಕದಲ್ಲಿ ವೀರಶೈವಾಚಾರವನ್ನು ಸ್ಥಾಪಿಸುವುದಕ್ಕೆ ಬಂದಿದ್ದಾರೆ. ಈಗ ನನಗೆ ಪರಮರಾಹಸ್ಯವನ್ನು ಬೋಧಿಸುವರು ಎಂದು ಹೇಳಿದನು. ಅಗಸ್ತ್ಯನ ಮುಂದೆ ರೇವಣಸಿದ್ಧರು ಇಳಿದರು. ಆಗ ಎಲ್ಲ ಯತಿಗಳೂ ನಮಸ್ಕರಿಸಿ ರೇವಣಸಿದ್ಧರನ್ನು ಸಿಂಹಾಸನದ ಮೇಲೆ ಕೂಡಿಸಿ ಅರ್ಘ್ಯ ಪಾದ್ಯ ಆಚಮನಗಳನ್ನು ಅರ್ಪಿಸಿ ಸೇವಿಸಿ ತಮ್ಮ ಪಾಪವೆಲ್ಲ ನಿವಾರಣೆಯಾಯಿತು ಎಂದರು.

ಅಗಸ್ತ್ಯನು ರೇವಣಸಿದ್ಧರನ್ನು ಕುರಿತು ಶಿವನು ಪ್ರಮಥರಿಗೆ ಮಂದರಾದ್ರಿಯಲ್ಲಿ ಮೊದಲು ಹೇಳಿದ ಪರಮರಹಸ್ಯವನ್ನು ನಿರೂಪಿಸುವಂತೆ ಕೇಳಿಕೊಂಡನು. ಆಗ ರೇವಣಸಿದ್ಧನು ಪರಮರಹಸ್ಯಾರ್ಥವು ಅತಿ ಬಾಹುಲ್ಯವಾದುದು. ಕರಿಯಂ ಕನ್ನಡಿಯಲ್ಲಿ ಕಾಣಿಸುವಂತೆ ಅದನ್ನು ನಾನು ಬೋಧಿಸುತ್ತೇನೆ ಎಂದನು. ಕಾರಣ ಕ್ರಿಯೆ ಜ್ಞಾನ ಇಚ್ಛೆ ಇವೇ ಮೊದಲಾದ ಶಕ್ತಿಗಳಿಗೆ—ಸಚರಾಚರಾತ್ಮಚೈತನ್ಯದ್ರುಹಿಣಾಂಡತತಿಗೆ ಚಿರಶಿವ ಸದಾಶಿವೇಶ್ವರ ಸಕಲತತ್ವಕ್ಕೆ ಆಶ್ರಯವಾದ ನಿರವಯವವೆ ಸ್ಥಲ. ಮಹತತ್ವ ಮೊದಲಾದ ನಾನಾ ವಿಶೇಷವಾದ ತತ್ವನಿಶ್ಚಯಕ್ಕೆ ಉದಯಸ್ಥಾನವಾದುದರಿಂದ

ತಾನೇ ತನ್ನಲ್ಲಿ ಜನಿಸಿದ ತತ್ವಮೂರ್ತಿಗಳ ಜೇಡನಂತೆ ಲೀನಮಾಡಿಕೊಳ್ಳುವುದರಿಂದ ಜ್ಞಾನನಿಧಿಸ್ಥಲವೆಂದು ನಿರ್ವಹಿಸಲಾಯಿತು. ಪರಬ್ರಹ್ಮನೂ ಭಾಳಲೋಚನನೂ ಆದ ಪರಮೇಶನೊಬ್ಬನಲ್ಲಿಯೇ ಮುಕ್ತಿಪದ ನೆಲಸಿದೆ. ಸಂಸಾರವೆಂಬ ಶುಷ್ಕ ತರುವಿನ ಮೂಲವನ್ನು ಕಿತ್ತುಹಾಕುವುದರಿಂದ ಸ್ಥಲವೆಂದು ಹೇಳಲಾಯಿತು. ಆ ಶಿವನುಸ್ಥಲವೆಂಬ ಸ್ಥೂಲಶಬ್ದದಿಂದ ತನ್ನ ಶಕ್ತಿಯಿಂದ ಆರುತೆರನಾಯಿತು. ಸರ್ವಜ್ಞತ್ವ ನಿತ್ಯತೃಪ್ತತ್ವ ಅನಾದಿಶಿವಜ್ಞಾನ ಸರ್ವಸ್ವಾತಂತ್ರ ಸಾಮರ್ಥ್ಯತತ್ವ– ಹೀಗೆ ನಾನಾಶಕ್ತಿಗಳಿಂದ ಅನೇಕವಾದ ಪರಬ್ರಹ್ಮದ ಗುಣಗಳು ಸದಾ ಗಮಕಗೋಚರ ವಾದ ಚಿದಂಗಷಟ್ಸ್ಥಲಪದ. ಸರ್ವನಿರುಪಾಧಿಯೂ ಸರ್ವಜ್ಞನೂ ಘನಚೈತನ್ಯನೂ ಸರ್ವಕಾರಣನೂ ಆದ ಶಿವನಿಂದ ಬೇರೆಯಾದ ಸಚರಾಚರಮಯವಾದ ವಸ್ತುವು ಯಾವುದೂ ಇಲ್ಲ. ಅದು ನಿರ್ವಾಣ ಪರಬ್ರಹ್ಮಸ್ಥಲ. ಇದರಲ್ಲಿ ಲಿಂಗಸ್ಥಲವೆಂದೂ ಅಂಗಸ್ಥಲವೆಂದೂ ಎರಡು ವಿಧ. ಒಂದು ಪುಷ್ಕರವು ಘಟಭೇದದಿಂದ ಘಟಾಕಾಶ ಮಹದಾಕಾಶ ಎಂದು ಎರಡು ರೀತಿಯಾಗಿ ತೋರಿದಂತೆ ಈ ಏಕಸ್ಥಲವು ಲಿಂಗಾಂಗ ಭೇದದಿಂದ ಎರಡು ತೆರನಾಯಿತು. ಈ ಮಹಾಘನಲಿಂಗವು ಸೇವ್ಯ ಸೇವಕ ಭೇದದಂತೆ ದ್ವಿವಿಧವಾಯಿತು. ಇದನ್ನು ವಿವೇಚಿಸಿದರೆ ಸೇವ್ಯ ಲಿಂಗಸ್ಥಲವಾಯಿತು. ಸೇವಕ ಅಂಗಸ್ಥಲವಾಯಿತು. ಈ ಸ್ಥಲವೇ ಶಿವ ಜೀವ ಭೇದದಿಂದ ಸೌಮುಖ್ಯ ಲಿಂಗಾಂಗ ರೂಪವನ್ನು ತಳೆಯಿತು. ಬಳಿಕ ಚಿನ್ಮಾತ್ರವೇ ಸ್ಥಲ, ಅದಕ್ಕೆ ನೆಲೆಯಾದ ಶಿವನು ತಾನೇ ಲಿಂಗ ; ಜೀವನೇ ಅಂಗಸ್ಥಲ. ಹೇಗೆ ಈ ಸ್ಥಲ ಎರಡು ವಿಧವಾಯಿತೆಂದರೆ ಬಲವಂತ ಶಕ್ತಿಯೇ ಎರಡು ತೆರನಾಯಿತು. ಪ್ರತಿಬಂಧವಿಲ್ಲದ ಆ ಶಕ್ತಿ ಶಿವನೊಡನೆ ಬೆರೆದು ಚರಿಸುವ ಧರ್ಮವಾಯಿತು. ಆ ಶಕ್ತಿಯೇ ಶಿವ. ಅದು ಶಿವನೊಡನೆ ಸಮಾನಧರ್ಮವುಳ್ಳದ್ದರಿಂದ ಭಕ್ತರಲ್ಲಿ ಕರುಣೆ ತೋರಿ ಸ್ವಾತಂತ್ರ್ಯಸಾಮರ್ಥ್ಯದಿಂದ ವಿಭಜಿಸಲ್ಪಟ್ಟಿತು. ಅದು ನಾಶವಿಲ್ಲದಾದ್ದರಿಂದ ಎರಡು ತೆರನಾಯಿತು. ಎರಡು ಶಕ್ತಿಯೊಳಗೆ ಒಂದು ಲಿಂಗಸ್ಥಲವನ್ನೂ ಮತ್ತೊಂದು ಅಂಗಸ್ಥಲವನ್ನೂ ಹೊಂದಿತು. ಲಿಂಗಸ್ಥಲವನ್ನು ಹೊಂದಿದ ಮೂರ್ತಿ ಕಳಾಮೂರ್ತಿಯಾಯಿತು. ಅಂಗಸ್ಥಲವನ್ನು ಹೊಂದಿದ ಶಕ್ತಿ ಭಕ್ತಿಯ ಭವವನ್ನು ಕೆಡಿಸಿತು. ಆ ಶಕ್ತಿ ಅಧೋಮುಖಿಯಾಯಿತು. ಭಕ್ತಿ ಊರ್ಧ್ವಮುಖಿಯಾಯಿತು. ಈ ವಿಷಮಗತಿಯಿಂದ ಶಕ್ತಿಭಕ್ತಿಗಳೊಳಗೆ ಶಕ್ತಿಯೇ ವಿಶ್ವರೂಪವಾಯಿತು. ಆ ಶಕ್ತಿ ತಾನು ಮಾಯೆ ಎಂದಾಯಿತು. ಭಕ್ತಿ ನಿರ್ಮಾಯೆ ಎನಿಸಿತು. ಇದು ಶರಣಪದ್ಧತಿಯಾಯಿತು. ಈ ಶಕ್ತಿಯು ಪ್ರಕೃತಿ ಭಕ್ತಿಯಾಗಿ ಅಲಘುಭಾವನಿವೃತ್ತಿಯೆಂದು ಹೇಳಲ್ಪಟ್ಟಿತು. ಆ ಶಕ್ತಿಯಿಂದ ವಿಶ್ವ ಪ್ರಪಂಚ ಸಂಜನಿಸಿತು. ಬಲವಂತ ಭಕ್ತಿಯಿಂದ ಪ್ರಪಂಚದ ಸ್ಥಿತಿಯು ನಾಶವನ್ನು ಹೊಂದುವುದು. ಈ ತೆರದಿಂದಾದ ಪ್ರಮಾಣಗಳೊಳಗೆ ಯಾವುದು ಅತಿಶಯವಾದುದು ಈ ಶಕ್ತಿಭಕ್ತಿಗಳೊಳಗೆ ಶಕ್ತಿಗಿಂತ ಭಕ್ತಿಗುಣ ಅಧಿಕವಾದುದು. ಶಕ್ತಿಯ ಪ್ರಭಾವ ದಿಂದ ಸೇವ್ಯತ್ವವೂ ಭಕ್ತಿಯ ಕಾಂತಿಯಿಂದ ಸೇವಕತ್ವವೂ ಉಂಟಾಗುತ್ತವೆ. ಈ ಶಕ್ತಿ

ಭಕ್ತಿಗಳ ತಾರತಮ್ಯದ ವಿವರವೆಂತೆಂದರೆ ಆದಿಮಧ್ಯಾಂತರವಿಲ್ಲದೆ ಮಹೇಶ್ವರ ಪರಮವಾದ ನಿತ್ಯಾನಂದಮಯ ಬೋಧರೂಪವಾದ ನಿರುಪಮ ಮಹಾಲಿಂಗವೇ ತಾನು ಒಂದು ಸ್ಥಲ : ಆ ಶಕ್ತಿಯಿಂದ ಸಾಧಿಸುತ್ತ ಅದರ ಅಂತರದಂತಿರುವುದೇ ಅಂಗಸ್ಥಲ ಎಂದು ನಿಶ್ಚೈಸಬೇಕು. ಅಂಗವೆನಿಸುವ ಎರಡಕ್ಷರದ ವಿಗ್ರಹಾರ್ಥ—ಅಂ ಎಂಬ ಧಾತುವು ಶಾಬ್ದಿಕಸಮೂಹದಿಂದ ಎಣಿಕೆಗೊಂಡು ಸುಗತ್ಯರ್ಥವನ್ನು ಹೇಳುತ್ತದೆ. ಲಿಂಗತತ್ವವನ್ನು ಬಿಡದೆ ಆಶ್ರಯಿಸಲು ಅದು ತಾನೆ ಲಿಂಗ ಎಂದು ತಿಳಿದುಕೊಳ್ಳಬೇಕು. "ಲಿಗಿಗತ" ಎಂಬ ಧಾತುವೆ ಭುವನವನ್ನು ತನ್ನೊಳಗೆ ಅಡಗಿಸಿಕೊಳ್ಳುತ್ತಿದೆ. ಯೋಗವನ್ನು ಹೊಂದುತ್ತಿದೆ. ಲಿಂಗಪದವು ಪರಿಶುದ್ಧವಾದ ಘನಲಿಂಗವು ಅಂಗವನ್ನು ಆಶ್ರೈಸಿ ನೆಲಸಿದೆ. ಚಿನ್ಮಯಾಂಗವು ಲಿಂಗವನ್ನು ಹೊದ್ದಿ ಸೇರಿಕೊಂಡಿದೆ. ಲಿಂಗ ಅಂಗಗಳು ಒಂದೊಂದನ್ನು ಬಿಡದೆ ಆಶ್ರಯಿಸಿಕೊಂಡಿವೆ. ಸಕಲಮಂತ್ರಗಳೂ ಅಂಗ ಲಿಂಗದಲ್ಲಿವೆ. ಅಕಳಂಕಭರ್ಗ ಎಂಬ ಪದವು ಶಿವಲಿಂಗ ಸುಕರವಾದ ಸವಿತುರ್ ಎಂಬ ಪದವು ಜ್ಞಾನಾಂಗವಾಗುತ್ತದೆ. ಧೀಮಂತಿ ಎಂಬುದು ಮುಕುತಿಸಂಪದ. ಲಿಂಗಾಂಗವೆಂಬ ಉಭಯೈಕ್ಯಕ್ಕೆ ಮುಕುರಪ್ರಾಯವಾಗಿರುವ ಮಂತ್ರಮಾತೆಯೊಳಗೆ ಅಖಿಳ ಮಂತ್ರಗಳು ಅಡಗಿರುವುವು. ಅದರಿಂದ ಗಾಯತ್ರಿ ಲಿಂಗಾಂಗ ಸಂಗಮಯವಾಗಿರುತ್ತದೆ.

ಅಖಿಳತತ್ವ ಬ್ರಹ್ಮಾಂಡಗಳ ಮೊತ್ತವು ಚರಜಾಲ. ಆ ಚರಜಾಲಗಳು ತತ್ವಮಸಿ ಎಂಬ ಸುಪದತ್ರಯವ ಹೊಂದಿವೆ. ಇದೇ ಮಹಾಲಿಂಗಮಯ. ವಿಸ್ತಾರವಾದ ತ್ವಂಪದವನಂಗಸ್ಥಲ. ಈ ಎರಡರ ಐಕ್ಯವು ಅಸಿ ಪದ ಸತ್ತು ಚಿತ್ತು ಪ್ರಮೋದ ಇವರ ಕೂಟವೇ ಮಹಾಲಿಂಗಾಂಗ ಸಂಬಂಧ. ಅಖಿಳಬ್ರಹ್ಮಾಂಡದ ನಿಯಾಮಕನಾದ ಶಿವನೇ ಲಿಂಗಸ್ಥಲ. ಸಚರಾಚರಾತ್ಮ ಪ್ರಪಂಚವೇ ಅಂಗಸ್ಥಲ. ಶರಣಮತಕ್ಕೆ ಲೀನವಾಗುವ ವಿಶ್ವಮಾಯಾಮಯದ ರಚನೆಗೆ ಅನೂನವಾದ ಲಯಕಾರಣ ಸ್ಥಲವೆ ಸಂಬಂಧ ಎಂದು ನಮ್ಮಸುಜ್ಞಾನ ಸಂಪನ್ನರು ಇದನ್ನು ಅರಿತಿದ್ದಾರೆ. ಅಂಗವೇ ಶಕ್ತಿ. ಆ ಶಕ್ತಿಯುಳ್ಳ ಶಿವನು ಲಿಂಗೈಕ್ಯಸಮರಸಜ್ಞಾನ. ಲಿಂಗವೇ ಶಿವನಂ. ಭವಾನಿಯೇ ಅಂಗ. ಈ ಉಭಯದ ಸಂಗಸಮರಸ ಸದಾನಂದ ಸಂಗತಿಯು ಮಂಗಳದ ಸಂಬಂಧ ಎಂದು ತಿಳಿಯುವುದು. ಈ ಲಿಂಗಾಂಗ ಸಂಗಗಳನ್ನು ನಿರೂಪಿಸಲು ಶ್ರುತಿತತಿಗೂ ಅಗೋಚರ. ಶಿವಲಿಂಗಸ್ಥಲವು ತನ್ನ ಶಕ್ತಿಯಿಂದ ವಿವಿಧವಾಗುತ್ತದೆ. ಇದು ಹೇಗೆ ಆಗುತ್ತದೆಯೋ ಹಾಗೇ ಅಂಗಸ್ಥಲವು ಸವಿಶೇಷವಾಗುತ್ತದೆ. ತನ್ನ ಭಕ್ತಿಭಾವದಿಂದ ಯಾವ ಯಾವ ಲಿಂಗಸ್ಥಲವು ಅವಿರತವಾದ ಶಕ್ತಿಯಿಂದ ಪ್ರತ್ಯೇಕ ಶಿವನಾಗುವನು. ನಿನ್ನ ಭಕ್ತಿಯಿಂದ ಅಂಗಸ್ಥಲವು ಪ್ರತ್ಯಕ್ಷದ ಆತ್ಮನಾಗುತ್ತಾನೆ. ಶಕ್ತಿಯುಳ್ಳ ಶಿವನು ಸೇವ್ಯನಾದುದರಿಂದ ವ್ಯಕ್ತವಾದ ಯಾವ ಯಾವ ರೂಪವನ್ನು ಭಕ್ತಿಯುಳ್ಳ ಆತ್ಮನು ಧರಿಸುತ್ತಾನೋ ಅವನು ಉಪಾಸಕನೆ ಆಗುತ್ತಾನೆ. ಆಯಾಯ ರೂಪವನ್ನು ಯುಕ್ತಿಯಿಂದ ಧರಿಸುತ್ತಾನೆ. ಮಹೇಶ್ವರನು ಶಕ್ತಿಯಿಂದ ಪೂಜ್ಯನಾದುದರಿಂದ ಯಾವ ಯಾವ ವ್ಯಕ್ತಿಯ ಆಕಾರವನ್ನು ಜೀವ ತಳೆಯುತ್ತಾನೋ ಅವನು ಪೂಜಕನೆನಿಸುತ್ತಾನೆ. ಉಪಾಸ್ಯ ಉಪಾಸಕ

ರೆಂದು ಪೂಜ್ಯಪೂಜಕರೆಂದು ಸಾಧ್ಯಸಾಧಕರೆಂದು ಗುರುಶಿಷ್ಯರೆಂದು ಶಿವಜೀವರೆಂದು ನಾನಾ ರೀತಿಯ ಹೆಸರುಗಳನ್ನು ಪಡೆದು ಆ ಲಿಂಗಸ್ಥಲ ಅಂಗಸ್ಥಲಗಳು ತೋರುತ್ತವೆ. ಲಿಂಗಸ್ಥಲ ಒಂದೇ ಮೂರುತೆರನಾಯಿತು. ಮೊದಲನೆಯದು ಭಾವಲಿಂಗಸ್ಥಲ, ಎರಡನೆಯದು ಪ್ರಾಣಲಿಂಗಸ್ಥಲ, ಮೂರನೆಯದು ಇಷ್ಟಲಿಂಗಸ್ಥಲ. ಈ ಮೂರು ವಿಧದಲ್ಲಿ ಭಾವಲಿಂಗವು ಸತತ ಶಿವಭಾವದಿಂದ ಗ್ರಹಿಸಬೇಕಾದುದು. ಅದು ಪರಾತ್ಪರವೂ ನಿರವಯವೂ ಆಗಿರುವುದು. ಸರ್ವತೋಧಿಕವಾಗಿ ಅನವರತವೂ ಉಂಟು. ಇದಕ್ಕೆ ಚಿನ್ಮಯ ಜ್ಞಾನಲಿಂಗ, ತೃಪ್ತಿಲಿಂಗ, ನಿಷ್ಕಲಲಿಂಗ, ನಿರವಯಲಿಂಗ, ಆತ್ಮಲಿಂಗ ಎಂಬ ಪರ್ಯಾಯ ನಾಮಗಳಿವೆ. ಇದು ಲಿಂಗಲಕ್ಷಣ. ಇದು ತುಂಬ ವಿಸ್ತಾರವಾದುದು. ಸೂಕ್ಷ್ಮದಲ್ಲಿ ಹೇಳಿದ್ದೇನೆ ಎಂದನು ಸಿದ್ಧ.

ಚೈತನ್ಯವು ಪ್ರಾಣಗಳಲ್ಲಿ ಮನದಲ್ಲಿ ಜ್ಯೋತಿರ್ಮಯ ಲಿಂಗವಾಗಿ ಬೆಳಗುತ್ತದೆ—ಲಿಂಗಮನೋಗ್ರಾಹ್ಯಂ ಎಂದು ವೇದವು ಹೇಳುತ್ತಿದೆ. ಇದು ನಿಷ್ಕಲಲಿಂಗವೆಂದೂ ಕ್ರಿಯೆಗೆ ಅತೀತವಾದ ಸೂಕ್ಷ್ಮಪ್ರಾಣಲಿಂಗವೆಂದೂ ಪರ್ಯಾಯನಾಮಗಳನ್ನು ಹೊಂದಿರುತ್ತದೆ. ಇಷ್ಟಲಿಂಗವು ಇಷ್ಟಾರ್ಥಸಿದ್ಧಿ ಪ್ರಧಾನವಾಗಿ ಅನಿಷ್ಟಕರ್ಮಗಳನ್ನು ಕೆಡಿಸುತ್ತ ಕ್ರಿಯಾಲಿಂಗ, ಕಾರ್ಮಿಕಲಿಂಗ, ಸದ್ಭಕ್ತಿಪದಲಿಂಗ, ಆಚಾರಲಿಂಗ ಮುಂತಾದ ಹೆಸರುಗಳಿಂದ ಪ್ರಸಿದ್ಧವಾಗಿದೆ. ತನ್ನ ನಂಬಿದ ಭಕ್ತರಿಗೆ ಇಷ್ಟವಾದ ಉನ್ನತೋತ್ಸವವನ್ನು ಸರ್ವತ್ರ ಕೊಡುವುದರಿಂದ ಅಥರ್ವಣವೇದ ಇಷ್ಟಲಿಂಗವೆಂದು ಕೊಂಡಾಡುತ್ತಿದೆ. ಇದು ಜ್ಯೋತಿರ್ಲಿಂಗದ ಸ್ಥಳ ಕುಳಿಕೆ ಮೂಲಲಿಂಗ. ಯಾವುದಾದರೂ ಒಂದು ನಿರ್ಗುಣ ಭಾವಲಿಂಗವು ತನ್ನೊಡನೆ ಬೆರೆದುದೇ ಪ್ರಾಣಲಿಂಗ. ಅತ್ಯಧಿಕರೂಪವನ್ನು ಹೊಂದಿದುದೇ ಇಷ್ಟಲಿಂಗ. ಈ ತ್ರಿವಿಧರೂಪವನ್ನು ತಿಳಿ. ಭಾವಲಿಂಗ ಪರಮತತ್ವ ; ಪ್ರಾಣಲಿಂಗ ಸೂಕ್ಷ್ಮತತ್ವ ; ಇಷ್ಟಲಿಂಗ ಸ್ಥೂಲತತ್ವ. ಒಂದೊಂದು ಲಿಂಗಸ್ಥಲವು ಎರಡು ಭೇದಗಳಾಗಿವೆ. ಇದರೊಡನೆ ಕೂಡಿದ ಭಾವಲಿಂಗಸ್ಥಲವು ದ್ವಿವಿಧವಾಯಿತು. ಪ್ರಾಣಲಿಂಗಸ್ಥಲವು ಉಭಯವಾಯಿತು. ಇಷ್ಟಲಿಂಗಸ್ಥಲವು ಎರಡು ತೆರನಾದುದು. ಭಾವಲಿಂಗವು ಮಹಾಲಿಂಗ ಪ್ರಸಾದಲಿಂಗ ಎಂದು ಎರಡು ಬಗೆಯಾಯಿತು. ಪ್ರಾಣಲಿಂಗವು ಚರಲಿಂಗ ಶಿವಲಿಂಗ ಎಂದಾಯಿತು. ಆಚಾರಲಿಂಗ ಗುರುಲಿಂಗವೆಂದೂ ಇಷ್ಟಲಿಂಗವೆಂದೂ ಇತ್ತೆರನಾಯಿತು. ಸೂಕ್ಷ್ಮಾರ್ಥವನ್ನು ಬಲ್ಲ ಜ್ಞಾನಿಗಳೂ ಮತಿವಂತರೂ ಅಂಗ ಮೂರುತೆರನೆಂದು ಹೇಳಿದ್ದಾರೆ. ಅವು ಯೋಗಾಂಗಸ್ಥಲ, ಭೋಗಾಂಗಸ್ಥಲ, ತ್ಯಾಗಾಂಗಸ್ಥಲ. ಇವುಗಳ ತಾತ್ಪರ್ಯವಿವರವಿದು. ಶಿವಯೋಗದ ಮಹಾಸುಖ ಪ್ರಾಪ್ತಿಯೇ ಯೋಗಾಂಗ ; ಯಾವಾಗಲೂ ಶಿವನೊಡನೆ ಕೂಡಿ ಭೋಗಿಸುವುದರಿಂದ ಭೋಗಾಂಗ, ಸಂಸಾರಭ್ರಾಂತಿಯನ್ನು ತ್ಯಜಿಸುವುದೇ ತ್ಯಾಗಾಂಗ. ಯೋಗಾಂಗ ಎಂದರೆ ಮಹಾಕಾರಣ ಶರೀರ ; ಭೋಗಾಂಗವೆಂದರೆ ಸೂಕ್ಷ್ಮದೇಹ. ತ್ಯಾಗಾಂಗವು ಸ್ಥೂಲವಿಗ್ರಹ. ಯೋಗಾಂಗವು ಐಕ್ಯ, ಶರಣ ಎಂಬುದಾಗಿಯೂ, ಭೋಗಾಂಗವು ಪ್ರಾಣಲಿಂಗಿ ಪ್ರಸಾದಿ ಎಂದೂ ತ್ಯಾಗಾಂಗವು ಭಕ್ತ ಮಾಹೇಶ್ವರ ಎಂಬು

ದಾಗಿ ಎರಡೆರಡು ವಿಧವಾದುವು. ಈ ಮೂರು ಅಂಗಗಳು ಎರಡೆರಡಾಗಿ ಭಕ್ತ, ಶಾಂತ, ಪ್ರಾಣಲಿಂಗಿ, ಪ್ರಸಾದಿ, ಶರಣ, ಐಕ್ಯ ಎಂದು ಎಣಿಕೆಗೊಂಡವು. ಅಂಗಸ್ಥಲದಲ್ಲಿ ಸದ್ಭಕ್ತಿ ಸ್ಥಿರವಾಗಿ ನೆಲಸಿದೆ. ಸಂಸ್ಕೃತಿಸಂಗ ವಿಲಯವಾಗುವುದು ಭುವನಸ್ಥಲ. ಇದು ಮಹಾ ಸ್ಥಲ. ಸ್ಥಲಮೆಂಬ ಶಬ್ದದ ಅವಯವಾರ್ಥವನ್ನು ಬಲ್ಲ ಜ್ಞಾನಿಗಳು ಅಂಗಸ್ಥಲವು ಸ್ಥಲವೆಂದು ವಿವರಿಸಿದ್ದಾರೆ. ಈಗ ಹೇಳಿದ ಭಕ್ತಿಷಟ್ಸ್ಥಲದಲ್ಲಿ ಪ್ರವೇಶಿಸಿ ಆರು ತೆರದ ರೂಪಾಗಿ ಅದರ ಸೋಪಾಧಿ ಭೇದದಿಂದ ಆಯಾ ನಾಮವನ್ನು ಧರಿಸಿ ಸಮರಸ ಘನಾನಂದವೆಂದಾಗಿ ಅನುಭವ ಸಾವಧಾನ ನಿಷ್ಠೆ ಶ್ರದ್ಧೆ ಎಂದು ಪದಪೂರ್ಣದಿಂದ ಆರು ರೀತಿ ಎಂದು ಹೇಳಲ್ಪಡುತ್ತಿದೆ.

ಅಷ್ಟವಿಧ ಕೀಲಂಗಗಳು ಪಾದಂಗಲಿಂಗ ಶಕ್ತಿ ಭಕ್ತಿ ಬಲವಾದಮುಖ ಹಸ್ತ ಪದಾರ್ಥ ಪೂಜಕ ಎಂದು.

ಅಷ್ಟವಿಧ ಸ್ಥಲಗಳು ಒಂದೊಂದೇ ಬೇರೆಬೇರೆಯಾಗಿ ಷಡ್ವಿಧಸ್ಥಲಗಳೆಂಬ ಸಂಜ್ಞೆಯನ್ನು ತಾಳಿದುವು. ಅಷ್ಟವಿಧ ಕೀಲಕದ ರೀತಿ—ಅಂಗಲಿಂಗ ಇವೆರಡೂ ಎರಡು ರೀತಿಯಾಗುತ್ತವೆ. ಶಕ್ತಿ ಭಕ್ತಿ ವದನ ಕರ ಸದರ್ಪಣ ಪ್ರಸಾದಿ ಎಂದು ಕೀಲಕಗಳು ಎಂಟು ತೆರನಾಗಿವೆ. ಧರಣಿಯೇ ಭಕ್ತನ ಅಂಗ, ಸುಚಿತ್ತವೇ ಕರ, ಆಚಾರವೇ ಲಿಂಗ ಘ್ರಾಣವೇ ಮುಖ, ಕ್ರಿಯಾಶಕ್ತಿ, ಸದ್ಭಕ್ತಿ ಗಂಧದ್ರವ್ಯ ಶೇಷಕನೆ ಭಕ್ತ. ಚಿರವಿಧದ ಮಹೇಶವಾರಿಯೆ ಅಂಗ. ಸುಸ್ಥಿರ ಬುದ್ಧಿ ಹಸ್ತ. ಗುರುಲಿಂಗಮುಖ ರಸನೆ ಭಕ್ತಿನಿಷ್ಠೆ ರಸದ್ರವ್ಯಶೇಷ, ಜ್ಞಾನಶಕ್ತಿ ಹೀಗೆ ಅಷ್ಟರೂಪ. ಜಾತವೇದಾಂಗ ನಿರಹಂಕಾರನೇ ಅಮಳ ಖ್ಯಾತಲಿಂಗ ; ನೇತ್ರವದನ ಇಚ್ಛೆ ಶಕ್ತಿ ಸಂಭೂತಾವಧಾನವೇ ಭಕ್ತಿರೂಪ, ದ್ರವ್ಯಪ್ರಸಾದಿ ಭಕ್ತ. ವಾತಾಂಗ ಚಿತ್ತ ಹಸ್ತ ಮಹಾಚರಲಿಂಗ ಆತ್ಮಕ್ಕೆ ಮುಖ. ಆದಿ ಶಕ್ತಿಯನುಭವ ಭಕ್ತಿ. ಜಾತಸಂಸ್ಪರ್ಶನ ದ್ರವ್ಯ. ಪ್ರಾಣಲಿಂಗಿಯೆ ಭಕ್ತನಾಗುವನು.

ಸುರವರ್ತ್ಮದೇಹ ಸುಜ್ಞಾನಕರ ಶ್ರೋತ್ರಮುಖ ಚರಮೂರ್ತಿಲಿಂಗ ಆನಂದ ಭಕ್ತಿ ಸುಶಕ್ತಿ ಪರನಿನದದ್ರವ್ಯ. ಅದೇ ಶೇಷ—ಇವು ಶರಣಾಷ್ಟವಿಧ ಕೀಲಗಳು. ಆತ್ಮ ಅಂಗ, ಸದ್ಭಾವಕರಮಾಲಿಂಗ ಹೃನ್ಮುಖ, ಸಮರಸ ಭಕ್ತಿ ಚಿಚ್ಛಕ್ತಿ ಸಂತೃಪ್ತಿ ದ್ರವ್ಯ ಶೇಷ ಐಕ್ಯ ಹೀಗೆ ಎಂಟು ರೀತಿಯಾದ ಕೀಲಕವನ್ನು ತಿಳಿ. ಸೂಕ್ಷ್ಮ ಷಟ್ಸ್ಥಲಗಳನ್ನು ಸ್ಥಿರಚಿತ್ತನಾಗಿ ಶ್ರದ್ಧೆಯಿಂದ ಆಲಿಸು. ಗದ್ದುಗೆಯ ಮೇಲೆ ಮಂಡಿಸಿ ಭಸ್ಮ ರುದ್ರಾಕ್ಷಿಯಿಂದ ಪೂತಾತ್ಮನಾಗಲು ಭಕ್ತನು ಮೂಲಮಂತ್ರವನ್ನು ನಿಷ್ಠೆಯಿಂದ ಸ್ಮರಿಸಲು ಮಾಹೇಶ್ವರಲಿಂಗವನ್ನು ಸಾವಧಾನವಾಗಿ ಹಸ್ತಕ್ಕೆ ಬರುವಂತೆ ಮಾಡಲು ಅದು ಪ್ರಸಾದಿಸ್ಥಲ. ಆ ಲಿಂಗವನ್ನು ಅನುಭಾವಭಕ್ತಿಯಿಂದ ಭಜಿಸಿದರೆ ಅದು ಪ್ರಾಣಲಿಂಗಿ ಸ್ಥಲ. ಮತ್ತೆ ಆ ಲಿಂಗಕ್ಕೆ ಆನಂದಭಕ್ತಿಯಿಂದ ಅಖಿಳದ್ರವ್ಯಗಳನ್ನು ಅರ್ಪಿಸಿದರೆ ಶರಣಸ್ಥಲ. ಆ ಲಿಂಗಶೇಷವನ್ನು ಸ್ವೀಕರಿಸಿದರೆ ಐಕ್ಯಸ್ಥಲವಾಗುತ್ತದೆ. ಇದು ವೀರ ಶೈವಾರ್ಚನಾ ಕ್ರಮ.

ಯಾವಾಗಲೂ ಶಿವನಲ್ಲಿ ಬಹಳ ಭಕ್ತಿಭಾವವುಳ್ಳವನಾಗಿ ಲಿಂಗಜಂಗಮವನ್ನು

ಏಕಭಾವದಿಂದ ಪೂಜಿಸುತ್ತ ದಾಸೋಹವನ್ನು ಮಾಡುತ್ತ ಲಾಂಛನಕ್ಕೆ ಶರಣೆನುತ್ತ, ಕಿಂಕರತೆಯ ರೀತಿಯನ್ನು ತಿಳಿದುಕೊಂಡು ಆಚಾರ ವ್ರತ ನಿಯಮವನ್ನು ಆಚರಿಸುತ್ತ ಊರಿಗೆ ಬರದೆ ಬಾಳುವವನು ಭಕ್ತನೆನಿಸಿಕೊಳ್ಳುತ್ತಾನೆ. ಗುರುಲಿಂಗಜಂಗಮದಲ್ಲಿ ಆಸ್ತಿಕಬುದ್ಧಿಯುಳ್ಳವನಾಗಿ ಪರಧನ ಪರಸತಿ ಪರದೈವಗಳ ಆಸೆಯನ್ನು ತ್ಯಜಿಸಿ ವೀರವ್ರತ ನಿಯಮವನ್ನು ಆಚರಿಸುತ್ತ ಸತ್ಯ ಧರ್ಮ ಶೌಚ ಮುಂತಾದ ಸಲ್ಲಕ್ಷಣಗಳಿಂದ ಲಿಂಗನಿಷ್ಠೆ ಬಲಿತು ಅನ್ಯದೈವ ನಿರಾಕರಣೆಗೈವುದು ಮಾಹೇಶ್ವರಸ್ಥಲ. ಅಹಂಕಾರ ವನ್ನು ಬಿಟ್ಟು ಇಂದ್ರಿಯ ವಿಷಯವಾಸನೆಗಳನ್ನು ತೊರೆದು ಗುರುಲಿಂಗಜಂಗಮಕ್ಕೆ ಸಕಲ ದ್ರವ್ಯಾದಿ ವಸ್ತುಗಳನ್ನು ಸಲ್ಲಿಸುತ್ತ, ಪ್ರಸಾದವನ್ನು ಸೇವಿಸುತ್ತ ಮನಸ್ಸು ಒಲಿ ದದ್ದೇ ಪ್ರಸಾದಿ ಸ್ಥಲ. ಪ್ರಾಣಗುಣವೆಲ್ಲ ಲಿಂಗಗುಣವಾಗಿ, ಪ್ರಾಣಲಿಂಗವೂ ಪ್ರಾಣವೂ ಏಕರಸವಾಗಿ ಪ್ರಾಣೇಂದ್ರಿಯಗಳ ದುರ್ಗುಣಗಳನ್ನು ನೀಗಿ, ಮನವನ್ನು ಲಿಂಗದಲ್ಲಿ ಸ್ಥಿರವಾಗಿ ನಿಲ್ಲಿಸಿ ಸುಖ ದುಃಖವನ್ನು ಕ್ಷೀಣಗೊಳಿಸುವುದೇ ಪ್ರಾಣಲಿಂಗಿಸ್ಥಲ.

ಶರಣಸತಿ ಲಿಂಗಪತಿ ಭಾವದಿಂದ ಜ್ಞಾನೇಂದ್ರಿಯಗಳನ್ನು ಲಿಂಗದೊಳಗೆ ಲೀನ ಗೊಳಿಸಿ ಪಂಚೇಂದ್ರಿಯಗಳ ಪ್ರಪಂಚವನ್ನುಳಿದು, ಅವಿರಳವಾದ ಜ್ಞಾನದಿಂದ ಹರ ನೊರ್ವನೇ ಶ್ರೇಷ್ಠ ಉಳಿದುವೆಲ್ಲ ಅನಿತ್ಯವೆಂದು ಭಾವಿಸಿ ಆನಂದಭಾವದಲ್ಲಿ ಕೂಡಿರು ವುದೇ ಶರಣಸ್ಥಲ.

ನಾನು ನೀನೆಂಬ ಪ್ರಕೃತಿಭಾವವನ್ನುಳಿದು ಷಡ್ವರ್ಗಹೀನದೇಹೇಂದ್ರಿಯಾಂತಃ ಕರಣದ ಕೂರ್ಮೆಯನ್ನು ಕಳೆದು ಸಮರಸಭಕ್ತಿಯಿಂದ ಅಷ್ಟವಿಧಪೂಜೆ, ಧ್ಯಾನ ಮೌನಾದಿಗಳ ಭ್ರಮೆಯನ್ನು ತ್ಯಜಿಸಿ ನಷ್ಟಲಿಂಗದಲ್ಲಿ ಕರ್ಪೂರ ಅಗ್ನಿಯನ್ನು ಬೆರೆದ ರೀತಿಯಿಂದಿರುವುದೇ ಐಕ್ಯಸ್ಥಲ.

ಈ ಹಿಂದೆ ಹೇಳಿದ ಲಿಂಗಾಂಗಮಯ ಸ್ಥಲ ಷಡ್ವಿಧಗಳ ಸರ್ವಾಚಾರ ಸಂಪ ತ್ತನ್ನು ಹೇಳುತ್ತೇನೆ. ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಚರಲಿಂಗ, ಪ್ರಸಾದ ಲಿಂಗ, ಮಹಾಲಿಂಗ—ಇವರಲ್ಲಿ ಸೇರಿದ ಮೊದಲ ಲಿಂಗವು ನಿಯತಗಣ ಎಂಬ ತ್ರಿತ್ವ ವನ್ನು ಪಡೆಯುತ್ತದೆ.

ಶರಣರೆಲ್ಲ ಅಹುದು ಎಂಬುದೇ ಸದಾಚಾರ. ಶೀಲಗಳನ್ನು ನಡೆಸುವುದೇ ನಿಯತಾಚಾರ. ಹರನಿಂದೆಯನ್ನು ಕೇಳದಿರುವುದೇ ಗಣಾಚಾರ. ಈ ರೀತಿ ಗುರು ಲಿಂಗ ದೀಕ್ಷೆ ಶಿಕ್ಷೆ ಅನುಭವವೆಂದು ಮೂರು ತೆರ. ಕ್ರಿಯಾರೂಪದಿಂದ ದೋಷಗಳನ್ನು ನಿವಾರಿಸಿ ಶಿವಾರ್ಥವನ್ನು ಚಿತ್ತವೃತ್ತಿಗೆ ಹತ್ತಿಸುತ್ತದೆ.

ಇಷ್ಟ ಪ್ರಾಣಭಾವವೆಂದು ಶಿವಲಿಂಗವು ಮೂರುವಿಧ ಎಂದು ಆಚಾರ್ಯರು ಉಪದೇಶಿಸಿದರು. ತವಕದಿಂದ ಹಸ್ತಕ್ಕೆ ಕೊಟ್ಟ ವಸ್ತುವೆ ಇಷ್ಟಲಿಂಗ. ದೇಹಗುಣ ಅಂಟದೆ ಇರುವುದೇ ಸವಿಶೇಷ ಪ್ರಾಣಲಿಂಗ. ತ್ರಿವಿಧಕಾಲಗಳಲ್ಲಿಯೂ ಭವನಲ್ಲದೆ ಅನ್ಯ ವನ್ನು ಅರಿಯದಿರುವುದೇ ತೃಪ್ತಿಲಿಂಗ. ಚರಲಿಂಗವು ಮೂರು ತೆರ. ಇವು ಸ್ವಯ ಚರ ಪರವು. ಚರ ಎಂದರೆ ಲಾಂಛನವೇ ಮುಂತಾಗಿ ಚರಿಸುವುದು. ಪರ ಎಂದರೆ

ಅರಿವು. ಭರದಿಂದ ಸಂಚರಿಸುವುದು ಶೇಷಲಿಂಗ ಈ ತೆರದ ತ್ರಿವಿಧವು. ಶುದ್ಧ ಸಿದ್ಧ ಪ್ರಸಿದ್ಧದ ವಿವರವನ್ನು ಗುರುಮುಖದಿಂದ ಅರಿಯಬೇಕು. ಮಲತ್ರಯವನ್ನು ನಾಶ ಮಾಡಿ ಉಳಿದ ಶೇಷವೇ ಶುದ್ಧವೆನಿಸುವುದು. ಸಿದ್ಧವೆಂದರೆ ಲಿಂಗಮುಖದಿಂದ ಮೂಲಕರಣಗಳ ಸಂಪರ್ಕವನ್ನು ನಾಶಮಾಡಿದುದು. ಪ್ರಸಿದ್ಧವೆಂದರೆ ಜಂಗಮದ ಬೋಧೆಯಿಂದ ಈಶಚೈತನ್ಯವನ್ನು ಆಲೋಕಿಸುತ್ತ ಅಖಂಡಿತವನ್ನು ಅಳಿದು ನಿಂದುದೇ ಪ್ರಸಾದಲಿಂಗಸ್ಥಲ. ಇದು ಮೂರು ವಿಧ. ಪಿಂಡಜ, ಅಂಡಜ, ಬಿಂದುಜ. ಪಿಂಡಜವು ಘಟಾಕಾಶ. ಅಂಡಜವು ಖಂಡದ್ರುಹಿಣ. ಅಂಡಮದು ಬಿಂದುಜ. ಲಿಂಗ ಪಟ್ಟಸ್ಥಲಕೆ ಹದಿನೆಂಟು ಗೋಪ್ಯಸ್ಥಲಗಳನ್ನು ಮಹಾಗಗನ ಮಂಡನದಿ ಪೇಳ್ದಿವು. ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳಲ್ಲಿ ಭಕ್ತಸ್ಥಲ ಮೂರು ವಿಧವಾಗಿರುವುದು. ಗುರುಭಕ್ತಿ ಲಿಂಗಭಕ್ತಿ ಜಂಗಮಭಕ್ತಿಯ ರೀತಿಯನ್ನು ಹೇಳುತ್ತೇನೆ. ತನುಕ್ರಿಯೆಯಿಂದ ತನು ಮನ ಕರಣಗಳನ್ನು ಅರ್ಪಿಸುವುದು ಗುರುಭಕ್ತಿ. ಮನಸ್ಸಿನಿಂದ ತನು ಮನ ಧನವನ್ನು ಕೊಡುವುದೇ ಹರಭಕ್ತಿ. ಧನದ ಮೂಲದಿಂದ ತನು ಮನ ಧನವನ್ನು ಅರ್ಪಿಸುವುದೇ ಜಂಗಮ ಭಕ್ತಿ.

ಮಹೇಶ್ವರನು ತ್ರಿವಿಧ. ಬೇಧ ಭೇದ್ಯತತ್ವ, ಇಹಲೋಕ ವೀರ, ಪರಲೋಕ ವೀರ. ಎಲ್ಲ ದರ್ಶನಗಳನ್ನು ನೀಕರಿಸಿ ತನ್ನ ಸಮಯಕ್ಕೆ ದೇಹ ಪ್ರಾಣ ಅರ್ಥವನ್ನು ಮೆಚ್ಚಿಸುವವನು ಯಾವನೋ ಅವನು ಲೋಕವೀರ. ದೇವಲೋಕದ ಶಿವಗಣಗಳು ಅಹುದು ಎನ್ನಲು ಸಂಸಾರಸಂಗವನ್ನು ತ್ಯಜಿಸಿ ದೇವಲೋಕದ ನಾಲ್ಕು ಪದಗಳ ಫಲಗಳನ್ನು ಬಿಡುವವನೇ ಪರಲೋಕವೀರ. ಲಿಂಗಸಂಗದಿಂದ ಅಂಗಮುಖ ಮೊದಲಾದ ಎಲ್ಲ ಕರಣಗಳೂ ಶಿವನೊಳಗೆ ಸನ್ನಿಹಿತವಾಗಿರುವವನೇ ಲಿಂಗವೀರ.

ಪ್ರಸಾದಿಸ್ಥಲ ಮೂರು ವಿಧ. ಅರ್ಪಿತ ಪ್ರಸಾದಿ, ಉನ್ನತ ಪ್ರಸಾದಿ, ಪರಿಣಾಮ ಪ್ರಸಾದಿ. ಪ್ರತಿದಿನವೂ ಸಕಲದ್ರವ್ಯಗಳನ್ನು ಇಷ್ಟಲಿಂಗಕ್ಕೆ ಕೊಟ್ಟು ಆನಂದದಿಂದಿರುವವನೇ ಅರ್ಪಿತಪ್ರಸಾದಿ. ಪಂಚೇಂದ್ರಿಯಗಳಲ್ಲಿ ಪಂಚವಿಧಲಿಂಗವನ್ನು ಪ್ರತಿಷ್ಠೆಮಾಡಿ ಅಖಿಳಸುಖವನ್ನು ಮನದಲ್ಲಿ ಕೊಟ್ಟು ಕೊಳ್ಳುವವನೆ ಸುಪ್ರಸಾದಿ. ಮೋಹಸಂಬಂಧನ್ನ ದೇಹಾಶ್ರಯಗಳು ನಾಶವಾಗಿ ಲಿಂಗತ್ರಯವು ಭಾವದಲ್ಲಿ ನಿಶ್ಚಲವಾಗಿ ಉಳ್ಳವನೆ ಪರಿಣಾಮ ಪ್ರಸಾದಿ.

ಪ್ರಾಣಲಿಂಗಿಸ್ಥಲವು ತ್ರಿವಿಧ. ಅವು ಆಚಾರಪ್ರಾಣಿ, ಲಿಂಗಪ್ರಾಣಿ, ಜಂಗಮ ಪ್ರಾಣಿ. ತನು ಚಿತ್ತ ವಾಕ್ಯಂಗಳೊಳಗೆ ಪ್ರತಿಜ್ಞೆಮಾಡಿ ಆಚಾರವನ್ನು ನಿರ್ವಹಿಸುವವನೆ ಆಚಾರಪ್ರಾಣಿ. ಬಾಹ್ಯಕರಣಗಳನ್ನು ಮರೆತು ಪ್ರಾಣಲಿಂಗಕ್ಕೆ ಪೂಜೆಮಾಡುವವನೇ ಲಿಂಗಪ್ರಾಣಿ. ಬಾಹ್ಯಭಕ್ತಿಯನ್ನು ಮರೆತು ಜಂಗಮಕ್ಕೆ ತನು ಮನ ಪ್ರಾಣಗಳ ಸಮರ್ಪಿಸುವವನೇ ಜಂಗಮಪ್ರಾಣಿ. ಶರಣಸ್ಥಲ ಮೂರು ವಿಧ. ಇಷ್ಟಲಿಂಗಾರ್ಚಕ, ಪ್ರಾಣಲಿಂಗಾರ್ಚಕ, ತೃಪ್ತಿಲಿಂಗಾರ್ಚಕ.

ತನಗೆ ನಷ್ಟವೂ ಅನಿಷ್ಟವೂ ಉಂಟಾಗಲು ಆನಂದದಿಂದಿರುವವನೇ

ಇಷ್ಟಲಿಂಗಾರ್ಚಕ. ತನ್ನದು ಇತರರದು ಎಂಬ ಭಾವವನ್ನು ನೆನೆಯದಿರುವವನೇ ಪ್ರಾಣಲಿಂಗಾರ್ಚಕ. ಇಹಪರ ,ಭೋಗ, ಮೋಕ್ಷಗಳನ್ನು ಮನದೊಳಗೆ ಅರಿಯದವನೇ ತೃಪ್ತಿಲಿಂಗಾರ್ಚಕ. ಐಕ್ಯಸ್ಥಲವು ಮೂರು ವಿಧ. ಕಾಯ, ಜೀವ, ಭಾವ–ಇವುಗಳು ಲಿಂಗೈಕ್ಯತೆಯನ್ನು ಹೊಂದಿತೋರುವಂತೆ.

ಕಾಯದ ಕ್ರಿಯಾಕಾರವನ್ನು ಮರೆತರೆ ಕಾಯಲಿಂಗೈಕ್ಯ. ಅನುಭಾವವನ್ನು ಮರೆದವನೆ ಜೀವಲಿಂಗೈಕ್ಯ. ಜಗದ ತೋರ್ಕೆಯನ್ನು ಕಾಣಂವವನೆ ಭಾವಲಿಂಗೈಕ್ಯ. ಈ ರೀತಿ ಲಿಂಗವು ಹದಿನೆಂಟುಸ್ಥಲವಾಯಿತಂ. ಉಭಯಂವೂ ಸೇರಿ ಮೂವತ್ತಾರುಸ್ಥಲಗಳಾದವು.

ದ್ವಾದಶಅಂಗ ಲಿಂಗಸ್ಥಲಗಳಂ ಮೂವತ್ತಾರು ಭೇದಗಳನ್ನು ಪಡೆದುಂದರ ಭೇದವನ್ನು ನಿರೂಪಿಸಿದ್ದಾಯಿತು. ಈಶಶಾಸನದಿಂದ ಅನಂತವಾದ ವೇದವೇದಾಂತೇತಿಹಾಸ ಆಗಮಾರ್ಥದ ಅತಿಗೋಪ್ಯತರವಾದಂದು ಸಾಧ್ಯವಾಗುತ್ತದೆ.

ರೇವಣಸಿದ್ಧ ದಶರಥಪುತ್ರನ ದೋಷವನ್ನು ನಿವಾರಿಸಿ ರಾಮೇಶ್ವರವನ್ನು ಹೊಕ್ಕು ರಾಮೇಶ್ವರನ ದರ್ಶನಮಾಡಿ ಅಲ್ಲಿಂದ ಆಕಾಶಮಾರ್ಗವಾಗಿ ಹೊರಟು ಸಮುದ್ರತೀರದ ಪಟ್ಟಣಗಳನ್ನೂ ಗ್ರಾಮಗಳನ್ನೂ ನೋಡಿಕೊಂಡು ವೇದಾರಣ್ಯವನ್ನು ಹೊಕ್ಕು ಅಲ್ಲಿ ಲಿಂಗದರ್ಶನ ಮಾಡಿಕೊಂಡು ಅಮೃತಘಟಕೇಶ್ವರನನ್ನು ಭಕ್ತಿಯಿಂದ ಕೈಕೊಂಡು ಶ್ವೇತಾಟವಿಗೆ ಬಂದು ಅಲ್ಲಿಯ ಕೈಂಕರ್ಯವನ್ನು ಸ್ವೀಕರಿಸಿ ಚೋಳಮಂಡಲದ ಕಡೆ ಹೊರಟನು. ಚೀಯಾಳ ಗೌರಿಮಯೂರ ಮುಂತಾದ ಸಂಕ್ಷೇತ್ರಗಳನ್ನು ಮಧ್ಯಾರ್ಜುನೇಶ್ವರ ಶಿವನಿಳಯಂಗಳನ್ನೂ ಮಾಣವಕ ವೇಷದಿಂದ ನೋಡುತಿದ್ದನು. ವೈದ್ಯನಾಥೇಶ್ವರ, ತ್ರಿಭುವನೇಶ್ವರ, ತಿರುನಾಗನಾಥೇಶ, ಐರಾವತೇಶ್ವರ, ವಲ್ಮೀಕೇಶ್ವರ, ಕುಂಭೇಶ್ವರ, ಸೋಮೇಶ್ವರ ಮುಂತಾದ ಮುಂಖ್ಯಲಿಂಗಗಳನ್ನು ನೋಡುಂವುದಕ್ಕೆ ರೇವಣಸಿದ್ಧ ಬರಲಂ, ಆ ಲಿಂಗಗಳೇ ಯತಿರೂಪವನ್ನು ತಳೆದು ಬಂದು ನುತಿಸಿ ವಂದಿಸಿ ಕರೆದುಕೊಂಡು ಹೋಗಿ ಉಪಚರಿಸಲು ಅವರನ್ನು ಮನ್ನಿಸಿ, ತಂಜಾವೂರಿಗೆ ಹೋಗಿ ಚೊಕ್ಕಲಿಂಗ ಮೀನಾಕ್ಷಿಯರಿಗೆ ದರ್ಶನವನ್ನು ಕೊಟ್ಟನು. ಅಲ್ಲಿಂದ ಹೊರಟು ಪದ್ಮಗಿರಿ ವಲ್ಲಭನನ್ನು ನೋಡಿಕೊಂಡು ಮುಂದೆ ರತ್ನಗಿರಿಯಲ್ಲಿದ್ದ ಶಿವಲಿಂಗದರ್ಶನ ಮಾಡಿಕೊಂಡು ಶ್ರೀಶಿರನಗರಕ್ಕೆ ಹೋಗಿ ನಾಗಕನ್ನಿಕೆಯರನ್ನು ಅರ್ಚಿಸಿದನು. ಮಾತೃಭೂತೇಶ್ವರನಿಗೆ ಮುದವನ್ನಿತ್ತನು. ಶೇಮಂದಿಕೇಶ್ವರ ಪರ್ವತವನ್ನಿಳಿದು ಕಾವೇರಿ ಕೊಲ್ಲಡದ ಮಧ್ಯದಲ್ಲಿದ್ದ ಸಲಿಲಾವಾಸ ಜಂಬುಕೇಶ್ವರ ಲಿಂಗಮೂರ್ತಿಯನ್ನು ಕಂಡನು. ಆಮೇಲೆ ಗಂಗೊಂಡೆಪುರದ ಬೃಹದೀಶ್ವರನಿಗೆ ಆನಂದವನ್ನುಂಟುಮಾಡಿ, ತಿರುನಾಳ್ಪೋವರೇ ಮೊದಲಾದ ಶಿವಶರಣರ ಕ್ಷೇತ್ರವಾದ ಪೊನ್ನಾಂಬಲವನ್ನು ಪ್ರವೇಶಿಸಿದನು. ಅಲ್ಲಿದ್ದ ಮೂರುಸಾವಿರಗಣ ತಿಲ್ಲವೇಣಾಂದಾಹ್ವಯರು ನಾಲ್ವತ್ತೆಂಟುಸಾವಿರ ಶಾಂಭವರು ರೇವಣಸಿದ್ಧನಿಗೆ ನಮಸ್ಕರಿಸಿದರು. ಆಮೇಲೆ ಚಿದಂಬರತಲವನ್ನು ನೋಡಿಕೊಂಡು ಮುಂದೆ ಪಶ್ಚಿಮದಿಕ್ಕಿನಲ್ಲಿ ಭಾಗೀರಥೀ ತೀರ್ಥಕ್ಕಿಂತಲೂ ಅಧಿಕವಾದ ತೀರ್ಥಕುಂಡ

ವನ್ನು ಕಂಡನು. ಶರಣರು ಆ ತೀರ್ಥದ ಅತಿಶಯವನ್ನು ಹೇಳಿದರು. ಆ ಚಿದಂಬರ ಪುರದ ಬೀದಿಗಳನ್ನು ನೋಡಿಕೊಂಡು ಎಲ್ಲ ಜನರಿಗೂ ಅವರ ಇಷ್ಟಾರ್ಥವನ್ನು ಕೊಟ್ಟು ಅಲ್ಲಿಂದ ಆಕಾಶಮಾರ್ಗದಲ್ಲಿ ಪ್ರಯಾಣವನ್ನು ಬೆಳಸಿದನು. ತೊಂಡಮಂಡಲಕೆ ಹೊರಟು ಖಗರಾಣ್ನದಿ, ನಂದಿನದಿ, ಕ್ಷೀರನದಿಗಳನ್ನು ದಾಟಿಬರಲು ಕೋಟಿಗಿರಿ, ವೇದ ಗಿರಿ, ಗೃಧ್ರಗಿರಿ ಎಂಬ ಉದ್ದಂಡನಾಮವನ್ನು ಹೊಂದಿದ್ದ ತಿರಕಡಿಕುಂಡವನ್ನು ಕಂಡು ಆಕಾಶದಿಂದ ಇಳಿದುಬಂದನು. ಆಗ ವೇದವರಗಿರೀಶ್ವರನು ತಾಪಸವೇಷವನ್ನು ಧರಿಸಿ ಬಂದು ರೇವಣಸಿದ್ಧನಿಗೆ ವಂದಿಸಿ ಶಿವಾಲಯದ ನಗಗಳನ್ನು ತೋರಿಸಿದನು. ಆ ಶಿವಾ ಲಯದ ನಗಗಳನ್ನು ಅಲ್ಲಿದ್ದ ಪಕ್ಷಿಕುಲವು ಪ್ರದಕ್ಷಿಣೆಮಾಡುತ್ತಿರಲು ರೇವಣಸಿದ್ಧನು ಅದಕ್ಕೆ ಕಾರಣ ಕೇಳಿದನು. ''ಈ ಪಕ್ಷಿಗಳು ನಳಿನಗರ್ಭನ ಪುತ್ರರು. ಇವರು ಎಂಟುಮಂದಿ. ಇವರು ಬ್ರಹ್ಮ ಇಂದ್ರ ಅಚ್ಯುತರ ಸನ್ನಿಧಿಯಲ್ಲಿರಬೇಕೆಂದು ಸಾಲೋಕ್ಯಪದವಿಗಾಗಿ ತಪಸ್ಸುಮಾಡುತ್ತಿದ್ದರು. ಉಗ್ರತಪಸ್ಸಿನಿಂದ ಅವರು ಆಯಾಸಗೊಂಡುದನ್ನು ಕಂಡು ನಂದಿಯು ಶಂಕರನಿಗೆ ಬಿನ್ನೈಸಲು ಅವನ ಬಿನ್ನಪದಂತೆ ಶಂಕರನು ಅವರ ಅನುಮತವನ್ನು ಕೇಳಲು ಅವರು ಮೊದಲು ಚಿಂತಿಸಿದ ಸಾಲೋಕ್ಯಪದವನ್ನು ಬಯಸದೆ ಸಾಯುಜ್ಯವನ್ನು ಕೇಳಲು 'ನಿಮಗೆ ವಾಙ್ಮನವು ಒಂದಾಗಿಲ್ಲ, ಆದುದರಿಂದ ಗೃಧ್ರಮಯ ದೇಹವನ್ನು ಧರಿಸಿ' ಎಂದು ಶಾಪವನ್ನು ಕೊಟ್ಟನು. ಶಾಪದಿಂದ ತಲ್ಲಣಿಸಿದ ಅವರು ಮತ್ತೆ ಬೇಡಿ ಕೊಳ್ಳಲು ನಾಲ್ಕು ಯುಗಗಳು ಒಂದೊಂದು ಕಳೆದ ಮೇಲೆ ಇಬ್ಬರಿಬ್ಬರಿಗೆ ಮುಕ್ತಿ ಎಂದನು. ಅವರು ಕೇತಾರಕ್ಕೆ ಹೋಗಿ ಆಮೇಲೆ ದಕ್ಷಿಣಕ್ಕೆ ಬಂದು ತರುವಾಯ ಅಂತಕನ ದೆಸೆಯ ಕೈಲಾಸವೆಂಬ ವೇದಗಿರಿಯಲ್ಲಿ ಪ್ರತಿದಿನ ಮಿಂದು ಶಾಪಮುಕ್ತ ರಾದರು. ರೇವಣಸಿದ್ಧ ವೇದಗಿರಿನಾಥನನ್ನು ಬೀಳ್ಕೊಂಡು ಅರುಣಾಚಲೇಶನನ್ನು ಕಂಡು ಗಂರುಲಿಂಗ ಪ್ರದಕ್ಷಿಣಂಗೈದು ಅಷ್ಟಲಿಂಗ ಅಷ್ಟತೀರ್ಥಗಳನ್ನು ನೋಡಿಕೊಂಡು ವಿರಿಂಚಿಪುರವನ್ನು ಪ್ರವೇಶಿಸಿದನು. ಇದು ಬ್ರಹ್ಮ ತಪಸ್ಸುಮಾಡಿದ ಸ್ಥಳ, ವಿಷ್ಣುವಿಗೆ ಇಷ್ಟಾರ್ಥವನ್ನು ಕೊಟ್ಟವನು ವಿರಂಚೇಶನೆಂದು ಕೇಳುವಲ್ಲಿ ಆ ಈಶಲಿಂಗವು ತಪೋ ಧನನ ರೀತಿಯಿಂದ ಬರಲು ಅವರನ್ನು ಮನ್ನಿಸಿ ಆಕಾಶದಲ್ಲಿ ಸಂಚರಿಸಲು ಕಾಂಚಿಯ ಗೋಪುರ ಗೋಚರಿಸಿತು. ಪಾರ್ವತಿ ಅಲ್ಲಿ ಮಳಲಲಿಂಗವನ್ನು ಮಾಡಿ ಪೂಜಿಸು ತ್ತಿದ್ದಾಗ ಕ್ಷೀರನದಿಯ ಪ್ರವಾಹ ಆವರಿಸಲು ಪಾರ್ವತಿ ಪರಮೇಶ್ವರನನ್ನು ಎರಡು ಕೈ ಗಳಿಂದಲೂ ಅಪ್ಪಿಕೊಂಡಳು. ಪರಶಿವ ನದಿಯನ್ನು ಮೊದಲಿನಂತಿರಿಸಿ ಪಾರ್ವತಿಯ ಇಷ್ಟಾರ್ಥವನ್ನು ಕೇಳಲುಸೈಕತದ ಲಿಂಗವಾಗಿ ಯಾವಾಗಲೂ ಪೂಜೆಗೊಳ್ಳಬೇಕು ಎನ್ನಲು ಶಿವನು ಶಿವಲಿಂಗವಾಗಿ ನೆಲಸಿದನು. ಮನು ಮುನೀಶ್ವರರು ಅಖಿಳದೇವ ಗಂಧರ್ವರು ಪೂಜಿಸುತ್ತಿರಲು ಪಾರ್ವತಿ ತಪಗೈದ ಸ್ಥಳದಲ್ಲಿ ಪುರರಚನೆಮಾಡುವೆ ಎಂದನು ಬ್ರಹ್ಮ. ಕಾಮಾಕ್ಷಿಗೆ ಇದು ಕಾಂಚಿದಾಮವೊ ಎಂಬಂತೆ ಆ ನಗರಕ್ಕೆ ಕಾಂಚಿನಗರವೆಂದು ಹೆಸರಿಟ್ಟನು. ಕಾಂಚಿಯಲ್ಲಿ ಷೋಡಶಸಹಸ್ರ ಶಿವನಿಳಯಗಳೂ, ಸ್ವರ್ಣಮಂಟಪಗಳೂ ಪಾಶುಪತರ ಭೂಸುರರ ಸದ್ಮಗಳೂ ಇದ್ದವು. ರೇವಣಸಿದ್ಧನು ಬಾಲಕನಂತೆ ಚೇಷ್ಟೆ

ಮಾಡುತ್ತ, ಜನರ ಕಣ್ಣಿಗೆ ಮರುಳನಂತಿದ್ದ. ಹರುಕುಬಟ್ಟೆ ಧರಿಸಿ, ತಲೆಕೆದರಿಕೊಂಡು, ಮಣ್ಣು ಮೆತ್ತಿಕೊಂಡಿದ್ದ ದೇಹವುಳ್ಳವನಾಗಿ ತಾನು ಪಿಣ್ಣಾಕನ್ನೈನಾರ್ ಎಂದು ಜನಕ್ಕೆಲ್ಲ ಕೂಗಿ ಸಾರುತ್ತಿದ್ದನು. ಹಳೆಯ ಕಂಬಳಿಯನ್ನು ಹೊದ್ದುಕೊಂಡು ಹುಚ್ಚನಂತೆ ನಟಿ ಸುತ್ತ ಮನೆಮನೆಯ ಬಾಗಿಲಮುಂದೆ ನಿಂತು ಭಿಕ್ಷೆ ಬೇಡುತ್ತಿದ್ದನು. ಎಲ್ಲೆಲ್ಲಿ ಶಿವಭವನ ಗಳಿದ್ದುವೋ ಅಲ್ಲೆಲ್ಲ ಪೂಜೆಯ ನಟನೆಮಾಡುತ್ತ ಶಿವಕಂಚಿಯಿಂದ ವಿಷ್ಣುಕಂಚಿಗೆ ಬಂದನು. ಅಲ್ಲಿದ್ದ ವಿಷ್ಣುಪ್ರತಿಮೆಯನ್ನು ಗೋಪುರದ ಮಂಟಪದ ಪ್ರತಿಮೆಗಳನ್ನು ನೋಡಿ ಗಹಗಹಿಸಿ ನಗುತ್ತಿದ್ದನು. ಆ ದೇವಾಲಯದ ವೈಷ್ಣವರು ಅವನನ್ನು ಹಿಡಿದುಕೊಂಡು ಬಂದು ದೇವರ ಮುಂದೆ ಬಗ್ಗಿಸಿ ನಮಸ್ಕಾರ ಮಾಡಿಸಲು ರೇವಣಸಿದ್ಧನು ಓಡಿಹೋಗಿ ಬಯಲಾದನು. ಆ ವೈಷ್ಣವರು ಅವನನ್ನು ಹಿಡಿಯಲು ಹೋಗಿ ಹತಾಶರಾಗಿ ಹಿಂತಿರುಗಲು, ಕಾಂಚಿವರದ ವಿಗ್ರಹವು ನಡುಗುತ್ತಿದ್ದುದನ್ನು ಕಂಡು ತಾವು ಹಿಡಿದುಕೊಂಡ ಹುಚ್ಚನು ವ್ಯಡನಿರಬೇಕು ಶಿವದ್ರೋಹವಾಯಿತು ಎಂದು ಹೆದರಿ ಮನೆಗಳನ್ನು ಸೇರಿಕೊಂಡರು. ಅವರಲ್ಲಿ ಒಬ್ಬ ಪೂಜಾರಿ ವಿಜಯೇಂದ್ರ ಚೋಳನಲ್ಲಿಗೆ ಹೋಗಿ ಈ ಸಂಗತಿಯನ್ನು ತಿಳಿಸಿದನು. ಅದನ್ನು ಕೇಳಿದ ರಾಜನು ಗಾಬರಿಗೊಂಡು ವೈದಿಕರ ಸಲಹೆಯಂತೆ ಶಾಂತಿ ಜಪಹೋಮ ಕಾರ್ಯಗಳನ್ನೆಲ್ಲ ಮಾಡಿ ಸಿದನು. ಆದರೂ ದೇವರ ಕಂಪನ ನಿಲ್ಲಲಿಲ್ಲ. ಆಗ ಕಾಲತ್ರಯವನ್ನು ಬಲ್ಲ ಯೋಗಿ ವರರನ್ನು ಬರಮಾಡಿ ಕೇಳಲು ಅವರು ''ಈ ನಗರಕ್ಕೆ ಏಕಾಂಬ್ರನಾಥ ಕಾಮಾಕ್ಷಿಯರು ಅಧಿದೇವತೆಗಳು. ಅವರನ್ನು ಅರ್ಚಿಸಬೇಕು'' ಎಂದರು. ''ಪೂರ್ವದಲ್ಲಿ ಪಾರ್ವತಿ ಇಲ್ಲಿ ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡಳು. ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡಬೇಕು ಎಂದು ಸೂಚಿಸಿದರು. ಅದರಂತೆ ರಾಜನು ಏಕಾಂಬ್ರನಾಥನನ್ನು ಪೂಜಿಸಿ ''ಪದ್ಮನಾಭನ ವಿಗ್ರಹವು ಚಲಿಸುತ್ತಿದೆ, ಇದಕ್ಕೇನು ಮಾಡಬೇಕು'' ಎಂದು ಪ್ರಾರ್ಥಿಸಿ ಕೊಂಡನು. ಆಗ ಆ ರಾಜನಿಗೆ ಸ್ವಪ್ನವುಂಟಾಗಿ ಶಿವನು ಅವನಿಗೆ ಸ್ವಪ್ನದಲ್ಲಿ ''ನಮ್ಮ ಚಿತ್ಕಳಾವಿಗ್ರಹವಾದ ರೇವಣಸಿದ್ಧನು ಪಿಣ್ಯಾಕನ್ನೈನಾರೆಂಬ ಹೆಸರಿನಿಂದ ಹುಚ್ಚನಂತೆ ಈ ಊರಿನಲ್ಲಿ ಅಲೆಯುತ್ತಿದ್ದಾನೆ. ಆತನಿಂದ ನೀನು ಬಯಸಿದ ಕಾರ್ಯವಾಗುವುದು'' ಎಂದನು. ರಾಜನು ಸಂತುಷ್ಟನಾಗಿ ಅರಮನೆಗೆ ಬಂದು ಪಿಣ್ಯಾಕನ್ನೈನಾರೆಂಬ ಶಿವಸಿದ್ಧ ನನ್ನು ಕರೆತರುವಂತೆ ಸೇವಕರಿಗೆ ಹೇಳಿಕಳುಹಿಸಿದನು. ಅದರಂತೆ ಸೇವಕರು ಬೀದಿ ಬೀದಿ ಯನ್ನು ಅಲೆದು ಕೊನೆಗೆ ಆತನನ್ನು ಕಂಡು ''ರಾಜನು ನಿನ್ನನ್ನು ಕರೆತರುವಂತೆ ಹೇಳಿರು ವನು'' ಎನ್ನಲು ''ನಾನು ಪರದೇಶಿ, ರಾಜನ ಸಭೆಗೆ ಬರಲು ಸಮರ್ಥನಲ್ಲ. ನಾನು ಬರುವುದಿಲ್ಲ ಹೋಗಿ'' ಎಂದು ಸೇವಕರನ್ನು ಕಳಿಸಿಬಿಟ್ಟನು. ಅವರು ರಾಜನಿಗೆ ಈ ವಿಷಯವನ್ನು ತಿಳಿಸಲು ರಾಜನು ಕೋಪಗೊಂಡು ''ಒಬ್ಬ ಹೀನ ಭಿಕ್ಷುಕ ಬರುವುದಿಲ್ಲ ವೆನ್ನುವುದೇ ? ಸೈನ್ಯವನ್ನು ತೆಗೆದುಕೊಂಡು ಹೋಗಿ ಅವನನ್ನು ಹಿಡಿತನ್ನಿ'' ಎಂದು ಆಜ್ಞಾಪಿಸಿದನು. ಅದರಂತೆ ಭಟರು ಬಂದು ಪಿಣ್ಯಾಕನನ್ನು ಹಿಡಿದು ಹೊತ್ತುಕೊಂಡು ಹೋಗುತ್ತಿದ್ದಾಗ ಪಿಣ್ಯಾಕನು ತಲೆ ಕೈಕಾಲನ್ನು ಕೊಡವಲು ಆ ಭಟರೆಲ್ಲ ದಿಕ್ಕು ದಿಕ್ಕಿಗೆ

ಬಿದ್ದು ಉರುಳಿದರು. ಮೂರ್ಛೆಹೋದರು. ಏನುಮಾಡಿದರೂ ಆತನನ್ನು ಮತ್ತೆ ಹಿಡಿಯಲು ಸಾಧ್ಯವಾಗಲಿಲ್ಲ. ಈ ವಿಷಯವನ್ನು ಚೋಳನಿಗೆ ಹೇಳಿದರು. ರಾಜನು ತನಗೆ ಏಕಾಂಬ್ರನಾಥ ಹೇಳಿದ್ದನ್ನು ಮರೆತು ಚರರನ್ನು ಕಳಿಸಿದ್ದಕ್ಕಾಗಿ ಪರಿತಪಿಸಿ ತಾನೇ ಪಿಣ್ಯಾಕನನ್ನು ಕರೆತರಲು ಹೋದನು. ಪಿಣ್ಯಾಕನನ್ನು ಕಾಣುತ್ತಲೇ ಅಡ್ಡಬಿದ್ದು ಪರಿ ಪರಿಯಾಗಿ ಸ್ತುತಿಸಿ ಪ್ರಾರ್ಥಿಸಿದನು. ಆಕಾಶದಿಂದಿಳಿದು ಬಂದ ಪಿಣ್ಯಾಕನು ರಾಜ ನನ್ನು ಸಂತೈಸಿ ಅವನ ಅಭೀಷ್ಟದಂತೆ ಮಾಕಾಂತನಾಲಯಕ್ಕೆ ಹೋಗಿ ಆ ವಿಗ್ರಹದ ತಲೆಯಮೇಲೆ ವೀರ್ಯವನ್ನು ಸೂಸಲು ಅದರ ಕಂಪನ ನಿಂತುಹೋಯಿತು. ರಾಜನ ಇಷ್ಟದಂತೆ ಅರುಳಾಳಪೆರುಮಾಳಿನ ತಲ್ಲಣವನ್ನು ನಿಲಿಸಿ ಅಲ್ಲಾಳನಾಥನೆಂಬ ಹೆಸರನ್ನು ಕೊಟ್ಟನು. ಆಮೇಲೆ ಆಕಾಶಮಾರ್ಗವಾಗಿ ಮಾಸನೂರಿನ ಪ್ರಾಂತಕ್ಕೆ ಬಂದನು. ಆ ಊರಿನ ಹೊರಗಿದ್ದ ಶಿವಾಲಯವನ್ನು ಪ್ರವೇಶಿಸಿದನು. ಪೂಜಾರಿಯೊಬ್ಬನು ಬಂದು "ಈ ದೇವಾಲಯ ಭಯಂಕರವಾದುದು. ನೀವು ಇಲ್ಲಿರಬೇಡಿ ಹೋಗಿ" ಎಂದನು "ಇಲ್ಲಿ ಏಕೆ ಇರಬಾರದು" ಎಂದು ಕೇಳಲು "ಈ ದೇವಾಲಯದ ಸಮೀಪದ ವಟಕುಂಜ. ದಲ್ಲಿ ರಾಕ್ಷಸ ಮಿಥುನಗಳಿವೆ. ಅವು ಬಂದು ರಕ್ತವನ್ನು ಹೀರಿಕೊಳ್ಳುತ್ತವೆ" ಎಂದನು. "ಹರ ನಿರೂಪಣವಿಲ್ಲದೆ ನನ್ನನ್ನು ಅವು ಕೊಲ್ಲಲಾರವು ನೀನು ಹೋಗು" ಎಂದು ಹೇಳಿ ಅರ್ಚಕನನ್ನು ರೇವಣಸಿದ್ಧ ಕಳಿಸಿಕೊಟ್ಟನು. ಅರ್ಧರಾತ್ರಿಯಲ್ಲಿ ಆ ದನುಜಮಿಥುನ ಮರವನ್ನಿಳಿದು ದೇವಾಲಯಕ್ಕೆ ಎಂದಿನಂತೆ ಬಂದವು. ರೇವಣಸಿದ್ಧ ಹಣೆಗಣ್ಣಿನಿಂದ ಅವನ್ನು ಸುಟ್ಟನು. ಅವು ಎರಡು ಉಕ್ಕಿನ ಗುಂಡುಗಳಾದುವು. ಅವನ್ನು ತೆಗೆದು ಕೊಂಡು ಕಮ್ಮಾರನ ಬಳಿಗೆ ಬಂದು ಆ ಗುಂಡುಗಳನ್ನು ಕರಗಿಸಿ ಸುರಗಿಯನ್ನು ಮಾಡಿ ಕೊಡುವಂತೆ ಹೇಳಿದನು. ಅವುಗಳಲ್ಲಿ ಒಂದನ್ನು ಕಾಸಿ ಬಡಿಯಲು ಅದು ಉದ್ದ ವಾಗಲೇ ಇಲ್ಲ. ರೇವಣಸಿದ್ಧನು ದಿವ್ಯದೃಷ್ಟಿಯಿಂದ ಅದನ್ನು ನೋಡಿ ಅದರ ಮುಂದೆ ದಾಸವಾಳದ ಹೂಗೊಂಚಲನ್ನು ಹಿಡಿದನು. ಆಗ ಅದನ್ನು ಹದಕ್ಕೆ ತರಲು ಸಾಧ್ಯ ವಾಯಿತು. ಕಮ್ಮಾರನು ಅದರ ವೃತ್ತಾಂತವೇನೆಂದು ಕೇಳಲು "ಇವು ಯಕ್ಷ ದಂಪತಿ ಗಳು. ಒಬ್ಬ ಮುನಿಯ ಮನೆಯಲ್ಲಿ ಇವು ಸಂಭೋಗ ನಡೆಸಲು ಆ ಮುನಿ ಇವರಿಗೆ ದನುಜರಾಗುವಂತೆ ಶಾಪವನ್ನು ಕೊಟ್ಟನು. ತಮಗೆ ನಿಶ್ಶಾಪವಾವಾಗ ಎಂದು ಕೇಳಿ ಕೊಳ್ಳಲು ರೇವಣಸಿದ್ಧರಿಂದ ಎಂದು ಆ ಮುನಿ ಹೇಳಿದನು. ಅದರಂತೆ ಅವು ಆಲದ ಮರದ ಪೊಟರೆಯಲ್ಲಿ ವಾಸಿಸುತ್ತ ಶಿವಮಂದಿರಕ್ಕೆ ಬರುತ್ತಿದ್ದ ನರರನ್ನೆಲ್ಲ ಕೊಲ್ಲು ತ್ತಿದ್ದವು" ಎಂದು ಹೇಳಿದನು. ಚಮ್ಮಾರ ಆ ಗುಂಡನ್ನು ಸುರಗಿಯನ್ನಾಗಿ ಮಾಡಿ ಹಿಡಿದು ಕೊಳ್ಳಲು ಅದು ಆರ್ಭಟಿಸುತ್ತಿತ್ತು. ಅವನು ಹೆದರಿಕೊಂಡು ಅದನ್ನು ರೇವಣ ಸಿದ್ಧನ ಕೈಗೆ ಕೊಡಲು ಆತನು ಅದನ್ನು ಆ ಪುರದ ಮುಂದಣ ಭೀಮರಥಿಯ ಮಡುವಿ ನಲ್ಲಿ ತಲೆಕೆಳಗಾಗಿ ನಿಲ್ಲಿಸಿ ಅಲ್ಲಿಂದ ಹೋಗದಿರುವಂತೆ ಅಪ್ಪಣೆಮಾಡಿದನು. ರೇವಣಸಿದ್ಧ

ಅಲ್ಲಿಂದ ಹೊರಟು ಉಜ್ಜೈನಿಗೆ ಬಂದನು. ಆ ಪುರದ ರಾಜನಾದ ವಿಕ್ರಮಾದಿತ್ಯನು ರೇವಣಸಿದ್ಧನನ್ನು ಇದಿರ್ಗೊಂಡು ಅರಮನೆಗೆ ಕರೆದೊಯ್ದು ಅತ್ಯಂತ ಭಕ್ತಿಪೂರ್ವಕ ವಾಗಿ ಪರಿಪರಿಯ ಉಪಚಾರವನ್ನೆಸಗಿದನು. ಆತನ ಉಪಚಾರದಿಂದ ಸುಪ್ರೀತನಾದ ರೇವಣಸಿದ್ಧ ತಾನು ತಂದಿದ್ದ ಖಡ್ಗವನ್ನು ಆತನಿಗೆ ಕೊಟ್ಟು ಅದರ ವೃತ್ತಾಂತ ವನ್ನೆಲ್ಲ ನಿರೂಪಿಸಿದನು. ಅಲ್ಲಿಂದ ಮಂಗಳವಾಡಕ್ಕೆ ಬಂದನು. ಆ ಪುರವನ್ನು ಪ್ರವೇಶಿಸಿದೊಡನೆಯೇ ತನ್ನ ವೇಷವನ್ನು ಮರೆಸಿಕೊಂಡು ಹರಕುಬಟ್ಟೆಗಳನ್ನು ಧರಿಸಿ ಹುಚ್ಚನಂತೆ ಊರೆಲ್ಲ ಅಲೆದಾಡುತ್ತಿದ್ದನು. ಅವನನ್ನು ಕಲ್ಲಿಸೆಟ್ಟಿ ಎಂಬುವನು ನೋಡಿ ಕನಿಕರಿಸಿ ತನ್ನ ಗಾಣವನ್ನು ಹೊಡೆದುಕೊಂಡಾದರೂ ಇರಲಿ, ಊಟೋಪಚಾರವನ್ನಾ ದರೂ ಮಾಡಿಸಬಹುದೆಂದು ಅವನನ್ನು ಕೇಳಲು ಅವನು ಅದಕ್ಕೆ ಒಡಂಬಟ್ಟು ಆತನ ಮನೆಯಲ್ಲಿದ್ದನು. ನರಸುರೋರಗ ಮುಖ್ಯವಾದ ಜೀವರಾಶಿಗಳೆಂಬ ತಿಲಗಳನ್ನು ಯೋನಿ ಎಂಬ ಯಂತ್ರದಲ್ಲಿ ಆಡಿಸಿ ಸುಜ್ಞಾನರಸವನ್ನು ಹಿಂಡಿ ತೆಗೆಯುವಂತೆ ಎಣ್ಣೆ ಯನ್ನು ತೆಗೆದು ನಿಸ್ಸಾರವಾದ ಪ್ರಾರಬ್ಧದುಷ್ಕರ್ಮವೆಂಬಂತಿರುವ ಹಿಂಡಿಯನ್ನು ಹೊರ ತೆಗೆಯುವಂತೆ ಶಿವಸಿದ್ಧಕುಲಲಲಾಮನು ಗಾಣವನ್ನು ಆಡಿಸುತ್ತಿದ್ದನು ರೇವಣಸಿದ್ಧ ಕೆಲವುಕಾಲ ಕಲ್ಲಿಸೆಟ್ಟಿಯ ಮನೆಯಲ್ಲಿರಲು ಕ್ರಮೇಣ ಕಲ್ಲಿಸೆಟ್ಟಿ ಶ್ರೀಮಂತನಾದನು. ಆತನ ಮಹಿಮೆಯನ್ನು ಕೊಂಡಾಡುತ್ತಿದ್ದಂತೆಯೇ ಅವರಿಬ್ಬರ ಒಕ್ಕಣ್ಣುಗಳು ಸರಿಹೋಗಿ ಒಬ್ಬರನ್ನೊಬ್ಬರು ನೋಡಿಕೊಂಡರು. ಕೂಡಲೇ ಅವರು ರೇವಣಸಿದ್ಧನ ಪಾದಗಳಿಗೆರಗಲು ರುದ್ರಕನ್ನೆಯರೂ ದೇವತೆಗಳೂ ಗಂಧರ್ವರೂ ಆತನನ್ನು ಓಲೈಸು ತ್ತಿರುವುದನ್ನು ಕಂಡರು. ರೇವಣಸಿದ್ಧನು ಹೇಮಮಯ ಕಂಥೆಯಿಂದಲೂ ಕರ್ಣಕುಂಡಲ ದಿಂದಲೂ ಜಟಾಭಸ್ಮಾಕ್ಷಮಾಲೆಯಿಂದಲೂ ಶೋಭಿಸುತ್ತಿದ್ದನು. ಅದನ್ನು ಕಂಡು ಆ ದಂಪತಿಗಳು ಆತನಿಗೆರಗಿ "ನಾವು ನಿಮ್ಮಿಂದ ಸೇವೆಮಾಡಿಸಿ ಪಾಪಿಗಳಾದೆವು ಎನ್ನಲು"– "ನೀವು ಭಾವಜಾಂತಕನನ್ನು ಪೂಜಿಸಿಕೊಂಡು ಸುಖವಾಗಿರಿ" ಎಂದು ಹರಸಿ ವಿವಿಧ ಭೋಗ ಭಾಗ್ಯಗಳನ್ನೂ ನವನಿಧಿಗಳನ್ನೂ ಕೊಟ್ಟು ಕಳಿಸಿ ತಾನು ಅಲ್ಲಿಂದ ಪ್ರಯಾಣ ಮಾಡಿದನು. ಹುಚ್ಚನಂತೆ ಬೀದಿಯಲ್ಲಿ ಬರುತ್ತಿದ್ದ ರೇವಣಸಿದ್ಧನನ್ನು ಕಂಡ ವಾರನಾರಿಯೊಬ್ಬಳು ತನ್ನಮನೆಗೆ ನೀರುತರುವ ಕಾಯಕವನ್ನು ಮಾಡಿಕೊಂಡು ಇರುವಂತೆ ಕೇಳಿಕೊಂಡಳು.

ಹೀಗಿರುವಲ್ಲಿ ರಾವಣನು ಸಾಯುವ ಕಾಲದಲ್ಲಿ ವಿಭೀಷಣನಿಗೆ "ನವಕೋಟಿಲಿಂಗ ಪ್ರತಿಷ್ಠೆ ಮಾಡಬೇಕಾಗಿದ್ದ ನಾನು ಆರುಕೋಟಿ ಲಿಂಗಗಳನ್ನುಮಾತ್ರ ಪ್ರತಿಷ್ಠೆಮಾಡಿ ದ್ದೇನೆ. ಉಳಿದ ಮೂರುಕೋಟಿ ಲಿಂಗಗಳನ್ನು ನೀನು ಪ್ರತಿಷ್ಠೆಮಾಡಬೇಕು," ಎಂದು ಹೇಳಿದ್ದನು. ಆತನು ಸತ್ತಮೇಲೆ ವಿಭೀಷಣ ಪೌಲಸ್ತ್ಯನಲ್ಲಿಗೆ ಬಂದು ಈ ವಿಷಯ ವನ್ನು ತಿಳಿಸಲು ಆತನು ಮತ್ಸ್ಯಕೇಶ್ವರ ಲಿಂಗವನ್ನು ಪೂಜಿಸಿ ಒಲಿಸಿಕೊಳ್ಳಬೇಕು ಎನ್ನಲು ಆತನು ಹಾಗೆಯೇ ಮಾಡಲು ಮತ್ಸ್ಯಕೇಶ್ವರನು ಆತನ ಕನಸಿನಲ್ಲಿ "ಕಲಿಯುಗದ ಪ್ರಥಮದಲ್ಲಿ ರೇಣುಕೇಶ ವಸುಂಧರೆಗೆ ಬರುತ್ತಾನೆ. ಆತನಿಂದ ಈ ಕೆಲಸವಾಗುತ್ತದೆ"

ಎಂದನು. ಆದರಂತೆ ರೇವಣಸಿದ್ಧನನ್ನು ಹುಡುಕಿಕೊಂಡು ವಿಭೀಷಣ ಮಂಗಳವಾಡಕ್ಕೆ ಬಂದು ವೇಶ್ಯೆಯ ಮನೆಯಲ್ಲಿ ಆತನಿರುವುದನ್ನು ಕೇಳಿ ಅಲ್ಲಿಗೆ ಹೋದನು. ಆವೇಳೆಗೆ ಎರಡು ಭಾಂಡಗಳನ್ನು ಕಂಬಿಯಲ್ಲಿ ಹೊತ್ತುಕೊಂಡು ಬರುತ್ತಿದ್ದ ರೇವಣಸಿದ್ಧನನ್ನು ವಿಭೀಷಣ ಕಂಡನು. ಅಲ್ಲಿದ್ದ ಜನರನ್ನು ಈತನು ಯಾರು ಎಂದು ಕೇಳಲು ಮಾಯೆ ಎಂಬ ಸೂಳೆಯ ಮನೆಯ ಕಂಬಿಯ ಆಳು ಎಂದರು. ವಿಭೀಷಣನು ಮಾಯೆಯನ್ನು ಕಂಡು ರೇವಣಸಿದ್ಧನಿಂದ ಸೇವೆ ಮಾಡಿಸಿಕೊಂಡ ಆಕೆ ಎಷ್ಟು ಧನ್ಯಳೋ ಎಂದು ಹೊಗಳಿದನು. ಮಾರನೆಯ ದಿನ ಮಾಯೆ ಬಂದು ನೋಡಲು ರೇವಣಸಿದ್ಧನ ಸುತ್ತಲೂ ರುದ್ರಕನ್ನಿಕೆಯರೂ ಸುರಸತಿಯರೂ ನೆರೆದು ಪರಿಚರ್ಯೆ ಮಾಡುತ್ತಿದ್ದರು. ಆತನ ಮೂರು ಕಣ್ಣುಗಳೂ ಪ್ರಕಾಶಮಾನದಿಂದ ಶೋಭಿಸುತ್ತಿದ್ದುವು. ಮಾಯೆ ರೇವಣಸಿದ್ಧನನ್ನು ಕುರಿತು "ಎಲೆ ದೇವರೆ ನಿನ್ನನ್ನು ಅರ್ಥಮಾಡಿಕೊಳ್ಳದೆ ನಿನ್ನಿಂದ ಸೇವೆಯನ್ನು ಮಾಡಿಸಿಕೊಂಡೆ. ಮಹಾಪರಾಧವಾಯಿತು ಕ್ಷಮಿಸಬೇಕು' ಎಂದು ಅಡ್ಡಬಿದ್ದಳು. ರೇವಣಸಿದ್ಧನು ಆಕೆಗೆ ಉಪದೇಶಮಾಡಿ ಸಕಲ ಸಂಪತ್ತನ್ನೂ ಕೊಟ್ಟು ಕಳಿಸಿದನು. ಆಗ ವಿಭೀಷಣನು ಬಂದು ಕೈಮುಗಿದು ತಾನು ಬಂದ ಕಾರ್ಯವನ್ನು ನಿವೇದಿಸಿಕೊಂಡನು. ರೇವಣಸಿದ್ಧ ವಿಭೀಷಣನೊಡನೆ ಲಂಕೆಗೆ ಹೋಗಿ ಮೂರುಕೋಟಿ ಲಿಂಗಗಳನ್ನು ಪ್ರತಿಷ್ಠೈಸಿದು ವಿಭೀಷಣನಿಂದ ಅಗ್ರಪೂಜೆಯನ್ನು ಪಡೆದು ಆಕಾಶಮಾರ್ಗವಾಗಿ ಹೊರಟನು. ರೇವಣಸಿದ್ಧನು ಕಕುದ್ಗಿರಿಯ ಅನೇಕ ಶೃಂಗಗಳನ್ನು ನೋಡಿಕೊಂಡು ಬರುತ್ತಿರುವಾಗ ಅಲ್ಲಿದ್ದ ವಿಭಾಂಡುಕನೇ ಮೊದಲಾದ ಮುನಿಕದಂಬ ಆತನನ್ನು ಇದಿರ್ಗೊಂಡು ಉಪಚರಿಸಿ ಆ ಗಿರಿಯ ಮಹಿಮೆಯನ್ನು ತಿಳಿಸುವಂತೆ ಕೇಳಿಕೊಂಡರು.

ಆದಿಯಲ್ಲಿ ಬ್ರಹ್ಮಋಷಿ ಗರಿಕೆ ಹುಲ್ಲನ್ನು ತಿನ್ನುತ್ತ ಶಿವನನ್ನು ಕುರಿತು ಉಗ್ರ ತಪಸ್ಸನ್ನು ಮಾಡಿದನು. ಆತನ ತಪಸ್ಸಿಗೆ ಮೆಚ್ಚಿದ ಶಿವನು ಗಂಗೆಯನ್ನು ಬರಿಸಿ ಆ ಋಷಿಯಮೇಲೆ ತಳಿದನು. ಅಂದಿನಿಂದ ಆ ಕ್ಷೇತ್ರ ಕಣಾದಕ್ಷೇತ್ರವೆಂದು ಪ್ರಖ್ಯಾತಿಯನ್ನು ಪಡೆಯಿತು ಅಲ್ಲಿಂದ ನಂದಿಗಿರಿಯನ್ನು ನೋಡಿಕೊಂಡು ಭೋಗಮೋಕ್ಷವನೀವ ಕ್ಷೀರನದಿ ಅರ್ಕಾವತಿ ಪಿನಾಕಿನಿ ನದಿಗಳ ಘನತೆಯನ್ನು ಕೊಂಡಾಡಿದನು. ಅಲ್ಲಿಯ ಋಷಿಗಳು ರೇವಣನಿಗೆರಗಿ "ಕೂಷ್ಮಾಂಡಗೊಲಿದ ಲಿಂಗ ಚಾರ ನಂದೀಶ್ವರ ನೆನಿಪ್ಪನಾಮವನೆಂತು ಸಾರಿರ್ದನದನೆಮಗೆ ಬೊಧಿಸುವುದು'' ಎಂದು ಕೇಳಿಕೊಳ್ಳಲು ಅದನ್ನು ಅವರಿಗೆ ವಿವರಿಸಿ ಆ ಮೇಲೆ ಹಂಪೆಗೆ ಹೋಗಿ ವಿರೂಪಾಕ್ಷ ದೇವಾಲಯವನ್ನು ಕಂಡನು. ಅಲ್ಲಿಯ ಕಿಷ್ಕಿಂಧ. ಋಷ್ಯಮೂಕ. ಹೇಮಕೂಟ, ಮತಂಗಾದ್ರಿ ಪರ್ವತಗಳನ್ನೂ ಪುಣ್ಯತೀರ್ಥಗಳನ್ನೂ ಸಂದರ್ಶಿಸಿ ಮಂಗಳವಾಡಕ್ಕೆ ಬಂದನು. ಬಿಜ್ಜಳನ ಆಸ್ಥಾನಕ್ಕೆ ಹೋಗಿ ಭಿಕ್ಷಾಂದೇಹಿ ಎಂದನು. ಬಿಜ್ಜಳನು ಕುದಿಯುವ ಪರಮಾನ್ನವನ್ನು ಕರಪಾತ್ರಕ್ಕೆ ನೀಡಿಸಲು ರೇವಣಸಿದ್ಧ ಅದನ್ನು ಸೇವಿಸಿ ಕೈಗಳನ್ನು ಹಜಾರದ ಮುಂದಿನ ರತ್ನಗಂಬಗಳಿಗೆ ಒರಸಿದನು. ಕೂಡಲೇ ಅವೆಲ್ಲ ಹತ್ತಿಕೊಂಡು ಉರಿಯಲಾ

ರಂಭಿಸಿದವು. ಬಿಜ್ಜಳ ರೇವಣಸಿದ್ಧನ ಪಾದಗಳ ಮೇಲೆ ಬಿದ್ದು ತನ್ನ ಅಪರಾಧವನ್ನು ಕ್ಷಮಿಸುವಂತೆ ಕೇಳಿಕೊಂಡನು. ಅಗ್ನಿಯನ್ನು ಶಮನಗೊಳಿಸಿದ ರೇವಣನನ್ನು ಬಿಜ್ಜಳ ಆರೋಗಣೆಗೆ ಪ್ರಾರ್ಥಿಸಿದನು. ಅದಕ್ಕೆ ರೇವಣಸಿದ್ಧ ನೀನು ಮಾಡಿದ ಅಪರಾಧಕ್ಕೆ ನಾನೊಬ್ಬನೇ ಊಟಮಾಡಿದರೆ ಜನವೆಲ್ಲ ನಗುವರು. ಆದುದರಿಂದ ಈ ಊರಿನ ಜನಕ್ಕೆಲ್ಲ ಆರೋಗಣೆ ಮಾಡಿಸಬೇಕು ಎನ್ನಲು ಬಿಜ್ಜಳ ತನ್ನ ಅಸಹಾಯಕತೆಯನ್ನು ವ್ಯಕ್ತ ಪಡಿಸಿದನು. ಆಗ ರೇವಣನು ಐದುಪಡಿ ಅಕ್ಕಿಯನ್ನು ಐದುಸೊಲ್ಲಗೆ ತುಪ್ಪವನ್ನು ತರಿಸಿ ಪಾಕಮಾಡಿಸಿ ಪರಸಾಕ್ಷಿಯಿಂದ ನೋಡಲು ರಾಶಿರಾಶಿಯಾಗಿ ವಿವಿಧ ಭಕ್ಷ್ಯಗಳು ಸಿದ್ಧವಾದವು. ಜನವೆಲ್ಲ ಉಂಡು ಕೊಂಡಾಡಿತು. ಬಿಜ್ಜಳನು ರೇವಣಸಿದ್ಧನನ್ನು ನವರತ್ನ ಪೀಠದಲ್ಲಿ ಕುಳ್ಳಿರಿಸಿ ಪೂಜೆಮಾಡಿದನು. ಆ ಮೇಲೆ ರೇವಣಸಿದ್ಧ ಕೊಲ್ಲಾಪುರಕ್ಕೆ ಬಂದನು. ಅಲ್ಲಿಯ ಕೂಪತಟಾಕದ ನೀರೆಲ್ಲ ರಕ್ತವರ್ಣವಾಗಿಯೂ. ಕೈರವ ಕಮಲಿನಿ ಪುಷ್ಪಗಳು ರುಂಡಗಳಂತೆಯೂ, ಭೀಕರವಾಗಿ ಕಾಣುತ್ತಿದ್ದವು. ರೇವಣಸಿದ್ಧ ಅಲ್ಲಿಯ ಸಿದ್ಧರಿದ್ದ ಕೇರಿಗೆ ಬಂದು ಅವರ ಮಾಯಾಕಂಟಿಲವಿದ್ಯೆಗಳನ್ನೆಲ್ಲ ಭಂಗಿಸಿ ಗೋರಕ್ಷನ ಆಶ್ರಮಕ್ಕೆ ಬಂದು ಭಿಕ್ಷಾಂದೇಹಿ ಎಂದನು. ಆತನು ಹೆಂಡತಿಯನ್ನು ಕರೆದು ಭಯಂಕರವಾದ ಸುರಗಿಯನ್ನು ನೀಡುವಂತೆ ಹೇಳಿದನು. ರೇವಣಸಿದ್ಧನು ಅದನ್ನು ಸೇವಿಸಲು ಅದು ಅಮೃತವಾಯಿತು. ಗೋರಕ್ಷನ ಎದೆಯಲ್ಲಿ ಅಲಗು ನಾಟಿದಂತಾಯಿತು. ಅದರ ವೇದನೆಯನ್ನು ತಾಳಲಾರದೆ ಅಂಗಲಾಚಿದನು. ರೇವಣ ಸಿದ್ಧನು ಗೋರಕ್ಷನನ್ನು ಮನ್ನಿಸಿ ಬುದ್ಧಿವಾದವನ್ನು ಶಿವಸದ್ಧರ್ಮ ಪರಿಧಾನವನ್ನು ಬೋಧಿಸಿ ಶ್ರೀಶೈಲನಗದತ್ತ ಹೊರಟನು.

ಶ್ರೀಶೈಲದ ಶುಕ್ಲಪರ್ವತದಲ್ಲಿ ಮಂಡಿಸಿದ್ದ ಶಿಖರೇಶ್ವರನನ್ನು ನೋಡಿಕೊಂಡು ತಾರಾಚಲವನ್ನು ಪ್ರವೇಶಿಸಿದನು. ಆ ಮೇಲೆ ಬಿಲ್ವವನವನ್ನು ಕಂಡು ಆ ವನದ ಮಹಿಮೆಯನ್ನು ಕೊಂಡಾಡಿದನು. ಆ ವನದಲ್ಲಿದ್ದ ವೀರಶೈವ ಶರಣರಿಗೆ ರೇವಣಸಿದ್ಧನು ನಮಿಸಿ ಬೀಳ್ಕೊಡಲು ಅವರೆಲ್ಲರೂ ''ನಾವು ನಿಮ್ಮೊಡನೆ ಬರುತ್ತೇವೆ'' ಎಂದರು. ಅದಕ್ಕೆ ''ವೀರ ಶೈವಧರ್ಮವನ್ನುದ್ಧರಿಸುವುದಕ್ಕೆ ಕಲ್ಯಾಣದಲ್ಲಿ ಬಸವಾಭಿಧಾನದಿಂದ ಮುಂದೆ ಜನಿಸಿದಾಗ ನೀವು ಬನ್ನಿ'' ಎಂದು ಹೇಳಿ ಪಾತಾಳಗಂಗೆಯನ್ನು ನೋಡಿಕೊಂಡು ಹೊರಟನು. ಮಲ್ಲೇಶನಾಲಯ, ಭ್ರಮರಾಂಬಿಕೆ, ಮಲ್ಲಿಕಾರ್ಜುನರ ದರ್ಶನ ಮಾಡಿದನು. ಆಗ ಸರ್ಪಾಭರಣಭೂಷಣನಾದ ಈಶನು ಪ್ರಸನ್ನನಾಗಲು ಹರ್ಷಾಂಬುಗರೆಯುತ್ತ ''ಶಾಂಭವಲೋಕಕಾಂ ಬಹೆನ್' ಎಂದು ರೇವಣಸಿದ್ಧ ಹೇಳಲು, ಮುಂದೆ ''ಅಚಲ ಮಹಾತ್ಮ ಪದದ ಮಹಿಮೆಯು ನಿನ್ನ ಕಂದನಿಂದಾಗಬೇಹುದು ಇಲ್ಲಿಗೆ ಸಪ್ತಶತ ವರ್ಷ ಪ್ರಚ್ಛನ್ನವೇಷದಿಂದ ಸಂದಿತು. ಇನ್ನು ನಿಜವೇಷದಿಂದ ಅಷ್ಟಸಿದ್ಧಿಯನ್ನು ಕೊಡುವ ಅಕ್ಷಯಪಾತ್ರೆ ಬಲಮುರಿಶಂಖ ಇವೇ ಮೊದಲಾದುವನ್ನು ಹೊಂದಿ ಯತಿರಾಜನಾಗಿ ನೀನು ಚೋಳ ಮಲೆಯಾಳ ಕುಂತಳ ವಂಗಧ ಮಾಳವ ಮಹಾರಾಷ್ಟ್ರ ಪಾಂಚಾಳ

ಕಳಿಂಗ ಅಂಗ ವಂಗ ಇವರೇ ಮೊದಲಾದ ರಾಜಪುತ್ರಿಯರನ್ನು ಮದುವೆಯಾಗಿ ವೀರ ಶೈವವನ್ನು ಧರೆಗೆ ಪಸರಿಸುತ್ತ ಮಂಗಳವಾಡದೊಳಗೆ ನೆಲಸು'' ಎಂದು ಹೇಳಿ ಶಿವನು ಮಲ್ಲಿಕಾರ್ಜುನಲಿಂಗದೊಳಗೆ ತಲ್ಲೀನನಾದನು. ಆ ಆದೇಶದಂತೆ ರೇವಣಸಿದ್ಧನು ಮಂಗಳವಾಡಕ್ಕೆ ಹೊರಟನು.

ಮಾಯಾದೇವಿಗೆ ರೇವಣಸಿದ್ಧರ ಆಶೀರ್ವಾದದಿಂದ ಒಬ್ಬ ಮಗಳು ಹುಟ್ಟಿದಳು. ಅಪರಂಜಿಯ ಪುತ್ತಳಿಯಂತೆ ಬೆಳೆದ ಆ ದಿವ್ಯಕನ್ಯೆ ಕುಶಲವಿದ್ಯೆಗಳನ್ನು ಕಲಿತಳು. ಹತ್ತು ವರ್ಷಗಳಾಗುವ ವೇಳೆಗೆ ಅಂತಕಾಂತಕನೆ ಈಕೆಗೆ ಪತಿ ಎಂದು ಚಿಂತಿಸುತ್ತ ಗುರುಪದ ವನ್ನು ಧ್ಯಾನಿಸುತ್ತಿದ್ದಳು. ಹೀಗಿರುವಲ್ಲಿ ಬಿಜ್ಜಳನ ಆಸ್ಥಾನಕ್ಕೆ ಮಾಸನೂರಿನ ನಾತ ನಾಚಾರಿ ಎಂಬುವನು ಬಂದು ರೇವಣಸಿದ್ಧನು ಮಾಸನೂರಿನ ಮಡುವಿನಲ್ಲಿ ಇರಿ ಸಿರುವ ಕೈದು ದೊರಕಿದರೆ ಅಖಿಳಸಿದ್ಧಿಗಳು ಉಂಟಾಗುತ್ತವೆ ಎಂದನು. ಆ ಎರಡು ಸುರಗಿಗಳಲ್ಲಿ ಒಂದನ್ನು ವಿಕ್ರಮಾದಿತ್ಯನಿಗೆ ಕೊಟ್ಟದ್ದರಿಂದ ಆತನು ಸಕಲ ಸಂಪದವನ್ನೂ ಪಡೆದು ಧರೆಯನ್ನಾಳಿದ ದೃಷ್ಟಾಂತವನ್ನು ಹೇಳಿದನು. ಕೂಡಲೆ ಬಿಜ್ಜಳನು ಮಂತ್ರಿ ಮನ್ನೆಯ ಚತುರಂಗಬಲ ಸಹಿತ ಮಾಸನೂರಿನ ಮಡುವಿನ ಬಳಿಗೆ ಬಂದು ಆ ಖಡ್ಗ ವನ್ನು ಹೊರತೆಗೆಯುವ ವಿಧಾನವನ್ನು ಕೇಳಿದನು. ಅವರ ಆದೇಶದಂತೆ ನಾವೆ ತೆಪ್ಪ ಹರಿಗೋಲುಗಳಲ್ಲಿ ಹೋದ ಅಂಬಿಗರು ಆ ಮಡುವಿನಲ್ಲಿ ಬಿದ್ದು ಸತ್ತರು. ಆಮೇಲೆ ನಾಡಿನಲ್ಲಿನ ಮಾಂತ್ರಿಕರನ್ನೂ ಯೋಗಿಗಳನ್ನೂ ಜೋಗಿಗಳನ್ನೂ ಬರಮಾಡಿಕೊಂಡು ಮಡುವಿನಲ್ಲಿರುವ ಕಠಾರಿಯನ್ನು ತೆಗೆದುಕೊಡುವಂತೆ ಕೇಳಿಕೊಂಡನು. ಅವರು ಈ ಘನಕಾರ್ಯಕ್ಕೆ ಹನ್ನೆರಡುಸಾವಿರ ಕನ್ಯೆಯರನ್ನೂ ಮೂರುಲಕ್ಷ ಕುರಿಕೋಣಗಳನ್ನೂ ಬಲಿಕೊಡಬೇಕೆಂದು ಹೇಳಿದರು. ಅದರಂತೆ ಹನ್ನೆರಡು ಸಾವಿರ ಕನ್ಯೆಯರನ್ನು ಕೂಡಿಸು ವಾಗ ಒಬ್ಬ ಕನ್ಯೆ ಕಡಮೆಯಾದಳು. ಆಗ ಮಾಯಾದೇವಿಯ ಮಗಳನ್ನು ಹಿಡಿದು ಕೊಂಡು ಹೋದರು. ಆಗ ಮಾಯಿದೇವಿ ರೇವಣಸಿದ್ಧರಿಗೆ ಮೊರೆಯಿಟ್ಟಳು. ಹಿಮಾ ಲಯದಲ್ಲಿ ತಪೋನಿರತನಾಗಿದ್ದ ರೇವಣಸಿದ್ಧ ಮಾಯಿದೇವಿಗೆ ಅಭಯವನಿತ್ತು ಆಕಾಶ ಮಾರ್ಗವಾಗಿ ಬಿಜ್ಜಳನಿದ್ದಲ್ಲಿಗೆ ಬಂದನು. ಬಿಜ್ಜಳನು ರೇವಣಸಿದ್ಧನನ್ನು ಸ್ವಾಗತಿಸಿ ಸಿಂಹಾಸನದಲ್ಲಿ ಕೂರಿಸಿ ಪಾದಪೂಜೆಯನ್ನು ಮಾಡಿ ಬಂದ ಕಾರ್ಯವನ್ನು ಕೇಳಿದನು. ಹನ್ನೆರಡುಸಾವಿರ ಕನ್ನೆಯರನ್ನು ಬಲಿಕೊಡುವುದು ಮಹಾಪಾಪ. ನಿನಗೆ ಬೇಕಾದ ಸುರಗಿಯನ್ನು ನಾನು ತೆಗೆದುಕೊಡುವೆನೆಂದು ಹೇಳಿ ಆ ಕನ್ನೆಯರನ್ನೆಲ್ಲ ಬಿಡಿಸಿ ಮಡು ವನ್ನು ಪ್ರವೇಶಿಸಿ ಖಡ್ಗವನ್ನು ಲೀಲಾಜಾಲವಾಗಿ ಮೇಲಕ್ಕೆ ತಂದು ರಾಜನ ಕೈಗೆ ಕೊಡಲು ಹೋದಾಗ { ವಿಷಮ ಕ್ರೂರಕಾಳಾಹಿ ಶಿರದೊಳ್ ಭುಸ್ಸೆನಲ್ಕೆ ನೃಪನಳ್ಕಿ ಹಿಂದಕ್ಕೋಡಿದನು. ರೇವಣಸಿದ್ಧ ಆ ಖಡ್ಗವನ್ನು ದಯಾಮೃತಚಿತ್ತದಿಂದ ನೋಡಲು ಅದರ ಆಕಾರ ಹೋಗಿ ಯಕ್ಷನು ಮುಂದೆ ನಿಂತು ನಮಸ್ಕರಿಸಿದನು. ರೇವಣಸಿದ್ಧ ಅವನನ್ನು ಕಳಿಸಿಕೊಟ್ಟು ಬಿಜ್ಜಳನ ಪ್ರಾರ್ಥನೆಯ ಮೇರೆಗೆ ಆತನ ಅರಮನೆಗೆ ಬಂದನು.

ಬಿಜ್ಜಳನು ರೇವಣಸಿದ್ಧನಿಗೆ ವಿವಿಧೋಪಚಾರಗಳನ್ನು ಮಾಡಿ ತನ್ನ ಮಗಳಾದ ಸುಲಕ್ಷಣೆಯನ್ನು ಕೊಟ್ಟು ಪಾಣಿಗ್ರಹಣ ಮಾಡಿದನು. ರೇವಣಸಿದ್ಧ ನಿಜಶಿಷ್ಯರಿಂದಲೂ ಬಂಧುಸಮೂಹದಿಂದಲೂ ಸದಾಶಿವಶಾಸ್ತ್ರಲೀಲಾಗೋಷ್ಠಿಯಿಂದಲೂ ಪತ್ನಿಸಮೇತನಾಗಿ ಶಿವಪೂಜೆಗೈಯುತ್ತ ಸುಖವಾಗಿದ್ದುಕೊಂಡು ಎಲ್ಲ ಶರಣರನ್ನು ಮಕ್ಕಳಂತೆ ಕಾಣುತ್ತ ಅವರನ್ನು ಪೋಷಿಸುತ್ತ ಮುಕ್ತಿಯನ್ನು ಕೊಡುತ್ತಿದ್ದನು.

ಇತ್ತ ರಾಜೇಂದ್ರಚೋಳನು ಜಂಗಮಾಸಕ್ತನೂ ಲಿಂಗಮಾನಸೈಕ್ಯನೂ ಆಗಿ ಸಾಮ್ರಾಜ್ಯ ಸಂಪದದೊಳಿದ್ದನು. ಈ ಚೋಳರಾಜನ ಮಗಳು ಸೌಂದರಿ ಶೈಶವವನ್ನು ಕಳೆದು ಬೆಳೆಯುತ್ತಿದ್ದಳು. ಆ ಸಮಯಕ್ಕೆ ಬೃಹಸ್ಪತಿ ಚೋಳನಲ್ಲಿಗೆ ಬಂದು ಆತನ ಮಗಳನ್ನು ಕಂಡು ಈಕೆ ಯಾರು ಎನ್ನಲು ರಾಜನು ಈಕೆ ನನ್ನ ಮಗಳು ಎಂದನು. ಆಗ ಬೃಹಸ್ಪತಿ ಈಕೆ ನಿಜವಾಗಿಯೂ ಪರಶಿವನ ಸುಕುಮಾರನಾದ ರೇಣುಕೇಶನಿಗೆ ಅರ್ಧಾಂಗಿಯಾಗತಕ್ಕವಳು ಎಂದು ಹೇಳಿ ಹೊರಟುಹೋದನು. ರಾಜದಂಪತಿಗಳಿಬ್ಬರೂ ಈ ವಾರ್ತೆಯಿಂದ ಸಂತಸಗೊಂಡು ಬಿನ್ನವತ್ತಳೆಯನ್ನು ಬರೆಸಿ ನಿಯೋಗಿಗಳನ್ನು ಬಿಜ್ಜಳನ ಆಸ್ಥಾನಕ್ಕೆ ಕಳಿಸಿಕೊಟ್ಟರು. ಅವರು ಮಂಗಳವಾಡಕ್ಕೆ ಬಂದು ರೇವಣಾಚಾರ್ಯನನ್ನು ಕಂಡು ಬಿನ್ನೈಸಿಕೊಂಡರು. ಈ ಸಂಗತಿಯನ್ನು ಕೇಳಿ ಬಿಜ್ಜಳನು ವ್ಯಾಕುಲನಾದನು. ರೇವಣಸಿದ್ಧ ಈಶ್ವರೇಚ್ಛೆಯಂತೆ ನಡೆಯಬೇಕೆಂದು ಹೇಳಿ ಬಿಜ್ಜಳನನ್ನು ಸಮಾಧಾನಪಡಿಸಿ ಬೇಗನೆ ಹಿಂತಿರುಗುವುದಾಗಿ ಹೇಳಿ ಚತುರಂಗಬಲ ಸಮೇತನಾಗಿ ಹೊರಟನು.

ಚೋಳರಾಜೇಂದ್ರ ರೇವಣಸಿದ್ಧನನ್ನು ಇದಿರ್ಗೊಂಡು ಸಕಲಮರ್ಯಾದೆಗಳೊಡನೆ ಕರೆದೊಯ್ದು ವಿವಾಹಕಾರ್ಯಗಳಿಗೆ ಅಣಿಮಾಡಿಕೊಂಡನು. ಮದುವೆಯಾದ ಮೇಲೆ ರೇವಣಸಿದ್ಧ ಕೆಲವು ದಿನಗಳು ಅಲ್ಲಿದ್ದು ಆಮೇಲೆ ನಾನಾದೇಶಗಳಿಗೆ ಹೋಗಿ ಅನೇಕ ರಾಜಸುತೆಯರನ್ನು ಮದುವೆಯಾಗಿ ಒಟ್ಟು ಮುನ್ನೂರುಜನರೊಡಗೂಡಿ ಮಂಗಳವಾಡಕ್ಕೆ ಹಿಂತಿರುಗಿದನು. ಬಿಜ್ಜಳನು ಅವರೆಲ್ಲರನ್ನೂ ಸ್ವಾಗತಿಸಿ ಅರಮನೆಗೆ ಕರೆತಂದನು. ಹೀಗಿರಲು ರೇವಣಸಿದ್ಧ ಆ ಕ್ಷೇತ್ರದಲ್ಲಿ ನದಿಯಿಲ್ಲದಿದ್ದೊಡೆ ಸಜ್ಜೀವನಂ ನಾಸ್ತಿ ಎಂದು ಆ ಪುರಕೆ ಜೀವನವೊ ಎಂಬಂತೆ ಒಂದು ಕೆರೆಯನ್ನು ಕಟ್ಟಿಸುವುದಕ್ಕಾಗಿ ಒಡ್ಡರನ್ನು ಕರೆಸಿ ಕಾರ್ಯವನ್ನು ಪ್ರಾರಂಭಿಸಿದನು. ಈ ಕಾರ್ಯಕ್ಕೆ ಶರಣತತಿ ಶಿವಾರ್ಚನೆಯ ಮಾಡಬೇಕೆಂದು ತನ್ನ ಹೆಂಡತಿಯರನ್ನೆಲ್ಲ ಕರೆಸಿ ಕಟ್ಟೆಗೆ ಮಣ್ಣುಹೊರುವ ಕಾರ್ಯಕ್ಕೆ ನಿಯೋಜಿಸಿದನು. ಅವರು ತಲೆಯ ಮೇಲೆ ಸಿಂಬಿಯನ್ನಿಟ್ಟುಕೊಂಡು ಮಣ್ಣುಹೊತ್ತು ಹಾಕುತ್ತಿದ್ದರು. ಎಲ್ಲ ರಾಜಪುತ್ರಿಯರೂ ಮಣ್ಣು ಹೊರುತ್ತಿರುವಾಗ ರಾಜೇಂದ್ರನ ಸುತೆ ಆಯಾಸದಿಂದ ನಿಂತುಕೊಳ್ಳಲು ರೇವಣಸಿದ್ಧ ಆಕೆಯ ಬಳಿಗೆ ಬಂದು ಕಾರಣವನ್ನು ಕೇಳಲು ಆಕೆ ತ್ರೈಮಾಸದ ಗರ್ಭಿಣಿ ಎಂದು ಸಖಿಯರು ಹೇಳಿದರು. ರೇವಣಸಿದ್ಧನು ಆಕೆಯ ಗರ್ಭವನ್ನು ಕೈಯಿಂದ ತಡಹಲು

ಗರ್ಭದ ಚಿದ್ಬಿಂಬ ರೇವಣಸಿದ್ಧನ ಅಂಗೈಗೆ ಬರಲು ಅದನ್ನು ಚಿದ್ಭಸ್ಮವಂಯ ತೊಟ್ಟಿಲಲ್ಲಿ ಮಡಗಿ ಪಂಚಾಕ್ಷರಿಯನ್ನು ಜಪಿಸುತ್ತಿದ್ದನು. ಆಮೇಲೆ ಕಟ್ಟೆಯ ಅಗ್ರಭಾಗದಲ್ಲಿ ಗುಣಿಮಾಡಿ ಆ ತೊಟ್ಟಿಲನ್ನು ಮಡಗಿದನು. ಆ ಗರ್ಭಪಿಂಡ ಮೋಕ್ಷದ ಪುಂಜದಂತೆ ಬೆಳೆಯುತ್ತಿತ್ತು. ಭಯಭೀತಳಾದ ರಾಜೇಂದ್ರಸುತೆಯನ್ನು ಪುಷ್ಪಕವಿಮಾನದಲ್ಲಿ ಕೈಲಾಸಕ್ಕೆ ಕಳಿಸಿ ತಾನು ತರುವಾಯ ಬರುವುದಾಗಿ ತಿಳಿಸಿದನು. ಆರುತಿಂಗಳಂ ಸುಖವಾಗಿದ್ದು ಪುತ್ರೋತ್ಸವದ ಬಯಕೆಯಾಗಲು ಬಿಜ್ಜಳನನ್ನು ಕರೆಸಿ ಸಮಸ್ತ ಪರಿವಾರದೊಂದಿಗೆ ಹೋಗಿ ಭೂಮಿಯಲ್ಲಿದ್ದ ತೊಟ್ಟಿಲನ್ನು ಹೊರತೆಗೆದು ಅದರಲ್ಲಿದ್ದ ಶಿಶುವನ್ನು ನೋಡಿದರು. ಆ ಮಗುವಿಗೆ ಭಸ್ಮಧಾರಣೆ ಮಾಡಿ ರುದ್ರಾಕ್ಷಿ ಶಿವಲಿಂಗವನ್ನು ಧರಿಸಿ ಪಾದಾಂಬು ಪ್ರಸಾದವನ್ನು ಕೊಟ್ಟು ಶರಣರಿಗೆ ವಸ್ತ್ರಾಭರಣಗಳನ್ನು ಹಂಚಿ ಜಂಗಮರಿಗೆ ಆ ಶಿಶುವಿನಿಂದ ನಮಸ್ಕಾರ ಮಾಡಿಸಿದನಂ. ಆ ಮಗುವಿಗೆ ರುದ್ರಮುನಿ ಎಂದು ನಾಮಕರಣ ಮಾಡಿ ಬಂಗಾರದ ತೊಟ್ಟಿಲಲ್ಲಿ ಮಲಗಿಸಿ ಸಕಲ ಸಂಭ್ರಮದಿಂದ ಕೊಂಡೊಯ್ದರು.

ಶಿವನು ಪಾರ್ವತಿಗೆ ಭಕ್ತನ ಉರುಮಹಿಮೆಯನ್ನು ವಿವರಿಸುತ್ತಿದ್ದನು. ಅನಾದಿ ಭಕ್ತನ ಮಹಿಮೆಯನ್ನು ಸ್ವಾನುಭವ ಶ್ರುತಿಸಿದ್ಧರಾದ ಶರಣರೇ ತಿಳಿದಿಹರು. ನಿತ್ಯಸತ್ಯ ಚಿನ್ಮಯ ಪ್ರಕಾಶನು ಪಂಕಜಗರ್ಭನೇ ಮುಖ್ಯಕೋಟಿಗೆ ಕಾರಣನಾದವನು. ಸರ್ವ ತತ್ವಕ್ಕಧೀನನಾದವನು. ನಿತ್ಯಾಶ್ರಯಾನಂದ, ನಿಜಮುಕ್ತಿದಾತ. ಇಂದ್ರಿಯ ವಿಷಯಂಗಳಿಗೆ ಅತೀತ. ಮನುಮುನಿಗಳಿಗೂ ಅಸಾಧ್ಯವಾದ ಪರಮಪದದೊಳಗೆ ಅನವರತವೂ ಆನಂದಿಸುತ್ತಿರುವನು. ಅಲಘುತರ ಪರಿಪೂರ್ಣನೂ, ನಿತ್ಯಗುರುತತ್ವನೂ, ಜಗಜನನಗತಿಲೀನನೂ, ಚಲನವಿಲ್ಲದ ಸ್ವಯಂಪ್ರಕಾಶನೂ ಸಚ್ಚಿದ್ರೂಪನೂ ಆದವನೇ ಪರಮಚರಲಿಂಗ. ಅನಾದಿಯ ಭಕ್ತನ ಹೃತ್ಪಂಕಜದ ಅಂತರಾಳದ ಪ್ರಣಮ ಪೀಠದಲ್ಲಿ ಥಳಥಳಿಸುವ ಅಂತರ್ಜ್ಯೋತಿಯೇ ತಾನು ಅನಾದಿ ಜಂಗಮ ಮೂರ್ತಿಯ ಆಕಾರವನ್ನು ತಳೆಯಲು ರುದ್ರಾದಿ ತತ್ವಮೂರ್ತಿಗಳೂ ಬ್ರಹ್ಮೇಂದ್ರಮುಖ್ಯರೂ ಜಂಗಮ ಚರಣವನ್ನು ಭಜಿಸುವರು.

ಪರಬ್ರಹ್ಮವು ನಿರಂಜನವೆನ್ನುತ್ತ ಉಪನಿಷತ್ತುಗಳೂ ಅಧಿಕದ ಪದಕ್ಕಧಿಕ ಜಂಗಮ ಲಿಂಗವೆಂದು ಪುರಾಣಗಳೂ ಹೇಳುತ್ತಿವೆ. ಸರ್ವಶೂನ್ಯವಾದ ನಿರುಪಮ ನಿರಂಜನವೆ ಜಂಗಮವೆಂದು ವೀರತಂತ್ರ ಹೇಳುತ್ತಿದೆ. ಶಿವಲೀಲೆಯಲ್ಲಿ ಭುವನ ಸೃಷ್ಟಿ ಸ್ಥಿತಿ ಸಂಹಾರಕ್ಕೆ ಅನಾದಿಮೂರುತಿ ಕಾರಣ ಎಂದು ಹೇಳಿದೆ.

ಪರಶಕ್ತಿಯಿಂದ ಆದಿಶಕ್ತಿ, ಅದರಿಂದ ಇಚ್ಛೆ. ಇಚ್ಛೆಯಿಂದ ಕ್ರಿಯಾಶಕ್ತಿ, ಕ್ರಿಯಾ ಶಕ್ತಿಯ ಸಹಸ್ರಾಂಶದಿಂದ ಜ್ಞಾನಶಕ್ತಿ—ಆ ಶಕ್ತಿಯ ಸಾಸಿರದಂಶವೇ ನೀನು ಎಂದು ವೀರಾಗಮ ಹೇಳುತ್ತದೆ. ಬ್ರಹ್ಮನ ಮುಖದಲ್ಲಿ ಬ್ರಾಹ್ಮಣ, ಭುಜದಲ್ಲಿ ಕ್ಷತ್ರಿಯ ತೊಡೆಯಲ್ಲಿ ವೈಶ್ಯರ ಜನನ. ಬ್ರಹ್ಮನ ಪಾದದಿಂದ ಶೂದ್ರ ಹುಟ್ಟಿದ. ರೋಮ

ರಾಜಿಯಲ್ಲಿ ಗಂಧರ್ವರು, ಜಂತು. ರಾಕ್ಷಸ, ಯಕ್ಷ, ಭೂತಗಣ ಕಾಲತ್ರಯಂಗಳುದಯ. ವೇದಗಳಂ ಮಂತ್ರಯಾಗಗಳು ಪೈತೃಕ. ಜ್ಞಾನ ಯಜನ ಯಾಜನ ಅಧ್ಯಯನ ಅಧ್ಯಾಪನ ದಾನಗ್ರಹಣ ಇವು ಷಟ್ಕರ್ಮಗಳು. ನ್ಯಾಯ, ವೈಶೇಷಿಕ, ಪೂರ್ವಮೀಮಾಂಸ ವೇದಾಂತ, ಸಾಂಖ್ಯ, ಪಾತಂಜಲ, ಇವು ಷಟ್ಸಮಯಂಗಳು. ರಜಸ್, ಸಾತ್ವಿಕ, ತಮೋಗುಣ ಇವುಗಳ ಆಯವೇ ಸ್ತ್ರೀ ಪುಂ ನಪುಂಸಕ ಎಂಬ ತ್ರಿಲಿಂಗಗಳ ಉತ್ಪತ್ತಿ. ಅಂಡಜ, ಸ್ವೇದಜ, ಜರಾಯುಜ, ಉದ್ಭಿಜ ; ಜೀವ ಪಿತೃ ಮಾತೃ ಬಂಧುಗಳು, ಸತಿ ಸುತರು ಮಿತ್ರ, ಅಷ್ಟಭೋಗ, ಧನ. ಧಾನ್ಯ, ಸಂಪತ್ತಿ, ಜಾತಿ ವರ್ಣಾಶ್ರಮ, ಕುಲಗೋತ್ರ ಕಾಮ ಷಡ್ಭ್ರಮೆ ಸಚರಾಚರ—ಇವೆಲ್ಲವೂ ಬ್ರಹ್ಮನ ಚಾತುರ್ಯದಿಂದ ಉದಿಸಿದವು. ಹೀಗೆ ಉದಯವಾದ ಸಚರಾಚರವು ಬ್ರಹ್ಮ ವಿಷ್ಣು ರುದ್ರ ಇವೆಲ್ಲ ಸವಿಶೇಷ ತತ್ತ್ವಗಳಂ. ಅನಾದಿ ಜಂಗಮೋದ್ಧರಣ ಮೂರ್ತಿ ಶೂನ್ಯವನ್ನು ಹೊಂದಿತಂ. ಆ ಮೂರ್ತಿಯಾದ ಜಂಗಮಂ ಮೂರುವಿಧವಾಯಿತು. ಜಂಗಮನು ಜಗದೀಶ, ಜಂಗಮನು ಹತಪಾಶ, ಜಂಗಮಂ ಮದನಾರಿ, ಪುರವೈರಿ, ಮುನಿಶೀಲ, ಘನಲೋಲ, ಜನನದೂರ, ಸ್ಥಿತಿರಹಿತ, ಮೃತಿರಹಿತ, ಸೃಷ್ಟಿಪಾಲನಹರಣ ಕಾರಣ. ವಿಧಿ ವಿಷ್ಣು ರುದ್ರರನ್ನೂ ನಿರ್ಮಿಸಿದ ಅನಾದಿಜಂಗಮವೇ ಪರಶಿವ. ಜಂ ಎಂಬ ವರ್ಣ ಚಿನ್ನಾದ, ಗ ಎಂಬ ಬೀಜ ಚಿದ್ಬಿಂದು, ಮಂ ಎಂಬ ಲಿಂಗ ಚಿತ್ಕಳೆ. ಜಂಗಮವು ತ್ರಿವಿಧ ವರ್ಣಪರ. ನಾದ ಬಿಂದು ಕಳೆ ಇವುಗಳ ಮೇಳದಿಂದ ಫಲಿತವಾದ ಓಂಕಾರವೇ ಸಾಕಲ್ಯಪ್ರಣವ, ಸದಾಶಿವ. ಆ ಸದಾಶಿವಮಯನು ಸರಳ ನಿಷ್ಕಳಚರ. ಕಲಾಲೀಲೆಗೋಸುಗ ಮಹೇಶ್ವರನಾದ. ಭಾಸುರ ಮಹೇಶ್ವರನೆ ಜಂಗಮಾಕಾರವನ್ನು ತಳೆದು ಶಾಶ್ವತ ಗುರುಚರ ಪರಂಪರೆಗಳೆನಿಸುತ್ತ ಪರಾಪರವಸ್ತುರೂಪವನ್ನು ತಳೆದು ಸಮಸ್ತರ ಕಿಲ್ಬಿಷಗಳನ್ನು ಕಳೆದು ಪಾವನ ಮಾಡಲು ಆಚರಿಸುತ್ತವೆ. ಜನನಕ್ಕೆ ಕಾರಣವಾದ ಜಾಕ್ಷರ ಗುರು. ರಕ್ಷಣೆಗೆ ಕಾರಣವಾದ ಗಾಕ್ಷರ ಚರ, ಪರತತ್ವಲಯಕೆ ಕಾರಣವಾದ ಮಾಕ್ಷರ ಪರ. ಇವು ತ್ರಿವಿಲಿಂಗಧ. ಸ್ವಯ ಚರ ಪರ ತ್ರಿತಯ ಜಂಗಮಲಿಂಗ ; ತ್ರೈಲಿಂಗ ತ್ರೈಗುರು ತ್ರೈಶೇಷವು ಅಸಾಧ್ಯವಾದುದಂ. ತ್ರಿಪಾದಾಂಬು, ಜಂಗಮಂ, ತ್ರೈವರ್ಣವು ಅಂಗಲಿಂಗಸಂಗ. ಈವರ್ಣವು ಒಂದಂ ಎರಡು ಮೂರು ಆರು ಹದಿನೆಂಟು ಮೂವತ್ತಾರಂ ಹೀಗೆ ನೂರೊಂದುಸ್ಥಲ. ಸಕಲ ಸರ್ವಾಚಾರ ಸಂಪತ್ತು ಸ್ಥಳಕುಳಗಳು ಎಂದು ತಿಳಿಯಬೇಕು. ತ್ರೈತತ್ವಮೇ ತ್ರಿಮೂರ್ತಿಗಳಾಗಿ ವಿಶ್ವಸಚರಾಚರ ಪ್ರಪಂಚವೆಲ್ಲವೂ ಜಂಗಮಂ ಎಂಬ ಮೂರಕ್ಷರದಲ್ಲಿ ಉದಿಸುತ್ತದೆ. ಸ್ವಯಸಂಗಮವು ದೃಢವ್ರತದಿಂದ ಅಹಿಂಸೆಯಿಂದ ಪಂಚೇಂದ್ರಿಯದ ಪ್ರೀತಿಯ ನಿವೃತ್ತಿಯಿಂದ ಪರಮಾತ್ಮಯೋಗದಲ್ಲಿ ಮನವನ್ನು ಸಂಗಶಿಮಾಡಿದುದರಿಂದ ಮೋಕ್ಷವಾಗುತ್ತದೆ. ಆತನು ಮನುಜರನ್ನು ಮನಸ್ಸಿನಲ್ಲಿ ಗಣಿಸದೆ ಮಹಾಕಾಂತಾರವನ್ನು ಸೇರಿ ಲಿಂಗದಲ್ಲಿ ಪರಿಣಾಮಹೊಂದುತ್ತಾನೆ. ಮಯಿತ್ತುಗ ತೇಗದ ಮರದ ಪೊಟರೆಗಳಲ್ಲಾಗಲಿ ಗುಹೆಗಳಲ್ಲಾಗಲಿ ಜಲಾಂತರದಲ್ಲಾಗಲಿ ಶಿಲೆಯ ಮಧ್ಯದಲ್ಲಾ

ಮರದ ಅಡಿಯಲ್ಲಾಗಲಿ ನೆಲಸಿ ದೃಢವಾದ ಮನಸ್ಸಿನಿಂದ ಪರಚಿಂತೆಯನ್ನು ಬಿಟ್ಟು ಶಿವಚಿಂತೆಯಲ್ಲಿ ನಿಂದವನೇ ಸ್ವಯಜಂಗಮು. ಜಡೆಯನ್ನು ಬಿಟ್ಟು ವಲ್ಕಲವನ್ನು ಧರಿಸಿ ಹುಲಿಯ ಚರ್ಮ ಜಿಂಕೆಯ ಚರ್ಮದ ಮೇಲೆ ಕುಳಿತು ಯಾವಾಗಲೂ ಭಸ್ಮವನ್ನು ಧರಿಸುತ್ತ ಮಂತ್ರವನ್ನು ಸದಾ ಜಪಿಸುತ್ತ ಎಲ್ಲ ವಸ್ತುಗಳನ್ನು ಜಂಗಮಭಾವದಿಂದ ನೋಡುವವನೇ ಸ್ವಯಜಂಗಮ. ಈ ಜಂಗಮದ ಕ್ರಿಯಾಜಾಲವೆಲ್ಲ ಸುಜ್ಞಾನಮಯ. ಶಿವಲಿಂಗ ಮುಖದಲ್ಲಿ ಬರುವ ಪ್ರತಿಪದಾರ್ಥವನ್ನು ಶಿವಲಿಂಗಕ್ಕೆ ಕೊಟ್ಟು ಕಂದಮೂಲಗಳನ್ನು ಚಿಗುರೆಲೆ ಹಣ್ಣುಗಳನ್ನು ಸ್ವೀಕರಿಸುತ್ತ ಅವಿರತವಾಗಿ ನೆಲಸಿರುವುದು, ಇದನ್ನು ಬಿಟ್ಟು ಪುಂಗ್ರಾಮಕ್ಕೆ ಅಡಿಯಿಟ್ಟರೆ ಭಾಷೆ ತಪ್ಪಿದಂತಾಗುವುದು. ಯಾರಿಂದಲೂ ಸೇವೆಯನ್ನು ಮಾಡಿಸಿಕೊಳ್ಳದೆ ತಾನೆ ಹೋಗಿ ಅವರ ಸೇವೆಯನ್ನು ಸ್ವೀಕರಿಸಬೇಕು. ಭಕ್ತರ ಮನೆಗೆ ಹೋಗಿ ಬೇಡಿದರೆ ಕರ್ತೃತ್ವಹಾನಿ ಎಂದಿರುವವನೇ ಸ್ವಯಜಂಗಮ. ಜಡೆ ಮುಡಿಗಳನ್ನು ಬಿಟ್ಟು ಮೌಂಜಿ ಮೇಖಲೆ ಶಿವಸೂತ್ರಗಳನ್ನು ಧರಿಸಿ ಜಲಪಾತ್ರೆಯನ್ನು ಹಿಡಿದು ಶಿವಲಿಂಗವನ್ನು ತ್ರಿಕಾಲದಲ್ಲೂ ಭಜಿಸುತ್ತ ಭಕ್ತರು ವಿನಯದಿಂದ ವರ್ತಿಸಿದರೆ ಸೇವೆಯನ್ನು ಸ್ವೀಕರಿಸುವುದು. ಉದಾಸೀನವನ್ನು ತೋರಿದರೆ ಅವರನ್ನು ತ್ಯಜಿಸುವವನೇ ಸ್ವಯಜಂಗಮ. ಅಹಂಕಾರವನ್ನುಳಿದು ಐಶ್ವರ್ಯವನ್ನು ಪಡೆದು ನಿಜತತ್ವವನ್ನು ನೆಮ್ಮಿ, ಅಪೇಕ್ಷೆಗಳನ್ನೆಲ್ಲ ತೊರೆದು, ಶಾಂತಿಯಿಂದಲೂ, ನಿರ್ವೈರದಿಂದಲೂ ಸುಖದುಃಖ ನಿಂದೆ ಸ್ತುತಿಯನ್ನು ಒಂದೇರೀತಿ ಭಾವಿಸಿ, ನಿರ್ಮಲತ್ವವನ್ನು ಹೊಂದಿ, ಬ್ರಹ್ಮದ ನೆಲೆಯನ್ನರಿದು ಸೈಪಿನಿಂದಿರುವವನೇ ಸ್ವಯಜಂಗಮ. ಶಿವಶಾಸ್ತ್ರ ಶಿವಪುರಾಣ ಶಿವತತ್ವ ಶಿವಪೂಜೆ ಇವೇ ಮೊದಲಾದುವನ್ನು ಮಾಡುತ್ತ ನಿತ್ಯಾನಂದ ಸಿದ್ಧಿಕರನೂ ಅವಿರಳ ಪರಬ್ರಹ್ಮನಾಗಿರುವವನೇ ಸ್ವಯಜಂಗಮ. ಈತನು ರುದ್ರನಿಂದ ಕಳಿಸಲ್ಪಟ್ಟವನು. ಚರಲಿಂಗ ರೂಪವನ್ನು ವಹಿಸಿಕೊಂಡು ಸಚರಾಚರಾತ್ಮಕವಾದ ಜಗತ್ತಿನೊಳಗೆ ಪರಮಚೈತನ್ಯಮಯನೂ ಪರಿಪೂರ್ಣನೂ ಪರತತ್ವ ಪರಬ್ರಹ್ಮ ಪರಮಾತ್ಮ ಪರಮಜಂಗಮವಾಗಿ ಪಾಪಪಂಕವನ್ನು ತೊಳೆಯುತ್ತ ಭಕ್ತರನ್ನು ಕಾಪಾಡುತ್ತ ಮೆರೆಯುತ್ತಿರುವ ಚರಲಿಂಗಮೂರ್ತಿಯೇ ಮಹಾಘನ ಎಂದು ರೇವಣಸಿದ್ಧ ಹೇಳಿದನು. ಜಗತ್ಪಾವನಾರ್ಥವಾಗಿ ಧರೆಯಲ್ಲಿ ಚರಿಸುತ್ತ ಸಮಯಾಚಾರ ಸುವಿಚಾರಗಳನ್ನು ವಿವರಿಸುತ್ತ ಕುಲಶೀಲವ್ರತಗಳನ್ನು ನಿಯಮಿಸುತ್ತ ಪತಿತರನ್ನು ವಿಸರ್ಜಿಸಿ ಶಿವದೀಕ್ಷಿತರ ಹಿಡಿಸುವುದೇ ಚರಲಿಂಗವು. ಜಡೆಯನ್ನು ಬಿಟ್ಟು ಕಾಷಾಂಬರವನ್ನು ಧರಿಸಿ, ಕರ್ಣಕುಂಡಲಗಳಲ್ಲಿಯೂ ಭುಜಕಟಕಗಳಲ್ಲಿಯೂ ಮುತ್ತಿನ ಹಾರ ರುದ್ರಾಕ್ಷಿಸರಗಳನ್ನು ಧರಿಸಿ ಮನಸ್ಸುಬಂದಕಡೆ ಚರಿಸುವವನೇ ಚರಜಂಗಮ. ತ್ರಿಮಲದಾಸೆಯನ್ನು ಬಿಟ್ಟು ಭಕ್ತರಲ್ಲಿ ಭಕ್ತಿಭಿಕ್ಷವನ್ನು ಬೇಡುತ್ತ ಚರಲಿಂಗ ನಾಮವನ್ನು ಧರಿಸುತ್ತ ಕಾಮಾದಿ ರಿಪುಷಡ್ವರ್ಗವನ್ನು ಜಯಿಸಿ ಅಂತರಂಗ ಬಹಿರಂಗವನ್ನು ಗೆದ್ದು ಜಯಶೀಲನಾಗುತ್ತ ತನ್ನ ಅನುಭವದ ಮೇರೆಗೆ ಚರಿಸುವವನೇ ಚರಲಿಂಗ. ಗುರುಮುಖದಿಂದ ಬಂದುದನ್ನು

ಸ್ವೀಕರಿಸುತ್ತ ಶಿವಾರ್ಪಣೆಮಾಡಿ ಶರಣರೊಡನೆ ಸಂಚರಿಸುತ್ತ ಕ್ಷೇತ್ರಗಳನ್ನು ಪಾವನ ಮಾಡಿ ಸಮತೆ ಎಂಬ ಕಥೆಯನ್ನು ಧರಿಸಿ ಸುಜ್ಞಾನವೆಂಬ ಕೋಟರದಿಂದ ಚರಿಸುವವನೇ ಚರಲಿಂಗ. ವಿದಿತವಾದ ವ್ರತಗಳನ್ನು ವಿಾರಿ ಸದಮಲಬ್ರಹ್ಮ ಭಾವನೆಯಿಂದ ಸರ್ವ ವನ್ನು ಚೆನ್ನಾಗಿ ನೋಡುವವನೇ ಪರತತ್ವರೂಪನಾದ ಪರಜಂಗಮ. ಸತ್ಯವೆನಿಸುವ ಸ್ವಾನುಭವವೆ ಶಿವದಾರ, ಅತ್ಯಧಿಕ ದರವೇ ಕಪ್ಪಡ. ಶಾಂತಿಯೇ ಭಸಿತ, ದಯೆಯೇ ರುದ್ರಾಕ್ಷಿ, ಶುಭಪಂಚಲಕ್ಷಣಗಳೇ ಪಂಚಾಕ್ಷರ, ಹೃದಯವೇ ಸೆಜ್ಜೆ. ಅನಿತ್ಯ ಚೈತನ್ಯ ಲಿಂಗವನ್ನು ಅಂಗವಸ್ತ್ರದಲ್ಲಿ ಆತ್ಮನ ಅಂತರಾಳದ ಪಸರದಲ್ಲಿ ಧರಿಸಿ ಚರಿಸುವವನೆ ಪರಜಂಗಮ. ಅನಾದಿ ಜಂಗಮದಿಂದ ಸೃಷ್ಟಿಯ ಪರಿವಿಡಿಯನ್ನು ಹೇಳಿ ಸ್ವಯಂಚರ ಪರಸ್ಥಲ ತ್ರಿವಿಧ ಲಕ್ಷಣಗಳನ್ನು ನಿರೂಪಿಸಿದನು. ಪ್ರಮಥೇಶರು ಭೂಮಿಯಲ್ಲಿ ಅವ ತರಿಸಿ ವಿರಾಜಿಸುವ ನಂದಿಯೇ ತನಗೆ ಮಗನಾಗಬೇಕೆಂದು ವಿಭಾಂಡುಕನ ಹೆಂಡತಿ ಕಂದಮೂಲ ಫಲಗಳನ್ನು ಸೇವಿಸುತ್ತ ಉಗ್ರತಪವನ್ನು ಮಾಡಲು ಆಕೆಯ ತಪಸ್ಸಿಗೆ ಮೆಚ್ಚಿದ ಶಿವನು ಆಕೆಯ ಇಷ್ಟಫಲವನ್ನು ಬೇಡುವಂತೆ ಹೇಳಿದನು. ನೀವು ದನುಜ ರೂಪವನ್ನು ನೀಗಿ ಭೂಲೋಕದಲ್ಲಿರುವ ರಜತನಗದ ದಕ್ಷಿಣಭಾಗದ ಭರತಖಂಡದ ನೈರುತ್ಯದಲ್ಲಿರುವ ದೇಶದಲ್ಲಿ ಬ್ರಾಹ್ಮಣವಂಶದಲ್ಲಿ ಹುಟ್ಟಿ ಪುತ್ರಮೋಹದಿಂದ ನೋಂಪಿ ಗಳನ್ನು ಆಚರಿಸಿ. ಅದರಲ್ಲಿ ನಂದಿಯ ವ್ರತದಿಂದ ನಿಮ್ಮ ಇಷ್ಟಾರ್ಥ ಸಿದ್ಧಿಸುತ್ತದೆ: ನಿಮ್ಮಭೀಷ್ಟಕ್ಕಾಗಿಯೂ ಶಿವಮತೋದ್ಧರಣ ಕಾರಣವಾಗಿಯೂ ನಂದಿ ನಿಮಗೆ ಮಗ ನಾಗಿ ಜನಿಸಿ ಉಪನಯನವನ್ನು ತಿರಸ್ಕರಿಸಿ ವೀರಶೈವಾಚಾರದಲ್ಲಿ ನಿಷ್ಠೆಯನ್ನು ಹೊಂದಿ ಮಂಗಳಪುರಿಗೆ ಹೋಗಿ ಉತ್ಕೃಷ್ಟ ಶಿವಮಹಿಮೆಯನ್ನು ದೃಷ್ಟಿಗೋಚರವಮಾಡಿ, ಬಿಜ್ಜಳ ನಿಗೆ ಅರುಹಿ ಆಮೇಲೆ ನಮ್ಮಲ್ಲಿ ಸೇರುತ್ತಾನೆ'' ಎಂದು ಹೇಳಿ ಅಂತರ್ಧಾನನಾದನು. ಶಿವನು ಕೈಲಾಸಕ್ಕೆ ಹೋಗಿ ಈ ವಾರ್ತೆಯನ್ನು ರುದ್ರಗಣವೃಂದಕ್ಕೆ ತಿಳಿಸಲು ಅವರು ಸಂತೋಷದಿಂದ ಧರಾಮಂಡಲಕ್ಕೆ ಹೋಗುವೆವು ಎಂದರು. ಅದಕ್ಕೆ ಶಿವ ನೀವು ಈಗಲೇ ಏಕೆ ಭೂಲೋಕಕ್ಕೆ ಹೋಗಬೇಕು ಎನ್ನಲು ರುದ್ರಗಣನಾಯಕರೊಳಗೆ ಮುಖ್ಯ ನಾದ ರುದ್ರೇಶ್ವರ ಈಗಾಗಲೇ ರೇಣುಕನ ಹೆಂಡತಿ ಜಯೆ ಎಂಬುವಳಲ್ಲಿ ಹುಟ್ಟಿ ಭೂಮಿ ಯಲ್ಲಿ ಬೆಳೆಯುತ್ತಿದ್ದಾನೆ, ಆದುದರಿಂದ ಹೋಗಬೇಕು ಎನ್ನಲು; ಆಗ ಶಿವನು ರುದ್ರ ಗಣವನ್ನು ಕರೆದು ಅವರ ಮುಂದೆ ಗೋಕರ್ಣಹವನವನ್ನು ನಿರ್ಮಿಸಿದನು. ರುದ್ರಗಣ ಗೋಕರ್ಣಯಜ್ಞಕುಂಡದ ಪಥದಲ್ಲಿ ಹೋಗುತ್ತ ಮರ್ತ್ಯದ ಕಡೆ ಹೋಗಬೇಡಿ ಎನ್ನಲು ಕೆಲವರು ಇಷ್ಟಲಿಂಗವನ್ನು ಅಂಗೈಯಲ್ಲಿ ಹಿಡಿದುಕೊಂಡು ನಿಟ್ಟಿಸುತ್ತ ಶಿವಮಂತ್ರವನ್ನು ಮನಸ್ಸಿನಲ್ಲಿ ಜಪಿಸುತ್ತ ಏಕವಿಂಶತಿಸಹಸ್ರಅಗ್ನಿಯನ್ನು ಪ್ರವೇಶಿಸಿದರು. ಅವರು ಭೂಲೋಕದಲ್ಲಿ ಅವತರಿಸಿ ಈಶ್ವರನ ಅಪ್ಪಣೆಯಂತೆ ನಿಮ್ಮೊಡನೆ ಆಲೋಚನೆ ಮಾಡುತ್ತ ಲಿಂಗಾನುಭವದಲ್ಲಿ ಸುಖದಿಂದಿದ್ದಾರೆ.

ಬಸವೇಶ ಚೆನ್ನಬಸವ ಮೊದಲಾದ ಗಣಸಮೂಹ ಅನುಭವಮಂಟಪದಲ್ಲಿ

ಹನ್ನೆರಡುಸಾವಿರ ಷಟ್ಸ್ಥಲಬ್ರಹ್ಮಿಗಳೂ, ವೀರಮಾಹೇಶ್ವರರೂ ವಿಚಾರಮಂಟಪ ದೊಳಗೆ ನೆಲೆಗೊಂಡಿದ್ದಾರೆ, ಇವರು ಲೆಕ್ಕಮಾಡಿದರೆ ಲಕ್ಷತೊಂಬತ್ತಾರುಸಾವಿರ, ಇವರು ಚರಲಿಂಗಸ್ವಾಮಿಗಳು. ನಾವು ನಿರ್ಮಿಸಿರುವ ತ್ರಿಪುರಾಂತಕ ಕೆರೆಯ ಪ್ರದೇಶದ ಪಶ್ಚಿಮದಕಡೆ ಇರುವ ಚಂಗಲ್ಲಮಂಟಪದಲ್ಲಿ ಕೆಲವರು ಇಪ್ಪತ್ತೊಂದುಸಾವಿರ ಚರಲಿಂಗ ಮೂರ್ತಿಗಳು ಬಸವಣ್ಣನ ದಾಸೋಹಕ್ಕೆ ನೆಲಸಂವರು.

ಬಹಳ ಮಹಿಮರಾದ ಜಂಗಮರು ತಮ್ಮ ಚಿತ್ತಾನುಸಾರಕ್ಕೆ ಯೋಗ್ಯವಾದ ಸ್ಥಳಗಳಲ್ಲಿ ನೆಲೆಗೊಳ್ಳುತ್ತಾರೆ. ಬಸವೇಶ್ವರನು ಈ ಜಂಗಮರನ್ನು ಕಂಡು ಅವರವರಿಗೆ ಬೇಕಾದಷ್ಟು ದ್ರವ್ಯವನ್ನು ಪ್ರೀತಿಯಿಂದ ಸಲಿಸಂತ್ತಾನೆ. ಹೀಗೆ ಬಸವಣ್ಣ ಜಂಗಮಸೇವೆ ಮಾಡುತ್ತಿರುವಾಗ ಹನ್ನೆರಡುಸಾವಿರ ವಿಟಜಂಗಮ ಅಲ್ಲಿ ನೆಲಸಿತ್ತು. ಅವರಲ್ಲಿ ಒಬ್ಬ ನಾದ ಮಿಂಡಮಲ್ಲಿನಾಥನೆನ್ನುವನು ಬಂದು ಬಿಜ್ಜಳನ ಅಂತಃಪುರವನ್ನು ನೋಡಬೇಕು ಎಂದು ಬಸವೇಶನನ್ನು ಕೇಳಿಕೊಳ್ಳುವನು. ಕೂಡಲೇ ಬಸವೇಶ ಇಬ್ಬರು ಚರರ ಜೊತೆ ಕಳಿಸಿದನು. ಬಿಜ್ಜಳನ ಅರಮನೆ ಕೋಶಾಗಾರ ಎಲ್ಲವನ್ನು ಆ ವಿಟಜಂಗಮ ನೋಡಿ ಕೊಂಡು ಬರುತ್ತಿದ್ದನು. ಆಗ ರಾಣಿವಾಸದಲ್ಲಿದ್ದ ಆಂಧ್ರದೇಶದ ರಾಜಕುವರಿ ಲೋಹಿತಾಂಬರೆ ಎಂಬುವಳ ಸಖಿ ಗಿಳಿಯನ್ನು ಹಿಡಿಯಲು ಹೋಗಿ ಆ ವಿಟನನ್ನು ಎವೆಯಿಕ್ಕದೆ ನೋಡಿ ಮೋಹಗೊಳ್ಳುವಳು. ಅವಳು ಹೇಳಿದ್ದನ್ನು ಕೇಳಿದ ರಾಜ ಕುಮಾರಿ ಆ ವಿಟನನ್ನು ಒಳಕ್ಕೆ ಕರೆಸಿ ಅವನನ್ನು ವಿವಿಧೋಪಚಾರಗಳಿಂದ ಸತ್ಕರಿಸಿ ಕಾಮಕಲೆಯನ್ನು ಬೀರುತ್ತಾ ವಿಟನ ಸಂಭೋಗಕ್ಕೆಳಸಿದಳು. ಅದಕ್ಕೆ ಅವನು ಒಪ್ಪ ದಿರಲು ಕಂಠಮಾಲೆಯನ್ನು ಹರಿದುಹಾಕಿ ತಲೆಗೂದಲನ್ನು ಕೆದರಿಕೊಂಡು ರೋದಿಸಿದಳು. ಆ ರೋದನ ತನ್ನ ಕುವರಿಯದೆಂದು ತಿಳಿದ ರಾಜನು ಅಲ್ಲಿಗೆ ಬಂದು ನೋಡಿ ಅವರಿಬ್ಬ ರನ್ನು ಕೊಂದುಹಾಕಬೇಕೆಂದು ಯೋಚಿಸಿ ಬಿಜ್ಜಳನಿಗೆ ದೂರಿದನು. ಆಗ ಬಿಜ್ಜಳನು ಬಸವಣ್ಣನನ್ನು ಕರೆಸಿ ಆ ವಿಟಜಂಗಮನನ್ನು ಅರಮನೆಗೆ ಕರೆಸಿ ನಮಗೆ ಅಪಕೀರ್ತಿ ಯನ್ನುಂಟುಮಾಡಬೇಕೆಂದಿರುವೆಯ ಎಂದು ಪ್ರಶ್ನಿಸಿದನು. ಬಸವಣ್ಣ ವಿನಯದಿಂದ ''ಎಲೈ ರಾಜನೆ ಅರಸನಿಗೆ ಆರುಬಾಯಿ ಎಂಬುದು ಇಂದು ನಿಜವಾಯಿತು. ನಾನು ಕಳಿ ಸಿದ ಜಂಗಮ ನಿಮ್ಮ ಅರಮನೆಯನ್ನು ನೋಡುವುದಕ್ಕೆ ಬಂದವನೇ ಹೊರತು ಪಾಪ ಕೃತ್ಯಮಾಡಲು ಬಂದವನಲ್ಲ. ಹೆಂಗಸರಿಗೆ ಅನೃತ ಅಸ್ಥಿರಬುದ್ಧಿ ಸಹಜವಾದುದು. ಇದನ್ನು ವಿಚಾರಮಾಡದೆ ನೀನು ಹೀಗೆ ಹೇಳಬಹುದೆ'' ಎನ್ನಲು, ಬಿಜ್ಜಳನು ಬಸವಣ್ಣ ನನ್ನು ಕರೆದುಕೊಂಡು ಅವರಿಬ್ಬರೂ ಇದ್ದ ಕತ್ತಲೆಯ ಕೋಣೆಯನ್ನು ತೋರಲು. ಅಲ್ಲಿದ್ದ ಮಿಂಡಮಲ್ಲೇಶ ಬಸವಣ್ಣನನ್ನು ಕುರಿತು ''ಎಲೈ ಬಸವೇಶನೆ ಬಿಜ್ಜಳನ ನವೀನಾ ಲಯವನ್ನು ನೋಡಬೇಕೆಂದರೆ ಈ ಕತ್ತಲಗವಿಯನ್ನು ನೋಡುವ ನೋಟ ಸಾಕು'' ಎಂದು ಹೇಳಿ ಅಲ್ಲಿಂದ ಹೊರಬಂದು ಬಸವನಿಗೆ ನಮಸ್ಕರಿಸಿದನು. ಆಗ ಬಸವಣ್ಣ ಆ ಹೆಂಗಸನ್ನು ಭಾವಪರುಷದಿಂದ ನೋಡಿ ''ನೀನು ಯಾರು'' ಎಂದು ಕೇಳಲು ತಾನು

ಮುಕ್ತಿವಧು ಎಂದು ಹೇಳಿ ಬಸವೇಶನಿಗೆ ನಮಸ್ಕಾರಮಾಡಿ ಕೈಲಾಸಕ್ಕೆ ಹೊರಟು ಹೋದಳು. ಲೋಹಿತಾಂಬರೆ ನನ್ನನ್ನು ಬಿಟ್ಟುಹೋದಳೆಂದು ಬಿಜ್ಜಳ ಚಿಂತಿಸಲು ಬಸವಣ್ಣ ನಿನ್ನ ವೀರಲಕ್ಷ್ಮಿ ಜಂಗಮದಿಂದ ಮುಕ್ತಿಯನ್ನು ಪಡೆದಳು. ಕೈವಲ್ಯಸತಿ ನಿನ್ನರಸಿ ಹಕ್ಕೆಯಲ್ಲಿದ್ದಾಳೆ ಎಂದು ಕೈಹಿಡಿದು ಕರೆದುಕೊಂಡು ಹೋಗಿ ತೋರಲು ಬಿಜ್ಜಳ ಬೆಕ್ಕಸಬೆರಗಾದನು. ಸ್ತ್ರೀಹತ್ಯೆ ಜಂಗಮದ್ರೋಹಕ್ಕಿಂತ ಅಧಿಕವಾದುದು. ಇದಕ್ಕೆ ಪ್ರಾಯಶ್ಚಿತ್ತವೇನೆಂದು ಬಿಜ್ಜಳ ಕೇಳಲು ಬಸವ ಅದಕ್ಕೆ ಮಾಡಬೇಕಾದ ವಿಧಿಯನ್ನು ಹೇಳಿದನು. ಜಂಗಮಮೂರುತಿಗಳನ್ನು ಭಕ್ತಿಯಿಂದ ತೃಪ್ತಿಪಡಿಸಬೇಕು. ಮಿಂಡಮಲ್ಲಿನಾಥಯ್ಯನ ಕಂಥೆಯನ್ನು ಹರಿದುಹಾಕಿದುದಕ್ಕೆ ಸಾವಿರ ಸಂಖ್ಯೆಯಲ್ಲಿ ಚಿನ್ನಾದ ಕಂಥೆಗಳನ್ನು ಕೊಟ್ಟು ಪೂಜಿಸಬೇಕು ಎನ್ನಲು ಬಿಜ್ಜಳ ಕನಕಕಂಥೆ ರನ್ನಕಂಥೆ ಬಜ್ಜರಕಂಥೆಯೇ ಮೊದಲಾದ ನಾನಾವಿಧವಾದ ಕಂಥೆಗಳನ್ನು ಕೂಡಿಸಿ ಜಂಗಮರಿಗೆ ಕೊಟ್ಟನು. ಈ ಕಂಥೆಗಳನ್ನು ಧರಿಸಿದ ಜಂಗಮರು ಆಯಾ ಕಂಥೆಗಳ ಹೆಸರಿನಿಂದ ಪ್ರಸಿದ್ಧರಾಗಿ ಕಲಿಯುಗದಲ್ಲಿ ಬಗೆಬಗೆಗಳಾಗುವರು ಎಂದು ರೇವಣೇಶ ಹೇಳಿದನು. ರುದ್ರಮುನಿದೇವ ಬಹಳ ಪವಾಡಗಳನ್ನು ಮಾಡುತ್ತ ಬಗೆಬಗೆಯ ಹೆಸರುಗಳನ್ನು ಹೊಂದಿ ಪ್ರಸಿದ್ಧನಾಗುತ್ತಾನೆ. ನಿಮ್ಮ ವಂಶದ ಮಲ್ಲಿಕಾರ್ಜುನನೆಂಬ ಶಿವಯೋಗಿ ದುಷ್ಟತುರುಕರ ಗುರುವಾದ ಕಬೀರನನ್ನು ಜೈಸಿ ಅವನ ರೂಪುಗಳನ್ನು ಸೆಳೆದುಕೊಂಡು ಜಂಗಮಕ್ಕೆ ಕೊಡುವನು. ಏಳುನೂರು ಕಲಂಧರರನ್ನು ಶಿಷ್ಯರನ್ನಾಗಿ ಮಾಡಿಕೊಂಡು ಮಕ್ಕೆಗೆ ಹೋಗಿ ಬಹಳ ಮಹಿಮೆಯನ್ನು ಮೆರೆದು ತುರುಕರಾಜ್ಯದಲ್ಲಿ ಮಳೆ ಇಲ್ಲದಂತಾಗಲು ಏಳುದಿನ ಪರ್ಯಂತ ಮಳೆಯನ್ನು ಸುರಿಸಿ ಸುಲ್ತಾನನಿಂದ ವಿಶೇಷವಾದ ಪೂಜೆಯನ್ನು ಪಡೆದು ಮಳೆಯುಮಲ್ಲೇಶನೆಂದು ಪ್ರಖ್ಯಾತಿಹೊಂದುವನು. ಈ ರೀತಿ ಜಂಗಮಸ್ಥಳ ಕುಳದ ನೆಲೆಯ ಆದ್ಯಂತವನ್ನು ತಿಳಿಸಿ ರಾಜೇಂದ್ರಚೋಳನನ್ನು ಬಿಜ್ಜಳನನ್ನು ಮಹಾಮಹೇಶ್ವರ ಭಕ್ತರನ್ನು ಕರೆಸಿ ರುದ್ರಮುನಿದೇವರಿಗೆ ಗುರುಪಟ್ಟವನ್ನು ಕಟ್ಟಿ ಆತನೊಡನೆ ದೇಶವನ್ನೆಲ್ಲ ಸಂಚರಿಸಿ ಹಾವಿನಹಾಳಕಲ್ಲಯ್ಯನಿಗೆ ಹರದೀಕ್ಷೆಯನ್ನು ಕೊಡಿಸಿದನು. ಸೊನ್ನಲಾಪುರಕ್ಕೆ ಬಂದು ಚಾಮಲದೇವಿಯಲ್ಲಿ ಸಿದ್ಧರಾಮ ಜನಿಸುವನೆಂದು ಹೇಳಿ ಮಂಗಳವಾಡಕ್ಕೆ ಹಿಂತಿರುಗಿ ಸುಕುಮಾರನೊಡನೆ ಸುಖದಿಂದಿದ್ದನು.

## ತೃತೀಯಕಾಂಡ

ಲಕ್ಷ್ಮಿ ಕೊಲ್ಲಾಪುರದ ಮಾಯೆಯೆಂಬ ನಾಮವನ್ನು ಧರಿಸಿ ದೇವದಾನವ ಮನುಜರಿಂದ ಸೇವ್ಯಳೆನಿಸಿ ಸಲ್ಲೀಲೆಯಿಂದಿದ್ದಳು. ನವನಾಥಸಿದ್ಧರು ನವಕೋಟಿ ಸಿದ್ಧವಿತತಿ ಕೊಲ್ಲಾಪುರದ ಮಾಯೆಯನ್ನು ಸೋಲಿಸುತ್ತೇವೆಂದು ಬರಲು ಅವರೆಲ್ಲರನ್ನೂ ಭಂಗಿಸಿ ಮೂಗಿಗೆ ಕವಡೆ ಕಟ್ಟಿ ನೀರನ್ನು ಹೊರುವಂತೆ ಮಾಡಿದಳು. ಅವರಿಂದ ನಾನಾಬಗೆಯ ಸೇವೆಮಾಡಿಸುತ್ತಿದ್ದಳು. ಈ ವಾರ್ತೆಯನ್ನು ಮರುಳಸಿದ್ಧ ಕೇಳಿ ಕೋಪವನ್ನು ತಾಳಿ ತ್ರಿಶೂಲವೇ ಮೊದಲಾದ ಆಯುಧಗಳನ್ನು ವೇಷಭೂಷಗಳನ್ನು

ಧರಿಸಿ ಶಿಷ್ಯರ ಸಮೇತ ಕೊಲ್ಲಾಪುರಕ್ಕೆ ಬಂದನಂ. ನವಕೋಟಿ ಸಿದ್ಧರು ಮರುಳ ಸಿದ್ಧನನ್ನು ಸ್ವಾಗತಿಸಿ ಸ್ತುತಿಸಿ ಮಾಯೆಯನ್ನು ಸಂಹರಿಸೆಂದು ಕೇಳಿಕೊಂಡರಂ. ಮರುಳಸಿದ್ಧ ಅರಮನೆಗೆ ಬಂದು 'ಭಿಕ್ಷಾ' ಎಂದನಂ. ಆ ಯತಿಯ ಮುಖವನ್ನು ನೋಡಿದ ಮಾಯೆ ''ಪತಿಗಳಿಲ್ಲದ ಮನೆಗೆ ಯಂತಿ ಬರಬಹುದೆ? ನಿನ್ನದೇಶವಾವುದು? ನೀನು ಸಿದ್ಧನೋ ಭಿಕ್ಷಾರ್ಥಿಯೋ ಕುಟಿಲಯತಿಯೋ ಯೋಗಿಯೋ ? ಅತಿಶಯದ ವಿದ್ಯೆಗಳನ್ನು ನನ್ನಲ್ಲಿ ತೋರಿ ಮುಂದಕ್ಕೆ ಹೋಗು'' ಎಂದಳಂ. ಆದಕ್ಕೆ ಮರುಳಸಿದ್ಧ ''ನಾನು ಏನು ವಿದ್ಯೆಗಳನ್ನು ಬಲ್ಲೆ ; ನಾನುಪರದೇಶಿ, ನನಗೆ ಭಿಕ್ಷವನ್ನು ನೀಡಿಸಿ'' ಎನ್ನಲು ಮಾಯೆ 'ಆತನಿಗೆ ವಿಷಭಿಕ್ಷವನ್ನು ನೀಡುವಂತೆ ಸೇವಕಿಯರಿಗೆ ಹೇಳಿದಳು. ಅವರು ವಿಷಪೂರಿತವಾದ ಭಿಕ್ಷವನ್ನು ತಂದು ''ಭಿಕ್ಷವ ಕೊಳ್ಳೊ ಮರುಳ'' ಎನ್ನಲು ಸಿದ್ಧೇಶ ಕುಳಿತುಕೊಂಡು ಬಾಯನ್ನು ಮೇಲಕ್ಕೆ ತೆರೆದು ನೀಡು ಎನಲು ಅವರು ನೀಡಿದರಂ. ಸಿದ್ಧೇಶ ಅದನ್ನು ಗುಟುಕಿಸಿ ನುಂಗಿಬಿಟ್ಟನು. ಹೊಟ್ಟೆತುಂಬುವತನಕ ನೀಡಿಸುವಂತೆ ಮಾಯೆಗೆ ಹೇಳಲು ಆಕೆ ಘಟಸಹಸ್ರದಿಂದ ವಿಷವನ್ನು ನೀಡಿಸಲು ಸಿದ್ಧೇಶ ಅಷ್ಟನ್ನೂ ಪಾನಮಾಡಿ ''ನಿನ್ನ ಕುಟಿಲ ಮಹಿಮೆಯನ್ನು ತೋರು'' ಎನ್ನಲು ಮಾಯೆ ಆತನು ಕೆಟ್ಟಸಿದ್ಧ ಎಂದು ಅಂಜಿ ದೇವಸ್ಥಾನದೊಳಕ್ಕೆ ಓಡಿಹೋಗಿ ಕದಗಳನ್ನು ಮುಚ್ಚಿಕೊಂಡಳು. ಆದನ್ನು ಕಂಡ ಸಿದ್ಧೇಶ ಕೋಪದಿಂದ ಹೋಗಿ ದೇವಸ್ಥಾನದ ಬಾಗಿಲನ್ನು ಮುರಿದು ಮಾಯೆಯ ಮುಡಿಜಡೆಗಳನ್ನು ಹಿಡಿದುಕೊಂಡು ಎಳೆದಂ ತಂದು ಅವಳ ಮೊಲೆ ಮೂಗು ಕರಗಳನ್ನು ಕೊಯ್ದು ಹಲ್ಲುಗಳನ್ನು ಉದುರಿಸಿದನಂ, ಮಾಯೆಂ ತನ್ನ ಮೊದಲ ರೂಪವನ್ನು ಧರಿಸಿ ಭಕ್ತಿಯಿಂದ ನಮಸ್ಕರಿಸಿ ಸ್ತುತಿಸಲು ಅವಳ ದೇಹವನ್ನು ಕಿನ್ನರಿವೀಣೆಯಾಗಿ ಎದೆಯಮೇಲೆ ಧರಿಸಿಕೊಂಡು ವಿವಿಧರಾಗಗಳಲ್ಲಿ ಹಾಡುತ್ತ ಭಿಕ್ಷವನ್ನು ಬೇಡುತ್ತ ಬಂದನು.

ಆದಿಯಲ್ಲಿ ಶಿವತತ್ವವು ಮನಸ್ಸಿಗೆ ಅಗೋಚರವೂ ನಿತ್ಯನಿಷ್ಕಳವೂ ನಿರ್ಭೇದ್ಯವೂ ಮುಂತಾಗಿ ಶೂನ್ಯಪರತತ್ವಉಂಟಾಗಿ ತನ್ನ ಇಚ್ಛೆಯಿಂದ ಜಗತ್ತಿನ ಉತ್ಪತ್ತಿಗೆ ಬೀಜ ರೂಪವಾದ ತತ್ವಗಳನ್ನು ಸೃಜಿಸಲು ಶಕ್ತಿಯೋಗವನ್ನು ಚಿಂತಿಸಿದನು. ಯೋಗಷಟ್ಸಾಹಸ್ರಿಕೆ ಎಂಬ ಗ್ರಂಥದಲ್ಲಿ 'ತದ್ಗುರೋರಾಗ್ನಯೈವೋಕ್ತಂ'' ಎಂದು ಹೇಳಿದೆ. ನಾದ ಬಿಂದು ಕಲೆಗಳ ಐಕ್ಯದಿಂದ ಓಂಕಾರವು ಉದಿಸಿತು. ಆದು ಸ್ವಯಂಭುಕವೆಂದು ಹೇಳಿತು. ಮಹಾಲಿಂಗವು ಅಂತಾಗದೆ ಅತ್ಯಧಿಕ ಎಂದು ಆಗಮಾಮ್ನಾಯಗಳು ಹೇಳಿದುವು. ವಾತುಳವು ಸಾದಾಖ್ಯವೆಂದಿತು. ನಾದವೆಂಬ ಹೆಸರನ್ನುಳ್ಳ ಶಿವಬೀಜವು ಸರ್ವಭೂತಗಳಲ್ಲಿಯೂ ಇಹುದು. ಆದನ್ನು ಶುದ್ಧಪ್ರಸಾದವೆಂದು ತಿಳಿದು ಗುರುಗಳು ಶಿಷ್ಯರಿಗೆ ಉಪದೇಶಿಸಿ ಅವರ ಭವಪಾಶವನ್ನು ಕತ್ತರಿಸಿದರು. ಈ ಹಕಾರವನ್ನು ಶಿವತತ್ವ ಬೀಜ ಎಂದು ಪ್ರಮಾಣಗಳಿಂದ ಹೇಳುತ್ತಿದ್ದಾರೆ. ವೇದಗಳಲ್ಲಿ ಅದನ್ನು ಓಂಕಾರವೆನ್ನುತ್ತಾರೆ. ಈ ಓಂಕಾರದಿಂದ ಉಕಾರವೂ ಆದರಿಂದ ಮಕಾರವೂ ಉದಯವಾಗುತ್ತದೆ. ಈ

ಓಂಕಾರದ ಮೂರ್ಧದೊಳಗೆ ಪರಶಿವನಂ ನೆಲೆಗೊಳ್ಳುತ್ತಿರಲು ಅವು ವರ್ಣವ್ಯಾಪಕವಾಗಿ ತನ್ನಲ್ಲಿ ಸೇರಿರುವ ತ್ರಿರೇಖೆಯಿಂದ ನಾದ ಬಿಂದು ಕಳೆ ನಿರ್ಮಿತವಾದುವು. ಈ ಬೀಜ ತ್ರಯವೆ ಅಭಿನ್ನ ವಿದ್ಯಾ ಪ್ರತಿಷ್ಠಾ ನಿವೃತ್ತಿಗಳೆಂಬ ಕಲೆಗಳೆನಿಸಿದವು. ತ್ರೈಕಲಾತ್ಮಕವಾದ ನಾದ ಬಿಂದು ಕಲೆಗಳನೈದಿದ ಓಂಕಾರವು ಕಳಾಶೂನ್ಯವಾಗಿ ಕೂಡಿ ಷಟ್ಕೃತಿಗಳಿಂದ ಪೂರ್ಣವಾದ ಓಂಕಾರ ಉದಿಸಿತು. ಅದು ಚಿಜ್ಯೋತಿ ಉದಾತ್ತಾದಿ ಸ್ವರವೇದಂ ಗಳಾಗಿ ತ್ರೈಲೋಕ್ಯ ಸಚರಾಚರಗಳ ಜನನವು ಓಂಕಾರದಿಂದಾಯಿತು. ವ್ಯಾಪಕವಾದ ಈ ಓಂಕಾರದಿಂದ ಮಂತ್ರವನ್ನು ಯುಕುತಿಸಲು ಮತ್ತೊಂದು ಸ್ಥಲದಲ್ಲಿ ಅದು ಶೋಭಿ ಸಲು ಯುಕುತಿ ಆಶ್ರಯವಾದ ಪರಬೊಮ್ಮವು ಪ್ರಣಮವಾಗುವುದು. ಅದೇ ಪರಮ ಪದ. ಈ ಪ್ರಣವಾಕ್ಷರವು ಆರು ರೂಪದಿಂದ ಮೆರೆಯುತ್ತದೆ. ಓಂಕಾರವೆಂಬ ವೃಕ್ಷಕ್ಕೆ ಮೂಲ ನಾದ ಬಿಂದು ನಟ್ಟನಡುವಣ ಅಂಗ. ಕಲೆಯೇ ಕೊನೆ. ಈ ವೃಕ್ಷದ ಫಲ ಅಮೃತ. ಹಿಂದೆ ಹೇಳಿದ ಅಕ್ಷರಗಳು ಪುಂ ನಪುಂ ಸ್ತ್ರೀ ರೂಪದ ಅಂದವನ್ನು ಧರಿಸಿವೆ. ಉಳಿದ ಎಲ್ಲ ವರ್ಣಗಳೂ ಬಹುದೇವತಾ ರೂಪವನ್ನು ತಾಳಿ ಪ್ರತ್ಯೇಕವಾಗಿ ನಿಂತಿವೆ.

ಸಕಲ ಕಲೆಗಳ ಭಾವವನ್ನೊಳಕೊಂಡ ಮಹಾಲಿಂಗವನ್ನು ಸ್ಮರಿಸಿದರೆ ಸ್ವಸ್ವ ರೂಪ ಸ್ಥಿತಿ ದೊರಕುತ್ತದೆ. ಇದರ ತೊಡಕಿಲ್ಲದೆ ನಿಷ್ಕಳವು ಅಗೋಚರವೆನಿಸುತ್ತದೆ. ಭಾವ ಗೋಚರವೆನಿಸುತ್ತದೆ. ಮೂರ್ತಿ ಸಾದಾಖ್ಯ-ಪಂಚಸಾದಾಖ್ಯ–ಕರ್ತೃತ್ವಸಾದಾಖ್ಯ ಕರ್ಮಸಾದಾಖ್ಯ ಎಂಬ ಪಂಚಸಾದಾಖ್ಯಗಳ ನಿರೂಪಣೆ ಮಾಡಲಾಗಿದೆ.

ಪರತರವಸ್ತು ಎರಡು ವಿಧ : ಸ್ಥೂಲ ಸೂಕ್ಷ್ಮ ನಿಷ್ಕಳ, ನಿಷ್ಕಳಬ್ರಹ್ಮ-ಶಿವ ತತ್ವ-ತ್ರಿವಿಧಭೇದ. ಈ ಮೂರು ತತ್ವಗಳಲ್ಲಿ ಶಿವತತ್ವ ಒಂದು ; ಮಹಾಶಿವತತ್ವ ಪಂಚಕ ; ಮಹೇಶ್ವರ ತನ್ನ ವೈಭವದ ಲೀಲಾಮಾತ್ರದಿಂದ ಶೋಧಿಸಿದ ಚಂದ್ರಧರ ಲೀಲೆಯಿಂದ ಮೊದಲುಗೊಂಡು ದಿವ್ಯಲಿಂಗೋದ್ಭವದ ಲೀಲೆ ಕಡೆಯಾದ ಇಪ್ಪತ್ತೈದು ಲೀಲೆಗಳಾದುವು. ಇವುಗಳಲ್ಲಿ ಚಂದ್ರಧರಲೀಲೆ ಮೊದಲನೆಯದು.

ಭಿಕ್ಷಾಟನ ಲೀಲೆ: ಬ್ರಹ್ಮನಂ ಅಹಂಭಾವದಿಂದ-ಶಿವನನ್ನು ಧಿಕ್ಕರಿಸಿದನು. ಸುಡು ಗಾಡ ಕಾಯ್ದಿರುವ ಶಂಭುವನ್ನು ನಿಂದಿಸಿದನು. ಶಿವನು ಬ್ರಹ್ಮನ ತಲೆಯನ್ನು ಚಿವುಟಿ ಹಾಕಿದನು–ಬ್ರಹ್ಮಕಪಾಲವನ್ನು ಹಿಡಿದು ಶಿವನು ಭಿಕ್ಷಾಟನೆಗೆ ಹೊರಟದನು ಭಿಕ್ಷಾಟನದ ಲೀಲೆಯ ಕಜ್ಜ–ಬಲವಂತವಹ ಬ್ರಹ್ಮ ತಾನೆಂದು ವಿಧಿ ಗರ್ವಿಸಲ್ ನೀನು ನಿಗಮಂಗಳು ಬೋಧಿಸಲ್ ಕೇಳದೆ ಗಳಹಲು ಎಮ್ಮನುರೆ ಮಲೆತು ಘರ್ಜಿಸಿ ತಲೆಯನರಿದು ಭಿಕ್ಷಕ್ಕೆ ಬಂದೆ. ಈಶ್ವರನು ಭಿಕ್ಷಕ್ಕೆ ಬಂದಾಗ ಅವನ ದೇಹ ಸೌಂದರ್ಯಕ್ಕೆ ಮಾರುಹೋದ ಸುರಸತಿಯರ ವರ್ಣನೆಯನ್ನೂ ಸುರಸತಿಯರ ವಿರಹವರ್ಣನೆಯನ್ನೂ ನಾನಾವಿಕಾರದಿಂದ ಬಳಲುತ್ತಿದ್ದ ಸುರಸತಿಯರನ್ನು ನೋಡಿಕೊಂಡು ಯಮರಾಜನ ಪಟ್ಟಣಕ್ಕೆ ಬಂದು ಭಿಕ್ಷೆಯನ್ನು ಪಡೆದನು ; ಅಲ್ಲಿಂದ ಅಲಂಬಲೆಯ ಸದನಕ್ಕೆ ಬಂದನು ; ಅವಳು ಅದಕ್ಕೆ

ಕಾರಣ ಕೇಳಿದಳು. "ವಿಧಿ ಗರ್ವಿಸಲ್ಕವನ ವಿತತ ಪಂಚಮಶಿರವನರಿದ ಕಾರಣದಿ ಯಂನ್ನತದ ಭಿಕ್ಷಾಟಣಕೆ ಬಂದೆ" ಎಂದು ಹೇಳಿದನು. ಅದನ್ನು ಕೇಳಿದ ಅಲುಂಬಲೆ ಶಿವನ ಶಕ್ತಿ ಸಾಮರ್ಥ್ಯಗಳನ್ನೂ ಮಹಾತ್ಮೆಯನ್ನೂ ಕೊಂಡಾಡಿ, "ಪಂಚಮಹಾಪಾತಕಗಳನ್ನು ಮಾಡಿದವರೂ ನಿನ್ನ ಚರಣಪೂಜೆಯಿಂದ ಪಾಪನಿವಾರಣೆ ಹೊಂದಿ ಶುದ್ಧರಾಗುವರು ಅಂತಹುದರಲ್ಲಿ ಬ್ರಹ್ಮಹತ್ಯೆಯ ಕಾಟ ನಿನಗೆಲ್ಲಿಯದು" ಎಂದಳು. ಶಿವನು ಅವಳಿಗೆ ಕರುಣೆದೋರಿ ಅಲ್ಲಿಂದ ಶುದ್ಧವತಿಯ ಕಡೆ ನಡೆದನು. ವರುಣನು ಈ ವಾರ್ತೆಯನ್ನು ಕೇಳಿ ಪುರರಚನೆಯನ್ನು ಮಾಡಿ ಶಿವನನ್ನು ಇದಿರುಗೊಂಡು ಪಾದಗಳಿಗೆ ಅಡ್ಡಬಿದ್ದು ಮನೆಗೆ ಕರೆದೊಯ್ದು ಪರಿಪರಿಯ ಉಪಚಾರವನ್ನು ಮಾಡಿ ಸ್ತುತಿಸಿದನು. ಯಥಾ ಶಕ್ತಿ ಭಿಕ್ಷೆಯನ್ನು ನೀಡಿದನು. "ಬಂಧುರವೆನಿಪ ಶಿವನ ಶ್ರುತಿ ಪಾತ್ರೆಯೊಳಗಾಗ ತಂದಗರೆ ಗಾನಾನಂದ ಫಲರಸವನೆರೆಯೆ ಹೃಜ್ಜಿಹ್ವೆಯಿಂ ಸಲಿಸುತಭವಂ" ತಲೆದೂಗಿ ದನು. ಆಮೇಲೆ ಸುಮಾಲಿನಿಯ ಗಾನವನ್ನು ಆಲಿಸಿ ಅವರೆಲ್ಲರಿಗೂ ಕರುಣೆದೋರಿ ಧನದನ ನಗರದತ್ತ ನಡೆದನು. ಶಿವನು ಆ ಪಟ್ಟಣಕ್ಕೆ ಬರುತ್ತಲೇ ಕುಬೇರನು ಸಾಷ್ಟಾಂಗ ಪ್ರಣಾಮವನ್ನು ಮಾಡಿ ಅರಮನೆಗೆ ಕರೆದೊಯ್ದನು. ಸರ್ವಸುರಗಣವೂ ಶಿವನನ್ನು ಪೂಜಿಸುತ್ತಿರಲು ಕುಬೇರನು ಶಿವನ ಪಾದವನ್ನು ತೊಳೆದು ಆ ಜಲವನ್ನು ತಲೆಯಲ್ಲಿ ಸಂಪ್ರೋಕ್ಷಿಸಿಕೊಂಡನು. ಸುರರೆಲ್ಲರೂ ಆ ಜಲವನ್ನು ಸಂಪ್ರೋಕ್ಷಿಸಿಕೊಂಡರು. ಕುಬೇರನ ಹೆಂಡತಿಯೂ ಶಿವನ ಚರಣದೊಳೆದು ಶಿವನಿಗೆ ಶಕ್ತಿಭಿಕ್ಷೆಯನ್ನು ಕೊಟ್ಟಳು. ಸತಿಪತಿ ಗಳಿಬ್ಬರೂ ನಮಸ್ಕರಿಸಿದರು. ಶಿವನು ಆ ಪುರವನ್ನು ಬಿಟ್ಟು ಸುರಸದ್ಮದೊಳಗೆ ಭಿಕ್ಷೆ ಯನ್ನು ಕೊಂಡು ಸುರಪ್ರಮಥಗಣರನ್ನು ಅವರವರ ಮನೆಗಳಿಗೆ ಕಳಿಸಿ ಭಿಕ್ಷಾಟಣವನ್ನು ಬಿಟ್ಟು ಹೆಂಡತಿಯೊಡನೆ ಮರೆಯಾದನು.

ಶಿವೆಯು ದಾಕ್ಷಾಯಣಿಯ ರೂಪವನ್ನು ಬಿಟ್ಟು ಗಿರಿರಾಜಸುತೆಯಾಗಿ ಹಂಪೆ ಯಲ್ಲಿ ಶಿವನನ್ನು ಕುರಿತು ತಪಸ್ಸು ಮಾಡುತ್ತಿದ್ದಳು. ಇತ್ತ ದೇವತೆಗಳು ತಾರಕನ ಬಾಧೆಯನ್ನು ತಾಳಲಾರದೆ ಮೇರುವಿನ ತಪ್ಪಲಿಗೆ ಬಂದು ಆಲೋಚನೆ ಮಾಡಿ ಬೃಹ ಸ್ಪತಿಯನ್ನು ಮನ್ಮಥನ ಬಳಿಗೆ ಕಳಿಸಿಕೊಟ್ಟರು. ಬೃಹಸ್ಪತಿಯನ್ನು ಇದಿರುಗೊಂಡ ಮನ್ಮಥನು ದೇವತೆಗಳಿದ್ದಲ್ಲಿಗೆ ಬಂದು ಏನು ಕಾರ್ಯವಾಗಬೇಕು ಎಂದು ಕೇಳಿದನು. ದೇವತೆಗಳು ಅವನ ಪರಾಕ್ರಮವನ್ನು ಹೊಗಳಿ ಶಿವನ ತಪೋಭಂಗ ಮಾಡಿ ಶಿವೆಯೊಡನೆ ಕೂಡಿಸಿದರೆ ಅವರಿಂದ ಹುಟ್ಟುವ ಕುಮಾರನಿಂದ ತಾರಕನ ಸಂಹಾರವಾಗುವುದೆಂದರು. ಅದನ್ನು ಕೇಳಿದ ಮನ್ಮಥ ಈಶ್ವರ ತಪೋಭಂಗ ಮಾಡಲು ತಾನು ಸಮರ್ಥನೆ ? ಸೂರ್ಯನೆಡೆಗೆ ಕತ್ತಲೆಯನ್ನೂ ಬೆಂಕಿಯಿದ್ದಲ್ಲಿಗೆ ಅರಗನ್ನೂ ಹೆಬ್ಬುಲಿಯಲ್ಲಿಗೆ ಹುಲ್ಲೆ ಯನ್ನೂ ಕಳಿಸುವಂತಾಗುವುದು ಎಂದನು. ಅದನ್ನು ಕೇಳಿದ ವಿಷ್ಣು ನಿನ್ನೊಬ್ಬನ ಸಾವಿ ನಿಂದ ದೇವತೆಗಳಿಗೆಲ್ಲ ಒಳ್ಳೆಯದಾಗುವುದಾದರೆ ಅದಕ್ಕೆ ಹಿಂದು ಮುಂದು ನೋಡ ಬಹುದೆ ? ಎನ್ನಲು ಅದನ್ನು ಕೇಳಿ ಉಬ್ಬಿಹೋದ ಮನ್ಮಥ ತನ್ನ ಪರಿವಾರದೊಡನೆ

ಚತುರಂಗಬಲದೊಡನೆ ಹಂಪೆಯತ್ತ ಸಾಗಿದನು. ಪಂಪಾಕ್ಷೇತ್ರವನ್ನು ಸೇರಿ ಹೇಮ ಕೂಟವನ್ನು ಮುತ್ತಲು ಅದನ್ನು ನೋಡಿದ ನಂದೀಶ್ವರ ತನ್ನ ಉರಿಗಣ್ಣನ್ನು ತೆರೆಯಲು ಮನ್ಮಥನ ಸೈನ್ಯವೆಲ್ಲ ಮರುಮರೀಚಿಕೆಯಂತೆ ಬಯಲಾಯಿತು. ಕಂತು ಕಂಗಾಲಾಗಿ ಒಬ್ಬನೇ ನಿಂತಿರಲು ಆ ವೇಳೆಗೆ ಸರಿಯಾಗಿ ಪಾರ್ವತಿ ಅಲ್ಲಿಗೆ ಬರಲು ಅವನು ಆಕೆಯ ಪಾದಗಳಿಗೆರಗಿ ಕಾಪಾಡಬೇಕೆಂದು ಬೇಡಿಕೊಂಡನು. ಪಾರ್ವತಿ ಆತನು ಬಂದ ಕಾರ್ಯವನ್ನು ಕೇಳಿ ಸಂತಸಗೊಂಡು ಈಶ್ವರನು ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಕರೆದೊಯ್ದಳು. ಮನ್ಮಥನು ಶಿವನ ಮೇಲೆ ಮದನಮೋಹನ ಸಂತಾಪಮಾರ್ಗಣಗಳನ್ನು ಎಸೆಯಲು ಅವೆಲ್ಲ ವ್ಯರ್ಥವಾದವು. ಕೊನೆಗೆ ಮನ್ಮಥ ಪುಷ್ಪಬಾಣವನ್ನು ಎಸೆಯಲು ಶಿವ ಕೋಪದಿಂದ ವಹ್ನಿನೇತ್ರವನ್ನು ಬಿಡಲು ಮನ್ಮಥ ಸುಟ್ಟು ಭಸ್ಮವಾದನು. ಪಾರ್ವತಿ ಕಾಮಂಗೆ ಸಹಾಯಕಳೆಂದು ಅಲ್ಲಿಂದ ಅಂತರ್ಧಾನನಾದನು. ಈ ವಾರ್ತೆಯನ್ನು ಕೇಳಿ ರತಿ ಮೂರ್ಛೆಹೋದಳು. ಕಾಮನು ಭಸ್ಮವಾದ ಸ್ಥಳಕ್ಕೆ ಬಂದು ಪ್ರಲಾಪಿಸುತ್ತಿದ್ದಳು, ಆಗ ಪಾರ್ವತಿ ಅಲ್ಲಿಗೆ ಬಂದು ರತಿಯನ್ನು ಸಮಾಧಾನಪಡಿಸಿ "ನಿನ್ನರಸನನಂತಕಾಂತಕನ ಕೈಯಿಂದ ಕೊಡಿಸುವೆನು" ಎಂದು ಭಾಷೆಯನ್ನು ಕೊಟ್ಟಳು. ಆಮೇಲೆ ಘೋರ ತಪಸ್ಸನ್ನಾಚರಿಸಿ ಶಂಭುವನ್ನು ಒಲಿಸಿ ಮನ್ಮಥನಿಗೆ ಅಂಗವನ್ನು ಮತ್ತೆ ಕೊಡಿಸಿದಳು. ಪರಶಿವನು ಪಾರ್ವತಿಯನ್ನು ಸಂಭ್ರಮದಿಂದ ಮದುವೆಯಾದನು.

ಶ್ವೇತನೆಂಬ ರಾಜನು ಅತ್ಯಂತ ಧರ್ಮಿಷ್ಠನೂ ದಾನಗುಣಶೀಲನೂ ಶಿವಶಾಸ್ತ್ರ ಕೋವಿದನೂ, ಶಿವಲಿಂಗ ನಿಷ್ಠಾಗರಿಷ್ಠನೂ ಆಗಿದ್ದನು. ಈತನು ಒಂದುದಿನ ಮಾರಹರನ ಪೂಜೆಯನ್ನು ರಹಸ್ಯದಲ್ಲಿ ಮಾಡುತ್ತಿದ್ದನು. ಅವನ ಕಾಲ ಸನ್ನಿಹಿತವಾಗಲು ಯಮನು ಬಂದು ಪಾಶವನ್ನು ಅವನ ಕೊರಳಿಗೆ ಹಾಕಿ ಎಳೆದನು. ಆಗ ಶ್ವೇತನು "ಇದು ಶಿವಾರ್ಚನಾ ಸಮಯ, ನನ್ನ ಜೀವಹೋದರೂ, ಶಿರಚ್ಛೇದನವಾದರೂ ಪರಮನರ್ಚನೆಯನ್ನು ಮಾಡುವುದನ್ನು ಬಿಡುವುದಿಲ್ಲ" ಎಂದು ಯಮನಿಗೆ ಹೇಳಿದನು. ಅದಕ್ಕೆ ಯಮರಾಜ ಕೋಪಗೊಂಡು "ಎಲೈ ಅಧಮನೆ ನೀನು ಯೌವನದಲ್ಲಿ ಶಿವ ಪೂಜೆಯನ್ನು ಮಾಡದೆ ಮನಸ್ಸಿಗೆ ಬಂದ ರೀತಿ ನಡೆದುಕೊಂಡೆ. ಈಗ ವೃದ್ಧಾಪ್ಯದಲ್ಲಿ ಶಿವಲಿಂಗಭಜನೆಯನ್ನು ಮಾಡಿ ತಪ್ಪಿಸಿಕೊಳ್ಳಬೇಕೆಂದಿರುವೆಯು, ನೀನು ರಾಜ್ಯ ಐಶ್ವರ್ಯವಿದ್ದಾಗ ಸಪ್ತವ್ಯಸನಿಯಾಗಿ ಶಿವನನ್ನು ಪೂಜಿಸುವುದನ್ನೇ ಮರೆತಿದ್ದೆ. ಈಗ ವಾರ್ಧಕ್ಯ ಬಂದಿದೆ. ನಿನ್ನ ಅಂಗಾಂಗಗಳೆಲ್ಲ ಶಿಥಿಲಗೊಂಡಿವೆ. ಕಣ್ಣು ಕಾಣುವುದಿಲ್ಲ, ಕಿವಿ ಕೇಳುವುದಿಲ್ಲ, ಕೈಕಾಲುಗಳು ನಡಗುತ್ತಿವೆ ಈಗ ನಿನಗೆ ಶಿವಪೂಜೆಯೆ ?" ಎಂದು ಪ್ರಶ್ನಿಸಿದನು. ಅದಕ್ಕೆ ಶ್ವೇತ "ದೇಹಷಡ್ಭಾವ ವೈಕಾರಿಕದ ಬೆಂಬಳಿಯೊಳಿಹ ತನುವದೆಂತಾದೊಡೇನು ? ಮಾನಸ ಚಲನಮನುಳಿವುತೆ ತ್ರ್ಯಂಬಕನ ಪಾದಾರವಿಂದದೊಳ್ ಚಿತ್ತಲೋಲಂಬಿಡದೆ ನೆಲೆಗೊಳಲ್ಮದುವೆ ಮೋಕ್ಷ" ; "ಹರ ಮುಳಿಯೆ ಗುರು

ರಕ್ಷಿಪಂ ಸಲೆ ಗುರುವೆ ಕೋಪಿಸಲ್ ಹರ ಸಲಹಲಾರ; ಕೇಳ್ ಮಲಹರನ ಭಕ್ತರಂ ಕೊಲಲು ಕಾಯಲ್ಕೆಯಾಚಾರ್ಯರ್ನೇ ಕರ್ತನಲ್ತೆ ; ನೆಲದಾಣ್ಮನಣುಗನಂ ನೀ ರಕ್ಷಿಸಲ್ಕ ಳವೆಯಳಿಕಾಕ್ಷಭಕ್ತರಂ ಮುಟ್ಟಲಾರಳಳವಲ್ಲ ನೆಲೆಯಿಂ ಮರೆದಂ ಕೊಲಲೆಣಿಸಿದಡೆ ನಿನಗೆ ಕೊಲೆ ತಪ್ಪದು'' ಎಂದನಂ. ಅದನ್ನು ಕೇಳಿದ ಯಮಂಧರ್ಮರಾಯ ''ಸುರ ದನುಜ ರಾಜಕೋಟಿ ಮರಣಂ ದಾಟಲಾರರೆನ್ನಿಂದಸುವನುಳಿದು ತನುವಂ ಬಿಸುಟು ಪೋಗುತಿಹರಂ, ಮಂದಬುದ್ಧಿಯೆ ಕೇಳು ನಾನೆ ಸ್ವತ ತ್ರನೈ ಸಂದೇಹವಿಲ್ಲ ನಿನ್ನಂ ಕೊಲಲು ಕಾಯಲೆನ್ನಿಂದಹುದು ನಿನಗೊರ್ವರಂಟೆ ನಾನೇ ಕರ್ತನಂ'' ಎಂದು ಗರ್ಜಿ ಸುತ್ತ ಧ್ಯಾನದಲ್ಲಿದ್ದ ಶ್ವೇತನ ಕೊರಳಿಗೆ ಹಗ್ಗವನ್ನು ಹಾಕಿ ಎಳೆಯಲು ಶಿವಲಿಂಗದಿಂದ ಶಿವನು ಉದ್ಭವಿಸಿದನು. ಕೂಡಲೆ ಹಣೆಗಣ್ಣನ್ನು ತೆರೆಯಲು ಯಮನು ಸುಟ್ಟು ಭಸ್ಮವಾದನು ಶ್ವೇತನನ್ನು ಕೈಲಾಸಕ್ಕೆ ಕರೆದುಕೊಂಡು ಹೋದನಂ.

ವಿಪ್ರಕುಲಶಿರೋಮಣಿಯಾದ ಮೃಕಂಡು ಬಹಳಕಾಲ ತಪಸ್ಸನ್ನು ಮಾಡಿ ಒಮ್ಮೆ ಕನ್ನಡಿಯನ್ನು ನೋಡಲು ಮುಖದಲ್ಲಿನ ಬಿಳಿಗೂದಲನ್ನು ಕಂಡು ಚಿಂತೆಯನ್ನು ತಾಳಿ ಹೆಂಡತಿಯಾದ ಗುಣವತಿಯೊಡನೆ ''ಅಪುತ್ರರಿಗೆ ಸದ್ಗತಿಯಿಲ್ಲ. ಶ್ವೇತನಿಗೆ ಸದ್ಗತಿ ಯನ್ನು ಕೊಟ್ಟು 'ಶ್ವೇತಾಟವೀಶ' ಎಂದು ಈಶ್ವರ ಹೆಸರುವಾಸಿ ಪಡೆದ. ಆದುದ ರಿಂದ ನಾವು ಕಾವೇರಿ ಸಂಗಮದಲ್ಲಿ ತಪವನ್ನು ಮಾಡಿ ಪುತ್ರನನ್ನು ಪಡೆಯಬೇಕು'' ಎಂದನು. ಈ ಶ್ವೇತಾರಣ್ಯಕ್ಕೆ ಯೋಜನದ ದೂರದಲ್ಲಿ ಬಿಲ್ವವನವಿದೆ. ಅದರ ಕಡೆಯಲ್ಲಿ ಕಾವೇರಿ ನದಿಯಿದೆ. ಆ ನದಿಯಲ್ಲಿ ಒಂದುವಾರ ಸ್ನಾನಮಾಡಿ ಶಿವಲಿಂಗಪೂಜೆಯನ್ನು ಮಾಡಿದರೆ ಶಿವನೊಲಿಯುವನು ಎಂದು ಹೇಳಿ ಅದೇ ರೀತಿ ಮಾಡಲು ಶಿವನು ಪ್ರತ್ಯಕ್ಷ ನಾಗಿ ವರವನ್ನು ಕೇಳಿ ಎನ್ನಲು ಪುತ್ರಫಲವನ್ನು ಕೇಳಿಕೊಂಡರು. ಅದಕ್ಕೆ ಶಿವನು ಕಡುಪಾಪಿಗಳೂ ದೀರ್ಘಾಯುಗಳೂ ಆದ ಸಾವಿರಮಕ್ಕಳು ಬೇಕೋ ಸುಗುಣಿಯೂ ಸುಜ್ಞಾನಿಯೂ ಅಲ್ಪಾಯುವೂ ಆದ ಒಬ್ಬನೇ ಮಗನು ಬೇಕೋ ಎನ್ನಲು ಅವರು ಅಲ್ಪಾಯುವಾದ ಮಗನೇ ಸಾಕೆನ್ನುವರು. ಶಿವನು ಹದಿನಾರು ವರ್ಷದ ಆಯುಸ್ಸುಳ್ಳ ಮಗನಾಗುವನೆಂದು ಹೇಳಿಕಳಿಸಿದನು. ಆಮೇಲೆ ಆ ದಂಪತಿಗಳು ಆಶ್ರಮಕ್ಕೆ ಬಂದು ಮಗನನ್ನು ಪಡೆದು ಸುಖವಾಗಿದ್ದರು. ಆ ಹುಡುಗನು ಬಾಲಲೀಲೆಯನ್ನು ಕಳೆದು ಅಖಿಳಶಾಸ್ತ್ರಗಳನ್ನು ಕಲಿತು ಹದಿನೈದು ವರ್ಷದವನಾದನು. ಆಗ ಅವನ ತಂದೆ ತಾಯಿಗಳಿಗೆ ಚಿಂತೆಗಿಟ್ಟುಕೊಂಡಿತು. ಏಕೆಂದರೆ ಅವನ ಆಯುಷ್ಯ ಇನ್ನು ಒಂದು ವರುಷ ಮಾತ್ರವಿತ್ತು. ಅವರ ಚಿಂತೆಯನ್ನೂ ದುಗುಡವನ್ನೂ ಕಂಡು ಮಗನು ಅದಕ್ಕೆ ಕಾರಣವನ್ನು ಕೇಳಿದನು. ಅವರು ಇದ್ದ ವಿಷಯವನ್ನು ತಿಳಿಸಿದರು. ಇನ್ನೂ ಒಂದು ವರುಷ ಸಮಯವಿರುವುದರಿಂದ ಶೋಕಿಸಬೇಕಾಗಿಲ್ಲವೆಂದು ಮಾರ್ಕಂಡೇಯ ಅವರನ್ನು ಸಂತೈಸಿ ಅಂದಿನಿಂದ ಪ್ರತಿನಿತ್ಯವೂ ಶಿವಪೂಜೆ, ಶಿವಗಾನ, ಶಿವಗೋಷ್ಠಿ

ಗಳನ್ನು ಮಾಡುತ್ತ ಹದಿನಾರನೆಯ ವರ್ಷದ ಕಡೆಯ ದಿನಕ್ಕೆ ಕಾಲಿರಿಸಿದ. "ಹರನನಂತೈದೆ ಶರಣಂಬೊಕ್ಕೊಡಾ ಮೃತ್ಯುಯೇಗೆಯ್ವುದು" ಎಂಬುದು ಆತನ ನಂಬಿಕೆ. ಹೀಗೆ ನಾನಾ ವಿಧವಾಗಿ ಶಿವನನ್ನು ಸ್ತುತಿಸುತ್ತಿರಲು ಕಾಲಮುಗಿದುದನ್ನು ಅರಿತ ಯಮಧರ್ಮನು ಮಾರ್ಕಂಡೇಯನಿಗೆ ಪಾಶವನ್ನು ಬಿಗಿದನು. ಆಗ ಅವನು "ಹರಹರ ಮಹಾದೇವ ಕಾಪಾಡಬೇಕು" ಎಂದು ಪ್ರಾರ್ಥಿಸಲು ಶಿವನು ಪ್ರತ್ಯಕ್ಷನಾಗಿ ಯಮಧರ್ಮರಾಯ ನನ್ನು ಹೊಡೆದೋಡಿಸಿದನು. ಸುರರು ದಂದುಭಿರವ ಮಾಡಿದರು. "ಎನ್ನನೇ ಯಜಿಪ ಭಕ್ತರಿಗೆಯುಪಕಾರವೆಳ್ಳನಿತೆಸಗೆ ರುಜುವಾಗಿ ನಿಮ್ಮನಾದೊಡೆ ಬಿಡದೆ ಕೊಲ್ವೆಂ ಎನ್ನ ಭಕ್ತನೆನ್ನಿಂದ ಕೋಟಿಮಿಗಿಲು" ಎಂದು ಶಿವನು ಹರಿವಿಯಬ್ರಾದ್ಯರಿಗೆ ಹೇಳಿದನು. ಅವರು ಶಿವಭಕ್ತರ ಮಹಿಮೆಯನ್ನು ತಿಳಿದೆವು. ಶರಣರ ಅಡಿಗೆರಗಿ ನುತಿಸುವೆವು ಎಂದು ಹೇಳಿ ಯಮನಿಗೆ ಪ್ರಾಣದಾನ ಮಾಡಬೇಕೆಂದು ಕೇಳಿಕೊಂಡರು. ಅದರಂತೆ ಯಮ ನಿಗೆ ಪ್ರಾಣದಾನಮಾಡಿ ಮಾರ್ಕಂಡೇಯನಿಗೆ ನಿತ್ಯತ್ವವನ್ನು ಅವನ ತಂದೆತಾಯಿಗಳಿಗೆ ಕೈಲಾಸಪದವಿಯನ್ನು ಕೊಟ್ಟನು.

ವಿಟನಾದ ಶ್ವೇತನನ್ನು ರಂಭೆಯೊಡನೆ ರತಿಗೆ ಕಳಿಸಲಾಯಿತು. ಅವಳು ಆ ಕಾಮಾಂಧನನ್ನು ನೋಡಿ ಗಹಗಹಿಸಿ ನಕ್ಕಳು. ಶ್ವೇತ ಆ ನಗುವಿಗೆ ಕಾರಣವನ್ನು ಕೇಳಿದನು. ಅದಕ್ಕೆ ಅವಳು "ಎಲೆ ಅವಿವೇಕಿ ಅಜ್ಞಾನಿ ದುರ್ಮಾರ್ಗಿ ದುಶ್ಚೇಷ್ಟನೆ ದುರಿತಾತ್ಮ ದುಶ್ಶೀಲ ದುರ್ಗುಣಿ ದುರಾಲಾಪನೇ ನೀನು ಅನೇಕಪಾಪಗಳಿಗೆ ಗೂಡು. ಗುರು ಲಿಂಗವನ್ನಾಗಲಿ ತೀರ್ಥ ಭಸಿತ ರುದ್ರಾಕ್ಷಿಗಳನ್ನಾಗಲಿ ಕನಸಿನಲ್ಲಿಯೂ ಕಂಡರಿಯೆ, ನೀನು ಒಂದುದಿನ ಸೂಳೆಯ ಮನೆಗೆ ಹೂ ಕೊಂಡುಹೋಗುತ್ತಿರುವಾಗ ಒಂದು ಹೂವು ಅಪವಿತ್ರವಾದ ಸ್ಥಳದಲ್ಲಿ ಬೀಳಲು ಅದು ಸೂಳೆಗೆ ತರವಲ್ಲವೆಂದು ಶಿವನಿಗೆ ಎಂದೆ. ಆ ಪುಣ್ಯಕಾರ್ಯದಿಂದ ಒಂದು ದಿನದವುಟ್ಟಿಗೆ ಇಂದ್ರಪದವಿ ಸಾಧ್ಯವಾಯಿತು. ಬೆಳಗಾಗು ತ್ತಲೆ ನಿನ್ನನ್ನು ನರಕದಲ್ಲಿ ಹಾಕುವರು. ಆದುದರಿಂದ ಇಂದು ನನ್ನ ಸಂಗವನ್ನು ಬಯ ಸದೆ ಶಿವನನ್ನು ಪೂಜಿಸು" ಎಂದು ಉಪದೇಶಿಸಿದಳು. ಆದರೂ ಅವನು ಅತ್ತ ಮನ ಗೊಡದೆ ರಂಭೆಯೊಡನೆ "ನಿನ್ನ ತಳ್ಕೆಯು ನಿಮಿಷ ನಿಮಿಷಾರ್ಧ ಸಾಲದೇ ಕಲ್ಪಗಳಿಗೆ ; ನಿನ್ನಧರ ಲಲಿತ ಚುಂಬನವ ಬಯಸಿಹುದೆನ್ನ ಮನ" ಎಂದು ಹೇಳಿದನು. ರಂಭೆ ಅವನು ಅಧಮನೆಂದರಿದು "ನನ್ನ ಸುಖ ಒಂದುಘಳಿಗೆ ಮಾತ್ರ. ಆದುದರಿಂದ ನೀನು ಒಂದುನಿಮಿಷ ಶಿವನನ್ನು ಪೂಜಿಸಿದರೆ ನನಗಿಂತಲೂ ಕೋಟಿಮಡಿ ಸುಂದರಿ ಯರು ನಿನ್ನನ್ನು ರಮಿಸುವಂತಾಗುತ್ತಾರೆ" ಎಂದು ಬುದ್ಧಿವಾದವನ್ನು ಹೇಳಿ ಅವನನ್ನು ಹರನಾಲಯಕ್ಕೆ ಕಳಿಸಿ ಆ ಆಲಯದ ರಜವನ್ನು ಗುಡಿಸಿ ಸುಕೃತವನ್ನು ಪಡೆದವರ ಕಥೆ ಗಳನ್ನು ಹೇಳಿದಳು.

ನರವರ್ಮರಾಜನು ತನ್ನ ಹನ್ನೆರಡುಸಾವಿರ ಸತಿಯರೊಡನೆ ಸುಖವಾಗಿದ್ದನು. ಅವರಲ್ಲಿ ಮಿಗಿಲಾದ ವಸುದೇವಿ ಎಂಬುವಳು ಪರಿಚಾರಕಿಯರನ್ನು ಕರೆಸಿ ಯಾವ ಯಾವ

ಶಿವದೇವಾಲಯಗಳಲ್ಲಿ ರಜವಿದೆ ನೋಡಿಕೊಂಡು ಬನ್ನಿ ಎಂದು ಹೇಳಿಕಳಿಸಿದಳು. ಗಂಡನಿಗೆ ಶಿವಭಜನೆಗೆ ಹೋಗುವುದಾಗಿ ಹೇಳಿ ತನ್ನ ಪಲ್ಲಕ್ಕಿಯಲ್ಲಿ ಬಚ್ಚಿಟ್ಟುಕೊಂಡು ಶಿವದೇವಾಲಯಕ್ಕೆ ಬಂದು ಅಲ್ಲಿದ್ದ ಕಸವನ್ನು ಗುಡಿಸಿದಳು. ಅದನ್ನು ಕಂಡ ಪರಿಚಾರಕಿಯರು ''ನಾವಿರುವಾಗ ತಾವು ಕಸವನ್ನು ಗುಡಿಸಬಹುದೆ ?'' ಎಂದು ಪ್ರಶ್ನಿಸಲು, ಆಕೆ ''ನನ್ನ ಪುಣ್ಯದ ಫಲವನ್ನು ನೀವು ಯಾರು ಬೇಡಿದರೂ ಕೊಡುವುದಿಲ್ಲ'' ಎಂದು ಕಸ ಗುಡಿಸಿದ ಕೈಯಲ್ಲಿನ ರಜವನ್ನು ತಲೆಗೆ ಸವರಿಕೊಂಡಳು. ಈ ವಿಷಯವನ್ನು ಸೇವಕಿಯರು ರಾಜನಿಗೆ ತಿಳಿಸಲು ''ಪಟ್ಟದರಸಿಯಾಗಿರ್ದು ನೀನೀಪರಿಯೊಳಧಮಸೇವೆಯ ಮಾಳ್ಪರೇ'' ಎಂದು ಆತನು ಪ್ರಶ್ನಿಸಿದನು. ಆಕೆ ರಾಜನಿಗೆ ''ನಿನಗೆ ಜಾತಿಸ್ಮರತ್ವವಿಲ್ಲ, ಪೂರ್ವಕಥೆಯ ಕೇಳು'' ಎಂದು ಹೇಳಲಾರಂಭಿಸಿದಳು.

ಶಿವಾಲಯದಲ್ಲಿದ್ದ ಹುಲ್ಲನ್ನು ಒಂದು ಮೊಲ ಮೇಯುತ್ತಿತ್ತು. ಮೇಘಚಾರಣ ಎಂಬ ಹಕ್ಕಿ ಬಲಿಪೀಠದ ಅನ್ನಕ್ಕಾಗಿ ರೆಕ್ಕೆಗಳನ್ನು ಕೊಡಹಲು ಅಲ್ಲಿದ್ದ ರಜ ಹೋಯಿತು. ಹೀಗೆ ಸ್ವಲ್ಪ ಕಾಲಕಳೆಯಲು ಅವು ಸತ್ತುಹೋದುವು. ಯಮನು ಇವರು ಮಾಡಿದ ಪುಣ್ಯಪಾಪಗಳ ವಿಷಯವನ್ನು ಕೇಳಿ ಶಂಕರಾಲಯದ ಕಸವನ್ನು ತೆಗೆದ ಫಲದಿಂದ ಚಕ್ರೇಶನಾಗಿ ರಾಜ್ಯವನ್ನಾಳುವಂತೆ ಆಜ್ಞೆಮಾಡಿದನು. ಆದರಂತೆ ನೀನು ಮೊಲ ನಾನು ಪಕ್ಷಿಯಾಗಿದ್ದೆವು ಎನ್ನಲು ಅವನಿಗೆ ಜಾತಿಸ್ಮರಣವುಂಟಾಯಿತು. ಶಿವಭವನದ ಕಸವನ್ನು ಗುಡಿಸಿ ಕೈವಲ್ಯಪದವನ್ನು ಪಡೆದರು. ''ಅದರಂತೆ ಎಲೈ ಶ್ವೇತನೆ ನೀನೂ ಕಸವನ್ನು ಗುಡಿಸಿ ಭಸಿತ ರುದ್ರಾಕ್ಷಿಗಳನ್ನು ಧರಿಸಿ ಮಂತ್ರವನ್ನು ಜಪಿಸು'' ಎಂದು ರಂಭೆ ಬೋಧಿಸಿದಳು. ಶ್ವೇತನು ಹಾಗೆಯೇ ಮಾಡಿದನು. ಮಾರನೆಯ ದಿನ ಯಮದೂತರುಬಂದು ನೋಡಲುಶ್ವೇತನು ಶಿವಾಲಯದಲ್ಲಿರುವ ಸಂಗತಿತಿಳಿಯಿತು. ಅವನನ್ನು ಮುಟ್ಟಲು ಹೆದರಿದ ಯಮದೂತರು ಯಮನಿಗೆ ಈ ಸಂಗತಿಯನ್ನು ತಿಳಿಸಿದರು. ಯಮನು ಕೋಪಾವೇಶದಿಂದ ಬಂದು ಶ್ವೇತನ ಕೊರಳಿಗೆ ಪಾಶವನ್ನು ಹಾಕಿ ಎಳೆಯಲು ಅವನು ಶಿವಮಂತ್ರವನ್ನು ಜಪಿಸಿದನು. ಕೂಡಲೆ ಶಿವನು ಪ್ರತ್ಯಕ್ಷನಾಗಿ ಯಮನನ್ನು ಶೂಲದಿಂದ ತಿವಿದು ಶ್ವೇತನಿಗೆ ಗಣಪದವಿಯನ್ನು ಕೊಟ್ಟು ಯಮನಿಗೆ ಬುದ್ಧಿವಾದವನ್ನು ಹೇಳಿ ಕಳಿಸಿದನು.

ತ್ರೇತಾಯುಗದಲ್ಲಿ ವಿದಳನೆಂಬವನಿದ್ದನು. ಈತನ ತಂದೆ ಸಾಯಲು ಈತನಿಗೆ ಪಟ್ಟವಾಯಿತು. ಈತನು ಹೆತ್ತತಾಯನ್ನು ಹಿರಿಯರನ್ನು ಲೆಕ್ಕಿಸದೆ ನಾಡಿನಲ್ಲಿದ್ದ ಉತ್ತಮರನ್ನೆಲ್ಲ ಓಡಿಸಿ ಕಾಕಪೋಕರನ್ನು ನೆ ಮಿಸಿಕೊಂಡು ದುಶ್ಚೇಷ್ಟಿತರನ್ನು ಗುಂಪುಕಟ್ಟಿಕೊಂಡನು. ಈತನು ದಾಸಿಯರನ್ನೂ ಸೂಳೆಯರನ್ನೂ ಕೂಡಿಕೊಂಡು ಮಧುಪಾನದಿಂದ ಮತ್ತನಾಗಿ ಧನಕನಕವಸ್ತುವಾಹನಗಳನೆಲ್ಲ ಹಾಳುಮಾಡಿದನು. ಶತ್ರುರಾಜರು ಈತನ ಮೇಲೆ ದಂಡೆತ್ತಿ ಬರಲು ಈತನು ಓಡಿಹೋಗಿ ಅಡವಿಯನ್ನು ಸೇರಿಕೊಂಡನು. ನೀಚವೃತ್ತಿಯಿಂದಲೂ ಚೋರತನದಿಂದಲೂ ದಾರಿಯನ್ನು ಅಡ್ಡಗಟ್ಟಿ ಧನಧಾನ್ಯ

ಗಳನ್ನು ಲೂಟಿಮಾಡಿ ಪುರಸ್ತ್ರೀಯರನ್ನು ಹಿಡಿತಂದು ರಮಿಸುತ್ತ ಪರಿಪರಿಯ ಬಾಧೆ ಯನ್ನು ಕೊಟ್ಟು ಅವರನ್ನು ಕೊಲ್ಲುತ್ತಿದ್ದನು. ಹೊಟ್ಟೆಪಾಡಿಗಾಗಿ ಹಸು ಕುದುರೆ ನಾಯಿಗಳನ್ನು ತಿನ್ನುತ್ತ ಸಾವಿರವರ್ಷ ಬದುಕಿ ಮುದುಕನಾಗಲು ರೋಗ ಹತ್ತಿ ಕೊಂಡು ಬಳಲುತ್ತಿದನು. ಆಗ ಅವನ ಆಪ್ತಮಂತ್ರಿಗಳು ಬಂದು ನಮಗೆ ಮುಂದೇನು ದಾರಿ ಎನ್ನಲು ನಿಮಗೆ "ತುಂಬ ಕಾಹರ ಸಂಹರ ಪ್ರಹರ" ಎಂದು ಹೇಳಿ ಪ್ರಾಣವನ್ನು ಬಿಟ್ಟನು. ಯಮದೂತರು ಬಂದು ಪಾಶದಿಂದ ಅವನನ್ನು ಕಟ್ಟಲು ಅವು ಪಟಪಟನೆ ಹರಿದು ಹೋದುವು. ಆಯುಧದಿಂದ ಹೊಡೆದು ಬಡಿಯಿರಿ ಎನ್ನಲು ಆಯುಧಗಳೆಲ್ಲ ಮುರಿದು ಹೋದುವು. ಯಮದೂತರು ಮತ್ತೆ ಬಡಿಯುತ್ತಿರಲು ವೀರಭದ್ರನ ಶಿಷ್ಯ ಭಜಿಸಲು ಜ್ವಾಲಾಮುಖಿಯಂತೆ ವೀರಭದ್ರನು ಬರಲು ಆತನಿಗೆ ಜ್ವಾಲಾಮುಖಿ ಗಣೇಶನೆಂಬ ಹೆಸರು ಸಂದಿತು.

ಇನ್ನು ಮುಂದೆ ಶಿವಭಕ್ತರನ್ನು ಹಿಂಸಿಸದೆ ಭವಿಗಳನ್ನು ಶಿಕ್ಷಿಸುವಂತೆ ಹೇಳಿ ವಿದಳನನ್ನು ಬಿಡಿಸಿ ಯಮಭಟರನ್ನು ಹೊಡೆದೋಡಿಸಿದನು. ವಿದಳನು ಹರಹರ ಎಂದು ಉಚ್ಚರಿಸಿದ್ದರಿಂದ ಅವನ ಪಾತಕವೆಲ್ಲ ಹೋಯಿತು ಎಂದು ಮೃತ್ಯುವನ್ನು ಶೂಲದಿಂದಿರಿದು ವಿದಳನನ್ನು ನವರತ್ನಪುಷ್ಪಕದೊಳಗೆ ಕೊಂಡೊಯ್ದು ಗಣಪದವಿ ಯನ್ನು ಕೊಟ್ಟನು. ಶಿವದರ್ಶನದ ಫಲವನ್ನು ಶಿವನ ಎಂಟನೆಯ ಲೀಲೆಯನ್ನು ಮತ್ತೊಂದು ಕಲ್ಪದಂತೆ ಹೇಳಿದನು.

ಸುಕುಮಾರನೆಂಬುವನು ಶಿವದರ್ಶನದಿಂದ ಸದ್ಗತಿಯನ್ನು ಪಡೆದನು. ವಿಂಧ್ಯ ಪರ್ವತದ ಉತ್ತರದಿಕ್ಕಿನಲ್ಲಿ ಕೋಟರವೆಂಬ ದೇಶವಿತ್ತು. ಅಲ್ಲಿ ಐರಾವತಿ ಎಂಬ ನದಿ. ವಶಿಷ್ಠ ಪುತ್ರಶೋಕದಿಂದ ಆ ನದಿಯಲ್ಲಿ ಬೀಳಲು ಅದು ಶತಭಾಗವಾಯಿತು. ವಶಿಷ್ಠನ ಕೊರಳ ಹಗ್ಗವು ಹರಿದು ವಿಪಾಟೆಂಬ ಮಡುವನ್ನು ಕೂಡಿ ಸಿಂಧುವೆಂಬ ನದಿಯೆನಿಸಿತು. ಅದರ ತೀರದಲ್ಲಿ ಅಬ್ಜಕ ಎಂಬ ಪಟ್ಟಣವಿತ್ತು. ಪರಪುರಂಜಯ ನೆಂಬ ರಾಜನು ಅದನ್ನು ಆಳುತ್ತಿದ್ದನು. ಆತನ ಸಚಿವನಿಗೆ ಸುಕುಮಾರನೆಂಬ ಮಗನು ಜನಿಸಿದನು. ಆತನು ನವರೂಪಲಾವಣ್ಯಗಳಿಂದ ಕೂಡಿ ಯೌವನದಲ್ಲಿ ಬ್ರಾಹ್ಮಣ ಕರ್ಮಗಳನ್ನು ಬಿಟ್ಟು ಕಾಮಶಾಸ್ತ್ರವನ್ನು ಕಲಿತು ಪಟ್ಟಣದಲ್ಲಿದ್ದ ಎಲ್ಲ ಹೆಂಗಸರನ್ನು ಬಲಾತ್ಕಾರದಿಂದ ರಮಿಸುತ್ತಿದ್ದನು. ಅವನ ಉಪಟಳವನ್ನು ತಾಳಲಾರದೆ ಜನರು ರಾಜನಲ್ಲಿಗೆ ಬಂದು, "ಸುಕುಮಾರ ದುರುಳ ದುಷ್ಟಾತ್ಮನೀಪುರದ ನಾನಾವರ್ಣ ವರನಾರಿಯರ ನೆರೆದು ಕೆಡಿಸುತ್ತೈದಾನೆ ನಮ್ಮೆಲ್ಲರ ಕುರಿತಿವನನು ಪೊರಡಿಸೈ ರಾಷ್ಟ್ರ ಮೆಸಗಿದ ಪಾಪ ರಾಜೇಂದ್ರಗಿರದಪ್ಪುದು ಎಂಬ ಶೃತಿಯದರಿಂದೆ ರಾಯಂಗೆ ನಿರಯ ವೆಂದತಿ ನೊಂದು ಪೊಡಮಡುತ" ಗೋಳಿಟ್ಟರು. ಅದನ್ನು ಕೇಳಿದ ರಾಜ ಕೋಪ ದಿಂದ ಅವನನ್ನು ಹಿಡಿತರಿಸಿ ದೇಶದಿಂದ ಹೊರಕ್ಕೆ ಅಟ್ಟಿಸಿದನು. ಸುಕುಮಾರ ಕೀರ ದೇಶಕ್ಕೆ ಹೋಗಿ ಅಲ್ಲಿದ್ದ ಮಡದಿಯರನ್ನು ರಮಿಸಲು ಅಲ್ಲಿಂದ ಬಡಿದೋಡಿಸಿದರು

ಅಲ್ಲಿಂದ ಅವನು ಹೂಣಮಂಡಲಕ್ಕೆ ಹೋದನು. ಅಲ್ಲಿಯ ವನದಲ್ಲಿನ ಒಂದು ಸರೋವರದಲ್ಲಿ ಜಲಕೇಳಿಯಾಡುತ್ತಿರುವಾಗ ಅಲ್ಲಿಗೆ ಕಡುಬೆಡಗಿಯಾದ ಪಾಣ್ಬೆ ಚಾಂಡಾಲ ಸತಿ ಬಂದಳು. ಅವಳನ್ನು ಕಂಡು ಮೋಹಗೊಂಡ ಸುಕುಮಾರ ಅವಳೊಡನೆ ಬೆರೆತನು. ಅವಳು ಅವನನ್ನು ಹೊಗಳಿ ನೀನೇ ನನಗೆ ಗಂಡನಾಗು ಎನ್ನಲು ಅವನು ಒಪ್ಪಿ ಅವಳೊಡನೆ ವಾಸಿಸತೊಡಗಿದನು. ಕಳ್ಳತನ ಹಿಂಸೆಗಳಿಂದ ಧನವನ್ನು ಗಳಿಸಿ ಮಧುಪಾನ ಮಾಂಸಭಕ್ಷಣೆಯನ್ನು ಮಾಡುತ್ತಿದ್ದನು. ಬ್ರಾಹ್ಮಣವಧೆ ಗೋವಧೆಗಳೇ ಮೊದಲಾದ ಅಸಂಖ್ಯಾತ ಕರ್ಮಗಳನ್ನು ಮಾಡುತ್ತಿದ್ದನು. ಹೀಗಿರಲು ಅವರಿಗೆ ಐದು ಜನ ಗಂಡು ಮಕ್ಕಳೂ ಇಬ್ಬರು ಹೆಣ್ಣುಮಕ್ಕಳೂ ಆದರು. ಸುಕುಮಾರನಿಗೆ ಎಪ್ಪತ್ತುವರ್ಷ ತುಂಬಲು ಅವನ ಹೆಂಡತಿ ಸತ್ತುಹೋದಳು. ಸುಕುಮಾರನ ಹೆಣ್ಣುಮಕ್ಕಳು ಬೆಳೆದು ಸೌಂದರ್ಯವತಿಯರಾಗಿರಲು ಅವನು ಅವರನ್ನು ಒಲಿಸಿ ಅವರೊಡನೆಯೇ ಕೂಡಿ ಕೊಂಡು ಜೀವಿಸುತ್ತಿದ್ದನು. ಅವನು ಮಾಡುತ್ತಿದ್ದ ಪಾಪಕಾರ್ಯಗಳಿಗೆ ಭೂದೇವಿಯು ಹೇಸಿದಳು.

ಹೂಣಮಂಡಲದ ರಾಜ ವೇದಶಾಸ್ತ್ರಪೌರಾಣಾಗಮಂಗಳನ್ನು ಬಲ್ಲ ಸದ್ಬ್ರಾಹ್ಮಣ ರಿಗೆ ಧನಕನಕ ವಸ್ತುವಾಹನಾದಿಗಳನ್ನು ದಾನವಾಗಿ ಕೊಟ್ಟು ಕಳಿಸಿದನು. ಅವರು ಬರುತ್ತಿದ್ದ ದಾರಿಯನ್ನು ಸುಕುಮಾರನು ಮಕ್ಕಳೊಡನೆ ಅಡಗಟ್ಟಿ ಆ ಬ್ರಾಹ್ಮಣರ ಕೊರಲನ್ನು ಕೊಯ್ದು ಅವರ ಧನಕನಕ ವಸ್ತುಗಳನ್ನು ಅಪಹರಿಸಿದನು. ಈ ವಿಷಯ ವನ್ನು ಕೇಳಿದ ರಾಜ ಸೈನ್ಯವನ್ನು ಕಳಿಸಿಕೊಟ್ಟನು. ಸೈನ್ಯ ಬರುತ್ತಿದ್ದುದನ್ನು ಬೆಟ್ಟದ ಮೇಲಿಂದ ನೋಡಿದ ಸುಕುಮಾರ ಹೀಗೆ ಯೋಚಿಸಿದನು. ''ದಂಡು ಬರುತ್ತಿರುವ ವಾರ್ತೆಯನ್ನು ತಿಳಿಸಿದರೆ ಪಾಳೆಯದ ಜನ ಓಡಿ ಹೋಗುವರು. ಆಗ ಗದ್ದಲವಾಗು ವುದು. ಕೂಡಲೆ ರಾಜಬಲ ಬಂದು ನನ್ನನ್ನು ಕೊಂದುಹಾಕುವುದು. ಹೀಗಿರಲು ನಾನೇಕೆ ಸಾಯಬೇಕು'' ಎಂದು ಸಂಚುಹೂಡಿ ಕಿರಿಯಹೆಂಡತಿಯನ್ನು ಕರೆದುಕೊಂಡು ಓಡಿಹೋದನು. ರಾಜಸೈನ್ಯ ಅಲ್ಲಿದ್ದವರನ್ನೆಲ್ಲ ಕೊಂದುಹಾಕಿತು. ಸುಕುಮಾರ ಕೈರಾತದೇಶಕ್ಕೆ ಹೋದನು. ಅಲ್ಲಿಯ ಮಣಿಕ್ಷಪಥವೆಂಬ ಪುರದ ಜನರು ಆ ಊರಿನ ಪುಷ್ಪವಾಟಿಯಲ್ಲಿದ್ದ ನಾಗೇಶ್ವರ ದೇವಾಲಯದಲ್ಲಿ ಜಾಗರಣೆಯನ್ನು ಮಾಡುತ್ತಿದ್ದರು. ಸುಕುಮಾರನು ಸುರೆಮಾಂಸಗಳನ್ನು ಸೇವಿಸಿ ಕಾಮಬಾಧೆಯಿಂದ ಕೂಡಿದವನಾಗಿ ಶಿವಾಲಯದತ್ತ ಬಂದನು. ಅಲ್ಲಿಯ ಶಿವಲಿಂಗಕ್ಕೆ ವಿಶೇಷವಾದ ಆರತಿಗಳನ್ನು ಬೆಳಗು ತ್ತಿರಲು ಅಲಂಕಾರಭೂಷಿತವಾದ ಆ ಶಿವಲಿಂಗವನ್ನು ಕಂಡು ತದೇಕಚಿತ್ತನಾಗಿ ಅಲ್ಲಿಯೇ ನೋಡುತ್ತಾ ನಿಂತುಬಿಟ್ಟನು. ಪೂಜಾಕಾರ್ಯಗಳೆಲ್ಲ ಮುಗಿದ ಮೇಲೆ ಜನರು ಚದುರಿ ಹೋಗಲು ಸುಕುಮಾರನೂ ಅಲ್ಲಿಂದ ಹೊರಟು ಹೋಗುತ್ತಿರುವಾಗ ಒಂದು ಹಳ್ಳದಲ್ಲಿ ಬಿದ್ದು ಪ್ರಾಣ ಬಿಟ್ಟನು. ಕೂಡಲೇ ಯಮದೂತರು ಬಂದು ಅವರನ್ನು ಹೊಡಿ ಬಡಿ ಕಟ್ಟಿಕೊಂಡೊಯ್ಯಿರಿ ಎಂದು ಬೊಬ್ಬಿಟ್ಟರು. ಅಷ್ಟರಲ್ಲಿ ಸ್ಫಟಿಕದಂತೆ ಹೊಳೆಯುತ್ತಿದ್ದ

ದೇಹಕಾಂತಿಯಿಂದ ಕೂಡಿದ ಗಣೇಶ್ವರರು ಬಂದು ಸುಕುಮಾರನನ್ನು ಕನಕಪುಷ್ಪಕದಲ್ಲಿ ಕುಳ್ಳಿರಿಸಿಕೊಂಡು ಹೋಗಲು ಸಿದ್ಧವಾದರು. ಯಮದೂತರಿಗೆ "ಈತನು ಲಿಂಗನಿಷ್ಠನು ಶಿವನಿಗೆ ಅತಿಪ್ರೀತಿ ಪಾತ್ರನು. ಲಿಂಗದರ್ಶನದಿಂದ ಈತನ ಪಾಪಗಳೆಲ್ಲ ಸುಟ್ಟು ಭಸ್ಮ ವಾಗಿವೆ. ಆದುದರಿಂದ ಇವನ ಗೊಡವೆಗೆ ಹೋಗಬೇಡಿ" ಎಂದು ಶಿವದೂತರು ಹೇಳಿದರು. ಅದಕ್ಕೆ ಯಮದೂತರು "ಇವನು ಪಾಪಾತ್ಮ. ಇವನನ್ನು ನಾವು ಬಿಡುವುದಿಲ್ಲ. ನೀವು ಇವನ ಮುಖವನ್ನು ನೋಡಬಹುದೆ" ಎಂದು ಹೇಳಿ ಸುಕುಮಾರ ನನ್ನು ಹಿಡಿಯುವುದಕ್ಕೆ ಹೋಗಲು ಶಿವದೂತರು ಅವರನ್ನು ಹೊಡೆದೋಡಿಸಿದರು. ಈ ಸಂಗತಿಯನ್ನು ಅವರು ಯಮನಿಗೆ ತಿಳಿಸಲು ಅವನು ಕೋಪಗೊಂಡು ಮುಖ್ಯ ಸಚಿವರಿಗೆ ಸೈನ್ಯ ಸಮೇತ ಹೋಗಿ ಶಿವಕಿಂಕರರನ್ನು ಸದೆಬಡಿದು ಸುಕುಮಾರನನ್ನು ಹಿಡಿದುತರುವಂತೆ ಹೇಳಿದನು. ಅದರಂತೆ ಬಂದ ಯಮನ ಸೈನ್ಯವನ್ನು ಶಿವಗಣಂಗಳು ಸದೆಬಡಿದು ಸುಕುಮಾರನನ್ನು ಬಿಡಿಸಿ ನವರತ್ನಪುಷ್ಪಕದಲ್ಲಿ ಕೈಲಾಸಕ್ಕೆ ಕರೆದುಕೊಂಡು ಹೋದರು. ಸುಕುಮಾರನಿಗೆ ಗಣಪದವಿ ಪ್ರಾಪ್ತವಾಯಿತು.

ತಾರಕಾಸುರನು ಅಳಿದ ಮೇಲೆ ಅವನ ಮಕ್ಕಳು ಗಿರಿಯ ಗುಹೆಯನ್ನು ಸೇರಿ ಬ್ರಹ್ಮನನ್ನು ಕುರಿತು ಉಗ್ರತಪವನ್ನು ಮಾಡಿದರು. ಶಿವನಾಜ್ಞೆಯಂತೆ ಬ್ರಹ್ಮನು ಅವರ ಮುಂದೆ ಪ್ರತ್ಯಕ್ಷನಾಗಲು ಕಮಲಾಕ್ಷ ವಿದ್ಯುನ್ಮಾಲಿ ತಾರಕಾಕ್ಷರು ಅತ್ಯಂತ ಸಂತೋಷಭರಿತರಾಗಿ ವಿನಮ್ರರಾಗಿ ನಮಸ್ಕರಿಸಿ ನಾನಾ ಪರಿಯಾಗಿ ಕೀರ್ತಿಸಿದರು. ಅದಕ್ಕೆ ಬ್ರಹ್ಮನು ತನ್ನನ್ನು ಕುರಿತು ತಪವನ್ನಾಚರಿಸಿದ ಕಾರಣವನ್ನು ಕೇಳಿದನು. "ಎಲೆ ದೇವನೆ ನಮ್ಮ ತಂದೆ ಸತ್ತ ಬಳಿಕ ನಮಗೆ ಇನ್ನಾರು ದಿಕ್ಕು? ನೀವೇ ನಮಗೆ ಮಾತಾಪಿತರು. ನಮಗೆ ಆಕಾಶದಲ್ಲಿ ಸದಾ ಪ್ರಕಾಶಮಾನವಾಗಿರುವ ಹೇಮ, ರೌಪ್ಯ, ಕಾರ್ಬೊನ್ನುಗಳ ರೂಪದ ಮೂರುಪಟ್ಟಣಗಳನ್ನು ಕರುಣಿಸಿ. ಅವು ಸದಾ ತಿರುಗುತ್ತಿರಬೇಕು. ಅವಕ್ಕೆ ಅಮೃತಸರಸಿಯೇ ಮೊದಲಾದ ಸುಮನಸರ ವಸ್ತುಗಳನ್ನು ಕೃಪೆ ಮಾಳ್ಪುದು, ನಮಗೆ ಯಾರಿಂದಲೂ ಸಾವಿಲ್ಲದಂತೆ ವರಪ್ರದಾನಮಾಡಬೇಕೆಂದು ಕೇಳಿಕೊಂಡರು. ಬ್ರಹ್ಮನು ಹಾಗೇ ಆಗಲಿ ಎಂದು ವರವನ್ನು ಕೊಟ್ಟು ನಿಮ್ಮ ಪುರಗಳು ತಿರುಗುತ್ತಿರುವುದು ನಿಂತಾಗ ಒಂದೇ ಬಾಣದಿಂದ ಹೊಡೆದಾಗ ನಿಮಗೆ ಕೇಡಾಗುತ್ತದೆ" ಎಂದು ಹೇಳಿ ಹಿಂತಿರುಗುತ್ತಿರುವಷ್ಟರಲ್ಲಿ ಅವನನ್ನೇ ಹಿಡಿದು ಕಾರಾಗೃಹದಲ್ಲಿಟ್ಟರು. ಬ್ರಹ್ಮನು ಅವರಿಗೆ ಬ್ರಹ್ಮಾಸ್ತ್ರವನ್ನು ಕೊಟ್ಟು ಸಮಾಧಾನ ಪಡಿಸಿ ನೀಚರ್ಗೆಯುಪಕಾರ ಮೆಸಗಲ್ಕೆಯುಪಕಾರವಹುದೆಂಬ ವಾಕ್ಯಂ ನಿರುತಂ" ಎಂದುಕೊಂಡು ಬ್ರಹ್ಮಲೋಕಕ್ಕೆ ಹೋಗಿ ಸುರರೆಲ್ಲ ಕೆಟ್ಟರು ಎಂದು ಚಿಂತಿಸುತ್ತಿದ್ದನು. ಆ ರಾಕ್ಷಸರು ವಿಶ್ವಕರ್ಮನನ್ನು ಕರೆದು ಒಂದೊಂದು ಸಾವಿರ ಯೋಜನದ ನೆಲೆಗಳಿರುವ ಕಬ್ಬಿಣ ಬೆಳ್ಳಿ ಚಿನ್ನದ ಪಟ್ಟಣ ಗಳನ್ನು ನಿರ್ಮಿಸುವಂತೆ ಆಜ್ಞಾಪಿಸಿದರು. ಅದರಂತೆ ಭವ್ಯವಾದ ಮೂರು ಪಟ್ಟಣ ಗಳನ್ನು ನಿರ್ಮಿಸಲು ಅದಕ್ಕೆ ಪ್ರಮೋದಾಪುರ ಕುಮುದಾಪುರ ದಕ್ಷಾಪುರ ಎಂಬ ಹೆಸರು

ಗಳನ್ನಿಟ್ಟು ವಿದ್ಯುನ್ಮಾಲಿ ಕಮಲಾಕ್ಷ ತಾರಕಾಕ್ಷರು ಒಂದೊಂದು ಪಟ್ಟಣದಲ್ಲಿ ವಾಸಿಸುತ್ತಿದ್ದರು. ಈ ದೈತ್ಯರು ತಮ್ಮ ಸೈನ್ಯಸಮೇತ ನರಲೋಕ ಸುರಲೋಕಗಳನ್ನು ಸೂರೆಗೊಂಡರು. ಪುರವನಿತೆಯರನ್ನು ಸೆರೆಹಿಡಿದರು. ಅನೇಕ ಹಾವಳಿಗಳನ್ನು ಮಾಡಿದರು. ಇಂದ್ರನು ದೇವತೆಗಳೊಡನೆ ವಿಷ್ಣುವಿನ ಬಳಿಗೆ ಹೋಗಿ ತಮಗೆ ಒದಗಿದ ಆಪತ್ತನ್ನು ವಿವರಿಸಿದನು. ಆ ಅಸುರರನ್ನು ಸದೆಬಡಿಯಲು ತನ್ನಿಂದಾಗದ ವಿಷ್ಣು ಅವರನ್ನೆಲ್ಲ ಕೂಡಿಕೊಂಡು ಮಹೇಶ್ವರನಲ್ಲಿಗೆ ಹೋಗಿ ಮೊರೆಯಿಟ್ಟನು. ಮಹೇಶ್ವರನು "ನೀನು ಏನುವರವನ್ನಿತ್ತೆ ಮುಂದಿನ ಕಾರ್ಯವೇನು" ಎಂದು ಮಾತಾಡುತ್ತಿದ್ದಾಗ ಗಿರಿಜೆದೇವತೆಗಳ ಮೇಲಿನ ಹಿಂದಿನ ಸಿಟ್ಟಿನಿಂದ ಪರಮೇಶ್ವರನನ್ನು ಅಂತಃಪುರಕ್ಕೆ ಕರೆದುಕೊಂಡು ಹೋದಳು. ದೇವತೆಗಳು ಬಾಗಿಲಲ್ಲೇ ಬಹಳ ಕಾಲ ಕಾದಿದ್ದು ಬೊಬ್ಬಿಡಲು ಬಾಗಿಲನ್ನು ಕಾಯುತ್ತಿದ್ದ ಕುಂಭೋಧರನು ಅವರನ್ನೆಲ್ಲ ಸದೆದಟ್ಟಿದನು. ಆಗ ಅಲ್ಲಿಗೆ ಬಂದ ನಂದೀಶನನ್ನು ದೇವತೆಗಳು ಮೊರೆಹೊಕ್ಕರು. ನಂದೀಶನು ಕುಂಭೋಧರನನ್ನು ಸಮಾಧಾನಪಡಿಸಿ ಶಿವನಿಗೆ ಈ ಸಂಗತಿಯನ್ನು ತಿಳಿಸಲು ಶಿವನು ಮಯನಿಂದ ರಥವನ್ನು ನಿರ್ಮಿಸುವಂತೆ ಆಜ್ಞೆಮಾಡಿದನು. ಆದರಂತೆ ಮಯನು ಭೂಮಿಯನ್ನೇ ತೇರನ್ನಾಗಿಯೂ ಸೋಮ ಸೂರ್ಯರನ್ನೇ ಎಡಬಲದ ಚಕ್ರಗಳನ್ನಾಗಿಯೂ ಹದಿನಾರು ಕಳೆಗಳನ್ನೇ ಮೊಳೆಗಳಾಗಿಯೂ ಮಾಡಿ ದಿವ್ಯವಾದ ರಥವನ್ನು ನಿರ್ಮಿಸಿದನು. ಶಿವನು ಆ ರಥವನ್ನೇರಿ ತ್ರಿಪುರದ ಸಮೀಪಕ್ಕೆ ಬಂದನು. ಆ ರಥದ ಸುತ್ತಲೂ ಅಮರಗಣ ಭೂತಗಣ ಮೃಡಗಣ ವಿರಿಂಚಿಗಣ ವಿಷ್ಣುಗಣ ಶಕ್ರಗಣ ಜಡಪಗಣ ಯಕ್ಷಗಣ ಕಾಲಗಣ ವೇತಾಳಗಣ ದನುಜಗಣಗಳು ತಂತಮ್ಮ ವಾಹನಗಳನ್ನೇರಿ ನಡೆತಂದುವು. ಶಿವನು ಪಾಳಯದ ಕಾವಲನ್ನೂ ಸೇನಾಧಿಪತ್ಯವನ್ನೂ ಬೇರೆ ಬೇರೆಯವರಿಗೆ ವಹಿಸಿ ದೈತ್ಯರ ಪಟ್ಟಣವನ್ನು ಹಣೆಗಣ್ಣಿನಿಂದ ಭಸ್ಮಮಾಡುವುದಾಗಿ ಹೇಳಿ ದಂಡನ್ನಿಳಿದನು. ಆಗ ತಾರಕಾಕ್ಷ ಸಿಂಹಾಸನವನ್ನೇರಲು ದನುಜಸಮೂಹವೆಲ್ಲ ಆವನನ್ನು ಓಲೈಸಿತು. ಅಲ್ಲಿದ್ದ ಶುಕ್ರನ ಮುಖವನ್ನು ನೋಡಿ ದೇವತೆಗಳು ನಮ್ಮನ್ನು ಸಂಹರಿಸಲು ಈಶ್ವರನನ್ನು ಆಶ್ರಯಿಸಿಕೊಂಡು ಬಂದಿದ್ದಾರೆ, ಈಗೇನುಮಾಡಬೇಕು ಎನ್ನಲು ಈಶ್ವರನೊಡನೆ ದಂಡೋಪಾಯವನ್ನು ಮಾಡದೆ ಶರಣುಹೊಗುವುದೇ ಕ್ಷೇಮಕರ ಎಂದನು. ಅದನ್ನು ಕೇಳಿದ ವೀರವಿದ್ಯುನ್ಮಾಲಿಯೇ ಮೊದಲಾದವರು ದೇವತೆಗಳ ಸೈನ್ಯವನ್ನು ಸದೆಬಡಿಯುವುದಾಗಿ ಪ್ರತಾಪವನ್ನು ಕೊಚ್ಚಲು ತಾರಕಾಕ್ಷನು ಅವರನ್ನೆಲ್ಲಾ ಕೂಡಿಕೊಂಡು ಸುರರ ಪಾಳೆಯವನ್ನು ನೋಡಲು ಬಂದನು. ಭೂಮಿ ಬೆಸಲಾದಂತೆ ಮೆರೆಯುತ್ತಿದ್ದ ಪಾಳೆಯವನ್ನು ಕಂಡು ರಕ್ಕಸನ ಹೃದಯ ಕಂಪನಗೊಂಡಿತು.

ಅಷ್ಟದಿಕ್ಪಾಲಕರು ಹರನಿಗೆ ನಮಸ್ಕರಿಸಿ ಉಡುಗೊರೆಗಳನ್ನು ಪಡೆದು ತ್ರಿಪುರಕ್ಕೆ ಲಗ್ಗೆಯನ್ನು ಮಾಡಿದರು. ಗರುಡ ಗಂಧರ್ವ ಯಕ್ಷ ಉರಗ ಪಿಶಾಚ ಗುಹ್ಯಕ ಸಿದ್ಧ ಕಿಂಪುರುಷಗೇ ಮೊದಲಾದವರು ದಿಕ್ಕುದಿಕ್ಕಿನಿಂದ ಲಗ್ಗೆಹಾಕಿದರು. ಎರಡು ಪಕ್ಷಗಳಿಗೂ

ಘೋರಯುದ್ಧವಾಯಿತು. ಸುರರ ಸೈನ್ಯ ರಾಕ್ಷಸರ ಸೈನ್ಯವನ್ನೆಲ್ಲ ಧ್ವಂಸಮಾಡಿ ಮುಪ್ಪುರಗಳನ್ನು ಪ್ರವೇಶಿಸಿತು ಆಗ ವೀರವಿದ್ಯುನ್ಮಾಲಿ ಕಮಲಾಕ್ಷ ಮೊದಲಾದವರು ತಮ್ಮ ತಮ್ಮ ಸೈನ್ಯದೊಡನೆ ದೇವತೆಗಳ ಮೇಲೆ ಬೀಳಲು ಇಂದ್ರನೇ ಮೊದಲಾದವರು ಪಲಾಯನಮಾಡಿದರು. ಆಮೇಲೆ ಗುಹನಿಗೂ ವಿದ್ಯುನ್ಮಾಲಿಗೂ ಘೋರಯುದ್ಧ ವಾಯಿತು. ತಾರಕಾಕ್ಷನು ಅತ್ಯಂತಕೋಪದಿಂದ ವೀರಭದ್ರಾದಿಗಳನ್ನು ಕಂಡು ಕೊಲ್ಲುವೆ ನೆಂದಿರುವಾಗ ಅವನ ಭಾವಮೈದ ಶಿಂಶುಮಾರನು ವಿಲಯಾಗ್ನಿಯಂತೆ ಬಂದು ಹರಿಹರ ಬ್ರಹ್ಮಾದಿಗಳನ್ನೂ ದೇವತೆಗಳನ್ನೂ ಸುಡುವೆನು ಎಂದು ಆರ್ಭಟಿಸಿದನು. ಆಗ ನಂದಿ ಅವನಿಗೆ ಇದಿರಾಗಿ ಶಿಂಶುಮಾರನನ್ನೂ ಅವನ ಸೈನ್ಯವನ್ನೂ ಧ್ವಂಸಮಾಡಿದನು. ಇಷ್ಟಾದರೂ ದೈತ್ಯರು ಸಾಯದಿರಲು ವಿಷ್ಣುವು ಸತ್ತ ಅಸುರರು ಎದ್ದುಬಂದು ಮತ್ತೆ ಯುದ್ಧಮಾಡುತ್ತಿದ್ದಾರೆ ಎನ್ನಲು ಶಿವನು ವಿಷ್ಣುವಿಗೆ ತ್ರಿಪುರಕ್ಕೆ ಹೋಗಿ ಅಮೃತ ವನ್ನೂ ಹರಭಕ್ತಿಯನ್ನು ಪತಿವ್ರತತೆಯನ್ನೂ ಕೆಡಿಸುವಂತೆ ಹೇಳಲು ವಿಷ್ಣು ನಾರದನ ಸಹಾಯದಿಂದ ರೂಪಾಂತರಹೊಂದಿ ಈ ಕಾರ್ಯವನ್ನು ಸಾಧಿಸಿದನು. ಶಿವನು ತ್ರಿಪುರಗಳು ಒಂದುಗೂಡುವಂತೆ ಮಾಡಿ ಪಾಶುಪತಾಸ್ತ್ರವನ್ನು ಪ್ರಯೋಗಿಸಲು ಅವು ಭಗಭಗನೆ ಬೆಂದು ಭಸ್ಮವಾದುವು. ದೇವತೆಗಳು ಸಂತೋಷಭರಿತರಾದರು. ಶಿವನು ಎಲ್ಲರನ್ನೂ ಸಂತೈಸಿ ಕೈಲಾಸಕ್ಕೆ ಹೋದನು.

**ಜಲಂಧರ ಶಿರಚ್ಛೇದನ**

ಒಂದು ಕಾಗೆ ಗಂಗಾನದಿಯಲ್ಲಿ ಮುಳುಗಿ ಶಿವದೇವಾಲಯದ ಕಲ್ಲುಕಂಭದೆಡೆ ಕುಳಿತು ರೆಕ್ಕೆಯನ್ನು ಬಡಿಯಲು ಅದರಿಂದ ಚೆಲ್ಲಿದ ನೀರಿನ ಕಣಗಳು ಲಿಂಗದ ಮೂರ್ತಿಯ ಮೇಲೆ ಉದುರಲು ಅದು ಶಿವನಿಗೆ ಅಭಿಷೇಕವಾದಂತಾಯಿತು. ಯಮನು ಆ ಕಾಗೆಯ ಧರ್ಮಾಧರ್ಮವನ್ನು ಕೇಳಲು ಆ ಕಾಗೆ ಅಸುರೇಶನಾಗುವುದು ಎನ್ನಲು ಅದ ವೃತ್ರಾಸುರನ ಮಗನಾಯಿತು. ಹೀಗಿರಲು ವೃತ್ರಾಸುರನ ಗೃಹಕ್ಕೆ ಭಾರ್ಗವನು ಬಂದು ಈ ಮಗು ಅತ್ಯಂತ ಪರಕ್ರಮಶಾಲಿಯಾಗಿ ಸುರರನ್ನು ಸಂಹರಿಸಿ ಅವರಿಂದ ಸೇವೆಯನ್ನು ಕೈಕೊಂಡು ಪ್ರಖ್ಯಾತನಾಗುವನೆಂದನು. ಇವನಿಗೆ ಜಲಂಧರ ಎಂಬ ಹೆಸರನ್ನಿಟ್ಟು ಮಂತ್ರೋಪದೇಶವನ್ನು ಮಾಡಿ ತನ್ನಾಶ್ರಮಕ್ಕೆ ಹಿಂತಿರುಗಿದನು. ಜಲಂಧರನ ಬಾಧೆಯನ್ನು ತಾಳಲಾರದೆ ದೇವತೆಗಳು ಅವನ ಮೇಲೆ ದಂಡೆತ್ತಿಬರಲು ಅವನು ಮಾಯವಾದನು. ಒಂದು ತಪೋವನದೊಳಗೆ ಉಗ್ರತಪಸ್ಸನ್ನಾಚರಿಸಿದನು. ಅವನ ತಪಸ್ಸಿನ ಜ್ವಾಲೆಯಿಂದ ಮೂರುಲೋಕಗಳೂ ತಲ್ಲಣಿಸಿದವು. ಇದನ್ನು ಅರಿತ ಬ್ರಹ್ಮನು ಶಿವನಿಗೆ ಬಿನ್ನೈಸಲು ಶಿವನು "ಎಲೆ ಬ್ರಹ್ಮನೆ ಪದುಳದಿಂದ ಸುರಬೇಡಿದ ವರವನಿತ್ತು ಬಾ" ಎಂದನು. ಜಲಂಧರನ ಮುಂದೆ ಬ್ರಹ್ಮ ಪ್ರತ್ಯಕ್ಷ ನಾಗಲು ಜಲಂಧರನು ಸಾಷ್ಟಾಂಗನಮಸ್ಕಾರಮಾಡಿ ಭಯಭಕ್ತಿಯಿಂದ ಕೈಮುಗಿದು ನಿಂತುಕೊಂಡನು. ಆಗ ಬ್ರಹ್ಮನು "ಎನ್ನೈ ಜಲಂಧರಾ ನಿನ್ನ ಮನದಿಷ್ಟಮಂ

ನ್ಯೂನವಿಲ್ಲದೆ ಕೇಳು'' ಎನ್ನಲು ಜಲಂಧರನು ಆತ್ಮೇಚ್ಛೆಯಿಂದ ನಡೆಯುವುದಕ್ಕೆ ನ್ಯೂನತ್ವವಿಲ್ಲದಿರುವಂತೆಯೂ ಸುರರಿಂದಲೂ ಶಿವನಿಂದಲೂ ಮರಣವಿಲ್ಲದ ವರವ ಕೊಡುವಂತೆ ಕೇಳಿಕೊಂಡನು. ಬ್ರಹ್ಮನು ವರವನ್ನು ಕೊಟ್ಟೆ ಎಂದು ಹೇಳಿ ಹಿಂತಿರುಗಲು ಜಲಂಧರನು ಅವನನ್ನು ಅಡ್ಡಗಟ್ಟಿ ''ಎನ್ನ ಕೂಡೆ ಕಾದ್ಯೆ ಭುಜದ ತೀಂಟೆಯಡಗುವೋಲ್'' ಎಂದನು. ಬ್ರಹ್ಮನು ಉಪಾಧ್ಯಾಯನ ಮೇಲೆ ನೀನು ಯುದ್ಧಮಾಡಿದರೆ ಜನ ನಗುವುದಿಲ್ಲವೆ ? ನಿನಗೆ ಸರಿಯಾದ ಹಗೆ ವಿಷ್ಣು. ನೀನು ಅವನೊಡನೆ ಕಾದಿ ಗೆದ್ದರೆ ಪರಾಕ್ರಮಿಯಾಗುವೆ ಎನ್ನಲು ಬ್ರಹ್ಮನನ್ನು ಬಿಟ್ಟು ಬಿಟ್ಟನು. ಇತ್ತ ಜಲಂಧರನು ಸುರರನ್ನು ಬೇಟೆಯಾಡುತ್ತ ದೇವಲೋಕವನ್ನು ಸೂರೆಮಾಡಿ, ಮುನಿಗಳ ಆಶ್ರಮಗಳನ್ನೆಲ್ಲಾ ಧೂಳೀಪಟಮಾಡಿ ವೈಕುಂಠಕ್ಕೆ ಧಾಳಿಯಿಟ್ಟು ಲಕ್ಷ್ಮಿಯನ್ನು ಸೆರೆಹಿಡಿದನು. ವಿಷ್ಣು ಅವನೊಡನೆ ಯುದ್ಧಕ್ಕೆ ನಿಂತನು. ಘೋರಯುದ್ಧವಾದ ಮೇಲೆ ಜರಾಸಂಧ ವಿಷ್ಣುವನ್ನು ಬಂಧಿಸಿ ತನ್ನ ಪಟ್ಟಣಕ್ಕೆ ಕೊಂಡೊಯ್ದನು. ದೇವತೆಗಳಿಗೊದಗಿದ ದುಸ್ಥಿತಿಯನ್ನು ಅರಿತ ನಾರದನು ಜಲಂಧರನನ್ನು ಕಪಟದಿಂದ ಕೆಡಿಸಬೇಕೆಂದು ಭಾವಿಸಿ ಹರನೊಡನೆ ವೈರವನ್ನು ಗಂಟಿಕ್ಕಲು ರೂಪಾಂತರವನ್ನು ತಾಳಿ ಜಲಂಧರನ ಆಸ್ಥಾನಕ್ಕೆ ಬಂದನು. ನಾರದನನ್ನು ನೋಡಿದ ಜಲಂಧರ ''ನೀನಾರು ಮುನಿನಾಥ ಬಂದ ಕಜ್ಜವನರುಹು'' ಎಂದನು. ಬ್ರಹ್ಮ ವಿಷ್ಣು ಮೊದಲಾದ ಪರಾಕ್ರಮಿಗಳನ್ನು ಜಯಿಸಿರುವೆ ಎಂಬುದನ್ನು ಕೇಳಿ ನಿನ್ನನ್ನು ನೋಡಲು ಬಂದಿರುವೆ. ಆದರೆ ಎಲ್ಲರಿಗೂ ಒಡೆಯನಾದ ಪರಮೇಶ ನೊಬ್ಬನಿದ್ದಾನೆ. ಆತನನ್ನು ಜಯಿಸುವುದು ಯಾರಿಂದಲೂ ಸಾಧ್ಯವಿಲ್ಲ ಎನ್ನಲು ಜಲಂಧರ ಘುಡುಘುಡಿಸಿ ''ಎಲ್ಲಿಪ್ಪನವನಾವ ಬಂಧುಗಳ್ ಸತಿಸುತ ಸಹಾಯಿಗಳು ಚತುರಂಗಬಲಮುಂಟೆ'' ಎಂದು ಪ್ರಶ್ನಿಸಿದನು. ಈಗಲೇ ಹೋಗಿ ಅವನೊಡನೆ ಯುದ್ಧ ಮಾಡಿ ಪರಶಿವನನ್ನೂ ಅವನ ಸತಿಸುತರನ್ನೂ ಗಣಾಳಿಯನ್ನು ಸೆರೆಹಿಡಿದು ಕಾರಾಗೃಹ ದಲ್ಲಿಡುತ್ತೇನೆ ಎಂದು ಪ್ರಯಾಣಭೇರಿಯನ್ನು ಹೊಡೆಸಿದನು. ನಂದಿ ಈ ಸಂಗತಿಯನ್ನು ಶಿವನಿಗೆ ಬಿನ್ನೈಸಲು ಶಿವನು ಸೈನ್ಯಸಮೇತ ಯುದ್ಧಕ್ಕೆ ಹೊರಟನು. ಜಲಂಧರನು ಶಿವನನ್ನು ಕಂಡು ''ಅಜಕಪಾಲಮಂ ಕೊಂಡು ಭಿಕ್ಷಕ್ಕೆ ಬಂದೆಯೊ ಪೇಳಿಲ್ಲದೊಡೆ ರಣಕೆ ಸನ್ನದ್ಧನಾಗು'' ಎನ್ನಲು .ಶಿವನು ಅಗ್ನಿನೇತ್ರದಿಂದ ಒಂದು ಕಿಡಿಯನ್ನು ಹಾರಿಸಿ ದೈತ್ಯನ ಸೈನ್ಯವನ್ನೆಲ್ಲಾ ಭಸ್ಮಮಾಡಲು ಜಲಂಧರ ಅವನನ್ನು ಹಾಸ್ಯಮಾಡಿ ಮೂದಲಿ ಸಿದನು. ಶಿವನು ಜಲಂಧರನ ಪರಾಕ್ರಮವನ್ನು ಹೊಗಳಿ ನಾನು ಹಳೆಯ ಭಿಕ್ಷುಕ, ನಿರಾಯುಧ. ನನಗೆ ಒಂದು ಜಲಚಕ್ರವಿದೆ ನೋಡು ಎಂದು ಉಂಗುಟದ ತುದಿಯಿಂದ ಅದನ್ನು ಬರೆದು ತೆಗೆದುಕೊಳ್ಳುವಂತೆ ಹೇಳಿದನು. ಜಲಂಧರ ಎಷ್ಟು ಪ್ರಯಾಸಪಟ್ಟು ಎತ್ತಿದರೂ ಆ ಚಕ್ರ ಒಂದು ಗೇಣು ಮೇಲಕ್ಕೇಳಲಿಲ್ಲ. ನಾರದನು ಅವನನ್ನು ಗೇಲಿ ಮಾಡಿದನು. ಆಗ ಜಲಂಧರ ತಲೆಯಿಂದ ಆ ಚಕ್ರವನ್ನು ಎತ್ತಲು ತೊಡಗಿದಾಗ

ಅವನ ತಲೆ ಕತ್ತರಿಸಿ ಹೋಗಿ ಕೆಳಕ್ಕುರುಳಿದನು. ಆದರೆ ಅವನ ಶಿರಸ್ಸು ಶಿವನನ್ನು ಸ್ತುತಿಸುತ್ತಿರಲು ಶಿವನು "ಜಲಂಧರ ನಿನ್ನಿಷ್ಟವೇನು" ಎಂದು ಕೇಳಿದನು. "ನಾನು ಎಲ್ಲ ಭೋಗಭಾಗ್ಯಗಳನ್ನು ಉಂಡದ್ದಾಯಿತು. ನಿನ್ನ ಚರಣಸರಸಿರುಹವನ್ನು ಯಾವಾಗಲೂ ನೋಡುತ್ತಿರುವ ಸಂಖಿವನ್ನು ಮಾತ್ರ ಕರುಣಿಸು ನಿನ್ನ ಅಂಘ್ರಿಯಲ್ಲಿ ಧರಿಸು" ಎನ್ನಲು ಶಿವನು ಪ್ರೀತಿಯಿಂದ ಜಂಘೆಯೊಳಗೆ ಧರಿಸಿದನು. ಆಗ ವಿಷ್ಣು ಜಲಂಧರನು ಸತ್ತದ್ದನ್ನು ಕೇಳಿ ಉರಗಪಾಶದ ಕಟ್ಟಿನೊಡನೆ ಶಿವನ ಮುಂದೆ ಬಿದ್ದನು. ಜಲಂಧರನು ವೈಕುಂಠಕ್ಕೆ ಹೋಗಿ ಹರಿಪಾಶದಿಂದ ಬಂಧಿಸಿದ್ದನ್ನು ವಿವರಿಸಲು ಶಿವನು ವಿಷ್ಣುವಿಗೆ ವೈಕುಂಠಕ್ಕೆ ಹೋಗುವಂತೆ ತಿಳಿಸಲು ಅಸುರರ ಬಾಧೆಯನ್ನು ತಡೆಯಲು ಚಕ್ರವನ್ನು ತನಗೆ ಕೊಟ್ಟಲ್ಲದೆ ವೈಕುಂಠಕ್ಕೆ ಹೋಗಲಾರೆನೆಂದು ತಿಳಿಸಿದನು. ವಿಷ್ಣುವಿನ ಪ್ರಾರ್ಥನೆಗೆ ಒಲಿದ ಶಿವನು ಚಕ್ರವನ್ನು ಕೊಟ್ಟು ವೈಕುಂಠಕ್ಕೆ ಕಳಿಸಿಕೊಟ್ಟನು.

ಕ್ಷುಪನೆಂಬ ರಾಜನು ಚತುರಂಗಬಲಸಮೇತ ದಧೀಚಿಯ ಆಶ್ರಮಕ್ಕೆ ಪ್ರತಿನಿತ್ಯ ಬಂದು ಪಗಡೆಯಾಡುತ್ತಿದ್ದನು. ಒಂದುದಿನ ಆತನು ಇಪ್ಪತ್ತೊಂದು ಬಾರಿ ಸೋತು ಕೋಪಗೊಂಡಿದ್ದನು. ಆಗ ರಾಜನ ಆಪ್ತರು ದಧೀಚಿಯ ಕಿವಿಯೊಳಗೆ "ಒಂದು ಆಟ ನೀವು ಸೋತರೆ ನಾವು ರಾಜನನ್ನು ಕರೆದೊಯ್ಯುತ್ತೇವೆ" ಎನ್ನಲು, ದಧೀಚಿ "ಚಲದ ಸಿಂಗದ ಶಿಶುಗಳೆತ್ತ ಸೀಳ್ನಾಯೆತ್ತಲಳಿಕಾಕ್ಷಭಕ್ತರೀ ಹರಿದಾಸನೊಳ್ ಸೋಲ್ವೊಡಳ ವಡದು ಶಿವನಿಷ್ಠೆ" ಎಂದನು. ಅದನ್ನು ಕೇಳಿದ ರಾಜ "ಎಲೆ ದಧೀಚಿ ಚಿರಕಾಲ ಹರ ಭಕ್ತಿಯಿಂದೆರಲೆಸಮ್ಮ ಮತ್ತರಿದೆನಿಪ ಭಾಗ್ಯಮಿದೆ ನಿನ್ನ ತಿಕಕೊಂದು ಪಳಿಯರಿವೆಯುಂ ಕಾಣೆಯಾಂ ಹರಿಯಿಂದೆ ಸಕಲಸೌಭಾಗ್ಯಮಂ ಭೋಗಿಪೆ ಗಡ, ತಿರುಕ ಗೊರವನ ಭರತ" ಎಂದು ಮೂದಲಿಸಿದನು. ದಧೀಚಿಯು ಕೋಪದಿಂದ ಅರಸನ ಬಾಯನ್ನು ಬಡಿಯಲು ಅವನು ವಜ್ರಗದೆಯಿಂದ ದಧೀಚಿಯನ್ನು ಬಡಿಯಲು ಅವನ ದೇಹದ ಎಲುಬುಗಳು ಪುಡಿಪುಡಿಯಾಗಿ ಎಂಟುದಿಕ್ಕಿಗೂ ಚದುರಿಹೋದುವು. ಆ ಮುನಿ ಸಾಯುವಾಗ ಭಾರ್ಗವನನ್ನು ಸ್ಮರಿಸುತ್ತ ಸಾಯಲು. ಕೂಡಲೇ ಭಾರ್ಗವ ಬಂದು ಚದುರಿಹೋಗಿದ್ದ ಅಸ್ಥಿಗಳನ್ನೆಲ್ಲಾ ತರಿಸಿ ಮೃತ್ಯುಂಜಯ ಮಂತ್ರದಿಂದ ಆತನಿಗೆ ಪ್ರಾಣದಾನಮಾಡಿದನು. ದಧೀಚಿ "ನನ್ನ ಹೆತ್ತ ತಂದೆ" ಎಂದು ಸ್ತುತಿಸಲು ಅಸುರಗುರುವಾದ ಶುಕ್ರಾ ಚಾರ್ಯನು ವಿಶ್ವಕ್ಕೆಲ್ಲ ಹರನೇ ತಂದೆ ಅವನಿಂದ ನಿನ್ನಿಷ್ಟವನ್ನು ಪಡೆದುಕೊ" ಎಂದು ಹೇಳಿ ಹೊರಟುಹೋದನು. ಅದರಂತೆ ದಧೀಚಿ ಶಿವನನ್ನು ಕುರಿತು ಉಗ್ರತಪವನ್ನು ಮಾಡಲು ಶಿವನು ಮೆಚ್ಚಿ ಅವನಿಗೆ ವಜ್ರಕಾಯವನ್ನಿತ್ತು "ನಿನ್ನ ಹೃದಯದಲ್ಲಿ ನಿಂತು ನಿನ್ನ ಮನದ ಇಚ್ಛೆಯನ್ನು ಕೊಡುವೆನು" ಎಂದು ಹೇಳಿದನು. ದಧೀಚಿ ಪರಶಿವನ ಸಹಾಯದಿಂದ ಕ್ಷುಪನ ಸಭೆಗೆ ಬಂದು "ವಜ್ರಗದೆಯಿಂದ ಶಿರವ ಬಡಿದುಕೊಂದ ದ್ರೋಹಿ" ಎಂದು ಹೇಳಿ ಅವನ ತಲೆಯನ್ನು ಮುಷ್ಟಿಯಿಂದ ತಿವಿದು ಅವನ ಸೈನ್ಯವನ್ನು ಸದೆಬಡಿದನು. ಕ್ಷುಪನು ವಜ್ರಗದೆಯಿಂದ ಹೊಡೆಯಲು ಅದು ದಧೀಚಿಯನ್ನು

ತಗಲುತ್ತಲೇ ಪುಡಿಪುಡಿಯಾಯಿತು. ದಧೀಚಿ ಕಾಲಿನಿಂದ ಅವನನ್ನು ಒದೆಯಲು ಅವನ ಅಸ್ಥಿಗಳು ನುಗ್ಗಾಗಿ ಒರಲಾಡಿದನು. ''ಯಾರು ಬಂದು ನಿನ್ನನ್ನು ಕಾಪಾಡುವರೋ'' ಎಂದು ಹೇಳಿ ದಧೀಚಿ ಹೊರಟುಹೋದನು. ಕ್ಷುಪನು ಹರಿಯನ್ನು ಪೂಜಿಸಲು ಹರಿಬಂದು ''ಇದೇನಧಮ ಶರಣರೊಡನತಿವೈರದಿರವಿನಿಂ ಹಾನಿ ನಿನಗಾಯ್ತು; ಮದ್ಭಕ್ತನಾಗಿ ವೈರವನು ಶಂಕರನೊಡನೆ ಯಾವನಾಚರಿಪನೋ ಬಳಿಕ ಶಂಕರಭಕ್ತನಾಗಿ ನನ್ನಲಿ ವೈರವಾವನಾಚರಿಪನೊ ವೇಣರ್ವರುಂ ತರಣಿಚಂದಿರರಿಪ್ಪ ತನಕ ನರಕಾಲಯದೊಳಿರುವರ್'' ಎಂದು ಬುದ್ಧಿವಾದವನ್ನು ಹೇಳಿದನು. ಕ್ಷುಪನು ಒಂದು ಪಂಥನನ್ನು ಸಲ್ಲಿಸಬೇಕೆನ್ನಲು ವಿಷ್ಣು ನೀನು ಶಿಷ್ಯನಾಗು ಎಂದು ಹೇಳಿ ತಾನು ವೃದ್ಧಮುನಿವೇಷವನ್ನು ತಾಳಿ ದಧೀಚಿಯು ಆಶ್ರಮಕ್ಕೆ ಬಂದನು. ಅವರ ಕಪಟವನ್ನರಿತ ದಧೀಚಿಯು ''ನೀನು ಶಿಷ್ಯನನ್ನು ಸಲಹಲು ಬಂದು ಭಿಕ್ಷಬೇಡಬಹುದೆ ಸಮರ ವನ್ನುಮಾಡಿರಿ'' ಎನ್ನಲು, ''ನೀನು ಮುನಿ. ನಾನು ದೈವ. ನೀನೇನುಮಾಡಿದರೂ ನಿನ್ನನ್ನು ಬಿಡಿಸುವರಿಲ್ಲ'' ಎನ್ನಲು ದೇವತೆಯನ್ನು ತೋರು ಎಂದು ದಧೀಚಿ ಹೇಳಿದನು. ಆಗ ವಿಷ್ಣು ಹೊಟ್ಟೆಯನ್ನು ಬಗಿದು ವಿಶ್ವವನ್ನು ತೋರಿಸಲು ದಧೀಚಿ ನೀನು ಮಾಡದ ಕೃತ್ಯಮಂ ಮಾಡಿ ಬಹುರೂಪನೊಗುಮಿಗೆಯೊಳೆಸಗಿದ್ದೈ ನಗರೆ ಮಿಕ್ಕವರ್'' ಎಂದು ತಾನು ಉಗುರ ಕೊನೆಯಲ್ಲಿ ಹರಿಯಜೇಂದ್ರರನ್ನೂ ಅಬುಜಾಂಡಕೋಟಿಯನ್ನೂ ತೋರಿಸಿದನು. ಆಗ ವಿಷ್ಣು ನೀನು ಯುದ್ಧಕ್ಕೆ ಯೋಗ್ಯನಾದವನು ಶಸ್ತ್ರಾಸ್ತ್ರಗಳನ್ನು ಹಿಡಿದುಕೋ ಎಂದು ದಧೀಚಿಯ ಮೇಲೆ ಅಸ್ತ್ರಗಳನ್ನು ಪ್ರಯೋಗಿಸಿದನು. ಅಸ್ತ್ರ ಗಳೆಲ್ಲ ವ್ಯರ್ಥವಾಗಲು ಹಿಂದೆ ಹರ ಚಕ್ರವನ್ನು ಕೊಡುವಾಗ ಶಿವಭಕ್ತರ ಮೇಲೆ ಇದನ್ನು ಪ್ರಯೋಗಿಸಬಾರದು ಎಂದು ಹೇಳಿದುದನ್ನು ಮರೆತು ಚಕ್ರವನ್ನು ಪ್ರಯೋಗಿಸಿದನು. ದಧೀಚಿ ಹೆದರದೆ ಅದನ್ನು ಎಡದ ಕೈಯಿಂದ ಹಿಡಿದು ಕೊಂಡು ಪುಡಿಪುಡಿಮಾಡಿ ತರಗಲೆಯಂತೆ ಉಫ್ ಎಂದು ಊದಿಬಿಟ್ಟನು. ಆಮೇಲೆ ಹರಿಯ ಮುಂದಲೆಯನ್ನು ಹಿಡಿದುಕೊಂಡು ನೆಲಕ್ಕೆ ಕೆಡಹಿ ಅವನ ಎದೆಗೆ ಒದೆಯಲು ಅಲ್ಲಿ ಲಕ್ಷ್ಮಿ ನೆಲಸಿದಳು. ಹರಿ ಅವನ ಪಾದಗಳಿಗೆರಗಿ ಚಕ್ರವನ್ನು ಬೇಡಲು ''ಹರನನರ್ಚಿಸಿ ಪಡೆದುಕೊ'' ಎಂದು ಹೇಳಿ ಬಿಳ್ಕೊಟ್ಟನು.

ದನುಜರು ತಪಸ್ಸನ್ನು ಮಾಡಿ ಬ್ರಹ್ಮನಿಂದ ವರವನ್ನು ಪಡೆದು ಅಮರರನ್ನು ಸದೆಬಡಿಯಲು ಅವರು ವಿಷ್ಣುವಿಗೆ ದೂರಲು ವಿಷ್ಣುವು ನಾನೇ ನಿರಾಯುಧಪಾಣಿ ಅರ್ಧೇಂದುಮೌಳಿಯ ಪೂಜಿಸಿ ಚಕ್ರವನ್ನು ಪಡೆದು ಬರುವುದಾಗಿ ಹೇಳಿ ಪ್ರತಿನಿತ್ಯವೂ ಸಹಸ್ರಕಮಲಗಳಿಂದ ಹರನನ್ನು ಪೂಜಿಸುವ ನೇಮವನ್ನಿಟ್ಟುಕೊಂಡನು. ಒಂದುದಿನ ಒಂದು ಕಮಲವು ಸಾಲದೇಹೋಗಲು ತನ್ನ ಕಣ್ಣನ್ನೇ ಕಿತ್ತು ಹರನ ಪಾದದ ಮೇಲಿಟ್ಟು ಪೂಜಿಸಲು ಹರನು ಸಂಪ್ರೀತನಾಗಿ ಕಮಲಾಕ್ಷನೆಂಬ ಹೆಸರನ್ನು ಕೊಟ್ಟು ಹರಿಯಪ್ರಾರ್ಥನೆ ಯಂತೆ ಆತನಿಗೆ ಚಕ್ರವನ್ನು ಕೊಟ್ಟನು. ಆ ಚಕ್ರಕ್ಕೆ ಶಿವ ''ಎಲೆ ಸುದರ್ಶನವೆ ನಮ್ಮಯ

ಭಜಕ ಹರಿಯ ಕರತಳದೊಳಿಹಂದತಿಭ್ರಷ್ಟರಂ ಕಂಡು ವಧಿಸು ನೀನಲಘಂ ಶಿವಲಿಂಗ ಭಕ್ತರ ಕಂಡು ಪೊಡವಂಡಂವುದು'' ಎಂದು ಹೇಳಿ ಕೈಲಾಸಕ್ಕೆ ಹೋದನು.

ಬ್ರಹ್ಮನ ಬಾಯಿಂದ ಸರಸ್ವತಿ ಜನಿಸಿ ಅತ್ಯಂತ ಸೌಂದರ್ಯದಿಂದ ವಿರಾಜಿಸುತ್ತಿದಳು. ಅವಳ ಸೌಂದರ್ಯಕ್ಕೆ ಮಾರುಹೋದ ಬ್ರಹ್ಮ ಕಾಮಾತುರದಿಂದ ಅವಳನ್ನು ಹಿಡಿದುಕೊಳ್ಳಲು ಹೋದನು. ಸರಸ್ವತಿ ''ಎಲೈ ಬ್ರಹ್ಮನೇ ನಿನ್ನ ಮಗಳಾದ ನನ್ನನ್ನೇ ಕಾಮಿಸಲು ಇಚ್ಛಿಸಬಹುದೆ? ನೀನು ಪಾಪಿಯಲ್ಲವೆ? ಲೋಕದ ಜನ ನಗುವುದಿಲ್ಲವೆ. ಲೋಕೇಶನಾದ ನೀನೇ ದಾರಿ ತಪ್ಪಬಹುದೆ?'' ಎಂದಳು. ಅದನ್ನು ಕೇಳಿದ ಬ್ರಹ್ಮ ಸಾಕು ನಿನ್ನ ಚಾಟುಮಾತು; ಹೆಣ್ಣೊಂದು ಕುಲ, ಗಂಡೊಂದು ಕುಲ. ಶಿವಶಕ್ತಿರೂಪ ಎರಡುತೆರ. ಜಗವು ಪಥ್ಯ. ಉಳಿದುದೆಲ್ಲ ಮಿಥ್ಯ. ಆದುದರಿಂದ ಕಾಮಕೇಳಿಗೆ ಸಿದ್ಧವಾಗು ಎಂದು ಹೇಳಿ ಮತ್ತೆ ಅವಳನ್ನು ಹಿಡಿದುಕೊಳ್ಳಲು ಹೋದನು. ಅವಳು ಹೆಣ್ಣುಜಿಂಕೆಯ ರೂಪತಾಳಿ ಓಡಿಹೋದಳು. ಇತ್ತ ಬ್ರಹ್ಮನು ಗಂಡುಜಿಂಕೆಯಾಗಿ ಅಟ್ಟಿಸಿಕೊಂಡುಬರಲು ಅವಳು ಶಿವನಿಗೆ ಮೊರೆಯಿಟ್ಟಳು. ಅವಳ ಮೊರೆಯನ್ನು ಕೇಳಿದ ಶಿವನು ಕಿರಾತವೇಷದಿಂದ ಬಂದು ಬಾಣಪ್ರಯೋಗಮಾಡಲು ಗಂಡುಜಿಂಕೆ ಸತ್ತುಬಿದ್ದು ಶಿವನನ್ನು ಸ್ಮರಿಸಲು ಶಿವನು ಪ್ರತ್ಯಕ್ಷನಾಗಿ ''ವರವೇನು ಕೇಳು ಬ್ರಹ್ಮ'' ಎನಲು ''ವಾಣಿಯನೆನಗೆ ವರಿಸಿ ಮಗಳೆಂಬುದುಂ ಬಿಡಿಸಿ ಮದುವೆಯ ಮಾಳ್ಪುದು'' ಎನ್ನಲು ಶಿವನು ಅವರಿಬ್ಬರಿಗೂ ಮದುವೆಮಾಡಿಸಿ ಕಳಿಸಿಕೊಟ್ಟನು.

ನವಬ್ರಹ್ಮರಲ್ಲಿ ಒಬ್ಬನಾದ ದಕ್ಷಬ್ರಹ್ಮನು ಮೂವತ್ತುಮೂರುಕೋಟಿ ಮಕ್ಕಳನ್ನು ದೇವತೆಗಳಿಗಿತ್ತು ಮದುವೆಮಾಡಿದನು. ಆಮೇಲೆ ಶಿವನನ್ನು ಕುರಿತು ತಪಸ್ಸನ್ನುಮಾಡಿ ಮೆಚ್ಚಿಸಿ ಭವಾನಿಯನ್ನು ಮಗಳನ್ನಾಗಿ ಪಡೆದು ಆಕೆಯನ್ನು ಶಿವನಿಗೇ ಕೊಟ್ಟು ಮದುವೆಮಾಡಿದನು. ಹೀಗಿರುವಲ್ಲಿ ಒಂದುದಿನ ಅಳಿಯಂದಿರನ್ನು ನೋಡಿಕೊಂಡು ಅವರಿಂದ ಸತ್ಕಾರವನ್ನು ಪಡೆದುಬರಬೇಕೆಂದು ದಕ್ಷಬ್ರಹ್ಮನು ಪುಷ್ಪಕವನ್ನೇರಿ ಹೊರಟನು. ದೇವಲೋಕಕ್ಕೆ ಹೋಗಿ ಹಲವಾರು ಅಳಿಯಂದಿರನ್ನು ನೋಡಲು ಅವರೆಲ್ಲ ಸಕಲೋಪಚಾರಗಳನ್ನು ಮಾಡಿ ಸತ್ಕರಿಸಿ ಕಳಿಸಿಕೊಟ್ಟರು. ಇನ್ನು ಕೈಲಾಸಕ್ಕೆ ಹೋದರೆ ತನ್ನ ಅಳಿಯನಾದ ಪರಶಿವನು ಹೇಗೆ ಗೌರವಿಸುವನೋ ಎಂದು ಯೋಚಿಸುತ್ತ ಹೊರಟನು.

ಕೈಲಾಸದಲ್ಲಿ ಪರಶಿವನು ಪಾರ್ವತೀಸಮೇತನಾಗಿ ರುದ್ರಗಣ ಪ್ರಮಥಗಣ ನಿವಹದಿಂದಲೂ ಹರಿಯಜೇಂದ್ರಾದಿ ದಿಕ್ಪಾಲಕರಿಂದಲೂ ಸೇವೆಯನ್ನು ಕೈಕೊಳ್ಳುತ್ತಿದ್ದನು. ಇಂತಹ ಓಲಗವನ್ನು ಪ್ರವೇಶಿಸಿದ ದಕ್ಷಬ್ರಹ್ಮನು ಅಹಂಕಾರದಿಂದಲೂ ಅಜ್ಞಾನದಿಂದಲೂ ಪರಶಿವನಿಗೆ ವಂದಿಸದೆ ಈತನು ಇತರ ಅಳಿಯರಂತೆ ನನ್ನ ಒಬ್ಬ

ಅಳಿಯನಲ್ಲವೆ? ಎಂದು ಗರ್ವದಿಂದಿದ್ದನು. ಓಲಗದಲ್ಲಿದ್ದವರು ಯಾರೂ ದಕ್ಷಬ್ರಹ್ಮ ನನ್ನು ಲಕ್ಷಿಸದಿರಲು ಶಿವನು ದಕ್ಷಬ್ರಹ್ಮನ ಅವಿನಯವನ್ನು ಅರಿತು ಸುಮ್ಮನಿದ್ದು ಬಿಟ್ಟನು. ಆಗ ದಕ್ಷಬ್ರಹ್ಮ ತನ್ನ ಮಗಳಾದರೂ ಉಪಚರಿಸುವುದಿಲ್ಲವೆ ಎಂದು ಕೊಂಡಿರಲು ಪಾರ್ವತಿ ತನ್ನ ಪತಿಯನ್ನು ಅಲಕ್ಷಿಸಿದ ತಂದೆಯನ್ನು ಕಂಡು ಉದಾಸೀನ ಭಾವದಿಂದ ಸುಮ್ಮನಿದ್ದುಬಿಟ್ಟಳು. ಅದನ್ನು ಕಂಡು ''ತನ್ನ ಮನದಲಿ ದಕ್ಷ ದುಮ್ಮಾನ ಗೊಳಂತ ಮಿಗೆಯನ್ನಪಾನಾದಿ ಭೋಗಗಳ ಕೊಳ್ಳದೆ ಮಗಳ ಮನ್ನಿಸುತ್ತಿತ್ತುದಕೆ ಫಲವಲಾ ಸಭೆಯೊಳಗೆ ತನ್ನ ಮುಸುಂಡಂ ತೆಗೆದುಂದಂ ಇನ್ನಿರಲ್ ಸಲ್ಲದೀ ಠಾವಿನೊಳಗೆ'' ಎಂದೆನುತ ತನ್ನ ಪಟ್ಟಣಕ್ಕೆ ಬಂದುಬಿಟ್ಟನು.

ಅವಮಾನಿತನಾದ ದಕ್ಷಬ್ರಹ್ಮ ಮಂತ್ರಿಗಳನ್ನು ಕರೆಸಿ ನಡೆದ ಸಂಗತಿಯನ್ನು ತಿಳಿಸಿ ತನಗಾದ ಅವಮಾನಕ್ಕೆ ಪ್ರತೀಕಾರವಾಗಿ ರುದ್ರಾಪಚಯಸಿದ್ಧಿ ಘಟಿಸುವ ಯಾಗವನ್ನು ಮಾಡುವ ಹೀನಕೃತ್ಯಕ್ಕೆ ತೊಡಗಿದನು. ಯಾಗಕ್ಕೆ ಮನು ಮುನಿ ಯಕ್ಷ ನಾಗ ಗಂಧರ್ವ ಕಿಂಪುರುಷ ಕಿನ್ನರ ಸಿದ್ಧ ಚಾರಣ ಗರುಡ ದಿಕ್ಪಾಲ ಹರಿಯಜರೇ ಮುಂತಾದವರಿಗೆ ಆಹ್ವಾನಪತ್ರಿಕೆಗಳನ್ನು ಕಳಿಸಿದನು. ಅವರೆಲ್ಲರೂ ಯಾಗಕ್ಕೆ ಬಂದು ಸೇರಿದರು. ಆದರೆ ಪರಶಿವನು ಬಾರದುದರಿಂದ ಕಳವಳಕ್ಕೀಡಾದರು. ಹರರಹಿತ ಯಾಗವನ್ನು ಮಾಡುತ್ತಿರುವಾಗ ನಾರದನು ಅಲ್ಲಿಂದ ಎದ್ದು ''ಶಿರಮಿರಲು ಪೊಳಕಾಲಿ ಗರಸುಪಟ್ಟಂ ರಚಿಸುವಂತೆ ಶಿರಮಿಲ್ಲದ ಕಬಂಧಕುರೆ ಸೇಸೆಯಿಡುವ ತೆರನಾಯ್ತು'' ಎಂದು ಕೈಲಾಸಕ್ಕೆ ಹೊರಟನು. ಪಾರ್ವತಿಯನ್ನು ಕಂಡು ಈ ವಾರ್ತೆಯನ್ನು ಹೇಳಿದನು. ಅದನ್ನು ಕೇಳಿದ ಪಾರ್ವತಿ ''ಪೊಂದಿತೇಯಜ್ಞಾನ ಶಿವನನಶಿಗಳೆದು ಯಜ್ಞವ ಮಾಳ್ಪರೇ'' ಎಂದು ನಂದನನ ಸಮೇತ ಬಂದು ತಂದೆಯಿಹ ಯಜ್ಞಶಾಲೆಯಂ ಪೊಕ್ಕಳು. ದಕ್ಷನು ಅವಳನ್ನು ಕಂಡೂ ಕಾಣದಂತೆ ಉಪೇಕ್ಷೆಮಾಡಿದನು. ಆಗ ಪಾರ್ವತಿ ದಕ್ಷಬ್ರಹ್ಮನನ್ನು ಕುರಿತು ''ಯಾಕೆ ದುರ್ಬುದ್ಧಿಯಿಂತಿದು ನಿನಗೆ ಹಾನಿಯಲ್ತೆ ನಾಲ್ಮೊಗಂ ಕಾರೊಡಲನಮರರೆರೆಯಂ ಪಾಸಿಯೇಳ್ವಾಲಿಗೆಯನಂತಕಂ ಕಂಪ ನಾನುಮಂ ಸಾಲ್ಗೊಂಡು ನಿಂದು ಕೀರ್ತಿಸುತಿಹರ್ದು ನೀನರಿಯದೇ ಕೆಟ್ಟೈ ದಕ್ಷನೆ'' ಎಂದು ಪ್ರಶ್ನಿಸಿದಳು. ಅದಕ್ಕೆ ದಕ್ಷ ''ನೀನು ಇಲ್ಲಿಗೇಕೆಬಂದೆ? ನೀನು ನಿನ್ನ ಪತಿ ಇಬ್ಬರೇ ನನಗೆ ಹೊರತು'' ಎಂದು ಮತ್ತೆ ಪರಶಿವನನ್ನು ಕುಲಹೀನ, ತೊವಲುಡಿಗ, ಕಠಿಣಚಿತ್ತ, ಎಲುಮಾಲೆಯನ್ನು ತಳೆದವ, ಪೆಣದ ಮೈಬೂದಿಗ, ತಲೆಯಸರವಂದಿಗ, ಕಿಚ್ಚುಗಣ್ಣಿನವ, ತಲೆಯೋಡತಿರುಕ ನಿನ್ನಯ ಗಂಡನು ಎಲೆ ಮಗಳೆ ಎಂದು ದೂಷಿಸಿದನು. ನಿನ್ನನ್ನು ಅವನಿಗೆ ಕೊಟ್ಟು ಮದುವೆಮಾಡಬಾರದಾಗಿತ್ತು ಅದನ್ನು ಮಾಡಿ ನಾನು ಮೋಸಹೋದೆ ಎಂದನು. ಪತಿನಿಂದೆಯನ್ನು ಕೇಳಿದ ಪಾರ್ವತಿಗೆ ತಂದೆಯನ್ನು ಹನನಮಾಡುವಷ್ಟು ಕೋಪವುಂಟಾಯಿತು. ಆದರೆ ತಂದೆಯನ್ನು ಕೊಂದವಳೆಂಬ ಅಪಕೀರ್ತಿ ಬರುವುದೆಂದು ಭಾವಿಸಿ ಶಾಪವನ್ನು ಕೊಟ್ಟಳು. ''ಸದಾಶಿವನನ್ನು ನಿಂದಿಸಿದ

ನಿನಗೂ ಅಹಂಕಾರದಿಂದಲೂ ಅಜ್ಞಾನದಿಂದಲೂ ಈ ಯಜ್ಞಕ್ಕೆ ಬಂದಿರುವ ಮನಂ ಮುನಿಗಳಿಗೂ ದಂಡನೆಯಾಗಲಿ, ಯಜ್ಞ ಕೆಟ್ಟುಹೋಗಲಿ, ಪರಶಿವನಿಗೆ ನಮಸ್ಕರಿಸದ ದಕ್ಷನ ಶಿರಸ್ಸು ಬಿದ್ದುಹೋಗಲಿ. ಈ ಪಟ್ಟಣ ಹಾಳಾಗಿಹೋಗಲಿ'' ಎಂದು ಪಾರ್ವತಿ ಶಾಪವನ್ನು ಕೊಟ್ಟು ಯಜ್ಞಕುಂಡವನ್ನು ಪ್ರವೇಶಿಸಿಬಿಟ್ಟಳು. ಅದನ್ನು ನೋಡಿದ ಮನು ಮುನಿ ಸುರಾಳಿಗಳು ತಲ್ಲಣಂಗೊಂಡು ಅಲ್ಲಿಂದ ಓಡುವುದಕ್ಕೆ ಮೊದಲು ಮಾಡಿದರು. ನಂದಿ ಈ ಸಂಗತಿಯನ್ನು ಶಿವನಿಗೆ ಹೇಳಲು ಶಿವನ ಕೋಪಜ್ವಾಲೆ ಸಮಸ್ತಲೋಕವನ್ನು ತಲ್ಲಣಗೊಳಿಸಿತು. ಶಿವನ ಕೋಪಾಗ್ನಿಯಿಂದ ಭಯಂಕರ ರೂಪನಾದ ವೀರಭದ್ರ ಪ್ರತ್ಯಕ್ಷನಾಗಿ ಮುಂದೇನುಮಾಡಬೇಕೆಂದು ಶಿವನನ್ನು ಕೇಳಿ ಕೊಂಡನಂ. ''ಅಜಾಚ್ಯುತಸುರರ ಕಾಕುತನದಿಂ ಕೂಡುತೆಮ್ಮನುಳಿದಾ ದಕ್ಷ ಲೋಕವೇದ ವಿರುದ್ಧಯಜ್ಞಮಂ ಮಾಡುತಿಹನವನ ಸಂಹರಿಸಿ ಬಾರೈ'' ಎಂದು ಹೇಳಿಕಳಿಸಿದನು. ಅಗಜೆ ''ಹರನಾಗಮವನರಿಯದಾ ಕುರಿ ದಕ್ಷನಂ ಕೊಂದು ನಾಗಾರಿಗಮನಮುಖ ಶಿವನಿಂದಕರ ಚಲ್ಲಬಡಿ'' ಎಂದು ಬೀಳ್ಕೊಟ್ಟಳು. ವೀರಭದ್ರ ತನ್ನ ಸಮಸ್ತಬಲ ದೊಡನೆ ದಕ್ಷಬ್ರಹ್ಮನ ಯಾಗಶಾಲೆಯ ಬಳಿಗೆ ಬಂದನು. ಒಬ್ಬ ಗಣವರನನ್ನು ದಕ್ಷಬ್ರಹ್ಮನ ಬಳಿಗೆ ಕಳಿಸಿ ತಮ್ಮ ಯಾಗಭಾಗೆಯನ್ನು ಕೊಡಬೇಕೆಂದೂ ಇಲ್ಲದಿದ್ದರೆ ಯಜ್ಞ ಕೆಟ್ಟುಹೋಗುವುದೆಂದೂ ಹರಿಯಜೇಂದ್ರಾದ್ಯಮರರಂ ಕೊಲೆಗೀಡಾಗುವ ರೆಂದೂ ತಿಳಿಸುವಂತೆ ಹೇಳಿದನು. ಅದರಂತೆ ಗಣನಾಥನು ಯಾಗಶಾಲೆಯನ್ನು ಪ್ರವೇಶಿಸಿ ''ಅಧಮ ದಕ್ಷನೆ ನೆಮ್ಮಿ ಮಜೊಡೆಯಂ ಬೆಟ್ಟಮಂ ಮೊದೆಯಬಹುದೇ ನೀನು ಘನಗರ್ವದಿಂ ಹರನ ಸದರಮಂ ಮಾಡಿಯಿೊ ಕೀಳ್ದೈವಗಳನಗ್ರಪೂಜಾರ್ಹರೆಂದು ಬಗೆದು ಮಧುಸೂದನಾದ್ಯರಂ ಯಂಜಿಸಿ ಜನ್ನವನು ನೀನೊದಗಿಸಲ್ಬಹುದೆ ಬಿಡು ನೀನವರ ರುದ್ರನೇ ಪುದಿದಗ್ನಿಯಗ್ನಿವಿೂಳೇ ಪುರೋಹಿತಮೆಂಬ ವೇದಮಂ ಮರೆವರೆ'' ಎಂದಂ ಮುಂತಾಗಿ ವಾದಿಸಿ ತಿಳಿಯಹೇಳಿದನು. ಅದನ್ನು ಕೇಳಿದ ದಕ್ಷಬ್ರಹ್ಮ ಅತ್ಯಂತ ಕೋಪದಿಂದ ''ಈಯೆಡೆಗೆ ಬಿಟ್ಟವರಾರು ಬಡಿನೂಂಕಿ ನೀನಾರು ಮೃಡನೆತ್ತನವ ಭಾಗೆಯುಲ್ಲಿಯದು ವೀರನೆಂಬವನಾರು ಪೋಪೋ'' ಎಂದಂ ಗದರಿಸಲು ಗಣನಾಥನು ಬಂದು ಈ ವಾರ್ತೆಯನ್ನು ವೀರಭದ್ರನಿಗೆ ತಿಳಿಸಿದನು, ವೀರಭದ್ರನು ಚತುರಂಗ ಸೈನ್ಯಸಮೇತ ಯಾಗಶಾಲೆಯ ಬಳಿಗೆ ಬರಲು ಅಲ್ಲಿದ್ದ ಮನುಮುನಿಗಳೇ ಮೊದಲಾದವರು ಪ್ರಾಣಭೀತಿಯಿಂದ ದಿಕ್ಕಾಪಾಲಾಗಿ ಓಡಲಾರಂಭಿಸಿದರು. ವೀರೇಶ ಖಡ್ಗವನ್ನು ಜಳಪಿಸುತ್ತ ಗಣರಿಗೆ ಅಮರರ ತಲೆಗಳನ್ನು ಹೊಡೆಯಿರಿ ಬಡಿಯಿರಿ ಹೆಡಗುಡಿಯ ಕಟ್ಟಿ ಎಂದು ಆಜ್ಞೆಮಾಡಿದನು. ಭೂತಚಯ ಯಜ್ಞವೇದಿಕೆಯನ್ನೆಲ್ಲ ಧ್ವಂಸಮಾಡಿ ಹಾಲುಮೊಸರನ್ನು ಹೀರುತ್ತ ಪರಿಪರಿಯ ಭಕ್ಷ್ಯಗಳನ್ನು ಜಗಿಯುತ್ತ ಕುಣಿದಾಡಿದುವು. ವೀರೇಶನು ವೇದಸಂತತಿಯಂ ಚಲ್ಲಬಡಿವುತೆ ಸುರರ ಸಂಹರಿಸು ತ್ತಿರಲು ಸುರಸಂತಾನ ಸುರಪನಿಗೆ ಮೊರೆಯಿಡಲು ಸುರಪನಂ ಬಾಣಾರಿಗರುಂಪಿ ವೀರಭದ್ರ ನನ್ನು ಎದುರಿಸಿ ಯುದ್ಧಕ್ಕೆ ಸಿದ್ಧರಾದರು. ವೀರಭದ್ರ ಮತ್ತು ಅವನ ರಾಣಿ

ಭದ್ರಕಾಳಿ ಸುರರ ಸೈನ್ಯವನ್ನೆಲ್ಲ ಧ್ವಂಸಮಾಡಿದರು. ವಿಘ್ನೇಶ ಭೈರವ ಮುಖ್ಯರು ದಕ್ಷನ ಶಿರವನ್ನು ಹೊಡೆಯಲು ಅವನನ್ನು ಅರಸುತ್ತಾ ಬಂದರು. ಅವನು ಎಲ್ಲೂ ಕಾಣಲಿಲ್ಲ. ಈ ಮಧ್ಯೆ ತನ್ನ ಹೆಂಡತಿಗಾದ ಅವಮಾನವನ್ನು ಕೇಳಿ ವಿಷ್ಣು ವೀರಭದ್ರನ ಮೇಲೆ ಯುದ್ಧಕ್ಕೆ ಬಂದನು. ವೀರಭದ್ರ ಹರಿಣನಾಗಿ ಓಡುತ್ತಿದ್ದ ವಿಷ್ಣುವಿನ ಶಿರವನ್ನು ಕತ್ತರಿಸಲು ಅವನು ಶಿವನನ್ನು ಸ್ತುತಿಸಲು ಶಿವನು ಮೆಚ್ಚಿ ಅವನಿಗೆ ವಿಷ್ಣುತ್ವ ವನ್ನು ಕೊಟ್ಟನು. ಆಮೇಲೆ ವೀರಭದ್ರ ದಕ್ಷನನ್ನು ಕಂಡು ದ್ರೋಹಿ ಕೆಡೆಕೆಡೆಯೆನು ತ್ತಿರದೆಡದ ಪಾದದಿಂದೊದೆದು ಕೆಡವುತ ವೆಂಟ್ಟಿ ತಲೆಯರಿದ. ದಕ್ಷನ ಯಾಗಶಾಲೆ ಯೆಲ್ಲ ಧ್ವಂಸವಾಗಿ ಅಲ್ಲಿಗೆ ಬಂದಿದ್ದವರೆಲ್ಲರಿಗೂ ಆಗುತ್ತಿದ್ದ ಹಿಂಸೆಯನ್ನು ಕಂಡು ಬ್ರಹ್ಮನು ವೀರೇಶನನ್ನು ಕುರಿತು ದಾಳಿಯನ್ನು ನಿಲ್ಲಿಸುವಂತೆ ಪ್ರಾರ್ಥಿಸಿಕೊಂಡನು. ವೀರೇಶ ಹಾಗೆಯೇ ಮಾಡಿದನು.

ವಿಷ್ಣು ಶಂಕರನಿಗೆ ನಮಸ್ಕರಿಸಿ ದಕ್ಷನನ್ನು ಕಾಯಬೇಕೆಂದು ಪ್ರಾರ್ಥಿಸಲು "ಪಾರ್ಬರು ತಿನುತಲುಂ ಕೂಡೆ ಪೊಲೆಯರಿಗೆ ಭಾಗೆಯೆಂದುಳಿದಜನ ತಲೆಯ ಪತ್ತಿಸಿ ದಕ್ಷನಂ ಕಂಕಾಳಧರನಿದಿರು ನಿಲಿಸಿದನು." ದಕ್ಷಬ್ರಹ್ಮನಂ ಶಂಕರನನ್ನು ಚಮಕದಿಂದ ನಂತಿಸಲು ಅವನನ್ನು ಮನ್ನಿಸಿ ಶಿವನು ಕೈಲಾಸಪರ್ವತಕ್ಕೆ ಹೋದನು.

## ಚತುರ್ಥಕಾಂಡ

ನರಸಿಂಹಭಂಜನ;

ಪೂರ್ವದಲ್ಲಿ ಖೂಳನಾದ ಹಿರಣ್ಯಕಶಿಪು ಶಿವನನ್ನು ಕುರಿತು ಉಗ್ರತಪಸನ್ನು ಮಾಡಿದನು. ಅವನ ತಪಸ್ಸಿಗೆ ಪ್ರಸನ್ನನಾದ ಶಂಕರನು ಬ್ರಹ್ಮನನ್ನು ಅವನ ಬಳಿಗೆ ಕಳಿಸಿದನು. ಬ್ರಹ್ಮನಂ ಹಿರಣ್ಯಕಶಿಪನಿಗೆ ಏನು ವರಬೇಕು ಕೇಳಿಕೋ ಎಂದನು. ಅದಕ್ಕೆ ಅವನು "ಸಕಲ ಸಾಮ್ರಾಜ್ಯಸುಖಮಂ ಓತೀವುತೆನಗೆ ನರಸುರನಾಗ ಗಂಧರ್ವ ಭೂತಸುರಗಣ ಹರಿಹರಬ್ರಹ್ಮರಿಂ ಶಸ್ತ್ರವ್ರಾತಖಗಮೃಗಗಳಿನಿರುಳ್ ಪಗಲು ಒಳಹೊರಗೆ ಸಾವಿಲ್ಲದಂತೆ ಸಲಹೈ" ಎಂದು ಕೇಳಿಕೊಂಡನು. ಅವನಿಗೆ ವರವನ್ನುಕೊಟ್ಟು ಬ್ರಹ್ಮ ಹೊರಟುಹೋದನು. ಇತ್ತ ರಾಕ್ಷಸನಾದ ಹಿರಣ್ಯಕಶಿಪು ಲೋಕವನ್ನು ಹಾಳುಮಾಡುತ್ತ ಸುರರನ್ನು ಹಿಂಸಿಸಿ ಅವರ ಸತಿಯರನ್ನು ಸೆರೆಹಿಡಿದು ಅವಮಾನಮಾಡಿದನು. ದೇವತೆಗಳೆಲ್ಲ ಶಿವನಿಗೆ ಮೊರೆಯಿಡಲು ಶಿವನು ವಿಷ್ಣುವಿಗೆ ಅವನನ್ನು ಸಂಹರಿಸುವಂತೆ ಅಪ್ಪಣೆಮಾಡಿದನು. ವಿಷ್ಣು ನರಸಿಂಹಾವತಾರವನ್ನು ತಾಳಿ ಕಂಭದಲ್ಲಿ ಹುಟ್ಟಿ ಹಿರಣ್ಯಕಶಿಪನ್ನು ಹಿಡಿದು ಉಗುರುಗಳಿಂದ ಅವನ ದೇಹವನ್ನು ಎರಡು ಭಾಗವಾಗಿ ಸೀಳಿ ಕರುಳಿನ ಸರವನ್ನು ಧರಿಸಿ ರಕ್ತಪಾನಮಾಡಿದನು. ಇದರಿಂದ ಸಮಸ್ತಲೋಕವೂ ಸಂತೋಷಗೊಂಡಿತು.

ಹಿರಣ್ಯಕಶಿಪುವಿನ ನೆಣನೆತ್ತರಿಂದ ಮದಿಸಿದ ಅಚ್ಯುತ ಎಲ್ಲರನ್ನೂ ಹಿಂಸಿಸಲು ಪ್ರಾರಂಭಿಸಿದ. ಅವನ ಉಪಟಳವನ್ನು ತಾಳಲಾರದೆ ಸುರರು ಶಿವನಿಗೆ ಮೊರೆಯಿಟ್ಟರು. ಶಿವನು ವೀರೇಶನನ್ನು ಕರೆಸಿ ವಿಷ್ಣುವಿನ ಕಾಟವನ್ನು ವಿವರಿಸಿ ಅವನಿಗೆ ಸಂಗುಣವನ್ನು

ಬೋಧಿಸಿ ದಾರಿಗೆ ತೆಗೆದುಕೊಂಡು ಬಾ ಅದು ಸಾಧ್ಯವಿಲ್ಲದಿದ್ದರೆ ಅವನ ತಲೆಯನ್ನು ಕತ್ತರಿಸಿ ತಾ ಎಂದು ಅಪ್ಪಣೆಮಾಡಿದನು. ಅದರಂತೆ ವೀರೇಶ ವಿಷ್ಣುವಿನ ಬಳಿಗೆ ಹೋಗಿ "ಎಲೈ ವಿಷ್ಣುವೆ ನೀನು ಸುರಸಟಕದಲ್ಲಿ ದಯಾಪರ, ಹಿರಣ್ಯಕಶಿಪುವಿನ ರಕ್ತಾಂಬುವನ್ನು ಪಾನಮಾಡಿ ಹೀಗೆ ಮೈಮರೆಯಬಹುದೆ? ಮತ್ಸ್ಯಾವತಾರವನ್ನು ತಾಳಿ ದೈತ್ಯನನ್ನು ಸಂಹರಿಸಿದವನು ನೀನು. ಕೂರ್ಮಾವತಾರವನ್ನು ತಾಳಿ ಲೋಕ ಹಿತವನ್ನು ಮಾಡಿದವನು; ಹಿರಣ್ಯಾಕ್ಷನನ್ನು ಕೊಂದು ವಿಶ್ವಂಭರೆಯನ್ನು ಸಲಹಿದವನು; ಬಲಿಯನ್ನು ಪಾತಾಳಕ್ಕೆ ತುಳಿದವನು; ಶಿವನ ಅರ್ಚನೆಗೆ ಕಣ್ಣನ್ನೇ ಕಿತ್ತು ಸಮರ್ಪಿಸಿದವನು; ಇಂತಹ ಮಹತ್ಕಾರ್ಯಗಳನ್ನು ಮಾಡಿರುವ ನೀನು ಈರೀತಿ ವರ್ತಿಸಬಹುದೆ. ನೀನು ಶಾಂತನಾಗಿ ಎಲ್ಲರನ್ನೂ ಸಲಹು" ಎಂದು ಬುದ್ಧಿಯನ್ನು ಹೇಳಿದನು.

ಅದನ್ನು ಕೇಳಿದ ವಿಷ್ಣು ಕೋಪಗೊಂಡು ನನಗೂ ಯಜಮಾನರುಂಟೆ? ಇಡೀ ವಿಶ್ವವನ್ನು ಬೇಕಾದರೆ ನುಂಗಿಹಾಕುತ್ತೇನೆ. ಇಲ್ಲದಿದ್ದರೆ ಬಿಟ್ಟುಬಿಡುತ್ತೇನೆ. ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ನಾನೇ ಕಾರಣ. ನನ್ನ ನಾಭಿಯಿಂದ ಬ್ರಹ್ಮ ಹುಟ್ಟಿದ. ಅವನ ಹಣೆಯಿಂದ ರುದ್ರ ಜನಿಸಿದ. ಗುಣತ್ರಯಗಳ ಉತ್ಪತ್ತಿಯೇ ನನ್ನಿಂದ ಎಂದನು. ದುರುಳನಾದ ವಿಷ್ಣುವಿನ ದುರಾಲಾಪವನ್ನು ಕೇಳಿ ಕೋಪಗೊಂಡ ವೀರೇಶ "ಧೂರ್ತನಾದ ಎಲೈ ನರಹರಿಯೆ ನಾನು ನಿನ್ನನ್ನು ಜೀವಸಹಿತ ಉಳಿಸಿ ಮಾತನಾಡಿಸಿದರೆ ನೀನು ಬಾಯಿಗೆ ಬಂದಂತೆ ಗಳಹುವೆಯಾ ನಿನ್ನನ್ನು ಈ ಕ್ಷಣದಲ್ಲಿ ಕೊಂದುಬಿಡುತ್ತೇನೆ. ದಕ್ಷಾಧ್ವರದಲ್ಲಿ ಹರಿಣರೂಪಿನಿಂದ ಓಡಿಹೋದುದನ್ನು ಮರೆತೆಯಾ ಜಡಜಂತುವೆ" ಎಂದು ಮುಂತಾಗಿ ಮೂದಲಿಸಿದನು. ಮತ್ತೆ ವಿಷ್ಣುವಿಗೆ "ನೀನು ಅಜ್ಞಾನವನ್ನು ಬಿಟ್ಟು ಮೃಡನೆಡೆಗೆ ನಡೆ. ಇಲ್ಲದಿದ್ದರೆ ನಿನ್ನ ಚರ್ಮವನ್ನು ಸುಲಿದು ಶಿರವನ್ನು ಕತ್ತರಿಸಿ ಹರನ ಹತ್ತಿರಕ್ಕೆ ಕೊಂಡೊಯ್ಯುತ್ತೇನೆ" ಎಂದನು. ನರಸಿಂಹನಿಗೆ ಸಿಟ್ಟು ಮಿತಿಮೀರಿ "ಮೃಡನಾರು ಸುಡುಗಾಡಬೂದಿಗಂ ನನಗಿದಿರೆ' ಎಂದು ಹೇಳಿ ವೀರಭದ್ರನನ್ನು ಹಿಡಿದುಕೊಳ್ಳಲು ಹೋದಾಗ ಅವರು ಮಾಯವಾಗಿ ಆಕಾಶದಲ್ಲಿ ಶರಭರೂಪನಾಗಿ ಗೋಚರಿಸಿದ. ಶರಭಮೂರ್ತಿಯ ರೌದ್ರಾಕಾರಕ್ಕೆ ಬ್ರಹ್ಮಾಂಡಕೋಟಿಗಳು ತಲ್ಲಣಿಸಿ ಹೋದುವು. ಆಕಾಶದಿಂದ ಕೋಟಿ ಸಿಡಿಲಾರ್ಭಟೆಗೈಯುತ್ತ ನರಹರಿಯ ತಲೆಯನ್ನು ಕಚ್ಚುತ್ತ ಎತ್ತಿ ತಿರುಹಿಕೊಡಹಿ ಕೊಕ್ಕಿನಿಂದ ಕುಕ್ಕಿ ಕುಂಬಾರನ ತಿಗುರಿಯಂತೆ ತಿರುಗಿಸಿ ಬಿಟ್ಟನು. ಆಮೇಲೆ ಅವನ ಚರ್ಮವನ್ನು ಸುಲಿದು ಶಿರವನ್ನು ಕತ್ತಿಯಿಂದ ಕತ್ತರಿಸಲು ನರಸಿಂಹನ ಅಹಂಕಾರವೆಲ್ಲ ಅಳಿದುಹೋಗಿ ವೀರಭದ್ರನನ್ನು ಪರಿಪರಿಯಾಗಿ ಹೊಗಳಿ ಸ್ತುತಿಸಿದನು. ಆಗ ವೀರಭದ್ರನು ಅವನ ಚರ್ಮವನ್ನು ಹೊದೆದು ಅವನ ತಲೆಯನ್ನು ರುಂಡಮಾಲೆಯಲ್ಲಿ ಸೇರಿಸಿಕೊಂಡನು.

**ಅರ್ಧನಾರೀಶ್ವರಲೀಲೆ**

ಕ್ಷೀರಸಮುದ್ರದಲ್ಲಿ ಹರಿಯು ಮಲಗಿದ್ದುದನ್ನು ಬ್ರಹ್ಮನು ಕಂಡು "ಎಲೇ

ಹುಲುಮನುಜನೇ ನಾನು ಲೋಕೇಶ. ನನ್ನ ಮುಂದೆ ಕಾಲ ಚಾಚಿ ಮಲಗಿರುವೆಯಾ" ಎಂದು ಆರೋಪಿಸಲು ವಿಷ್ಣುವು "ನೀನು ನನ್ನ ಮಗ. ನಿನಗೆ ನಾನು ನಮಸ್ಕರಿಸ ಬಹುದೆ" ಎಂದನು. ಅವರಿಬ್ಬರಲ್ಲಿ ಮಾತಿಗೆ ಮಾತು ಬೆಳೆದು ಇಬ್ಬರೂ ಯುದ್ಧಕ್ಕೆ ಸಿದ್ಧವಾದರು. ತಮ್ಮ ತಮ್ಮ ಬಲಸಮೇತ ಇಬ್ಬರೂ ಬಹಳಕಾಲ ಯುದ್ಧ ಮಾಡಿದರು. ಯಾರೂ ಸೋಲದಿರಲು ಕೊನೆಗೆ ಶಿವನಿಂದ ಪಡೆದುಕೊಂಡಿದ್ದ ಪಾಶು ಪತಾಸ್ತ್ರವನ್ನು ಪ್ರಯೋಗಿಸಿದರು. ಈ ದಿವ್ಯಾಸ್ತ್ರದಿಂದ ಸಮಸ್ತಲೋಕವೇ ಸುಟ್ಟು ಭಸ್ಮವಾಗುವಂತಾಯಿತು. ನಮ್ಮ ಜಯಕ್ಕಾಗಿ ಪ್ರಯೋಗಿಸಿದ ಈ ಅಸ್ತ್ರ ಸರ್ವ ಪ್ರಳಯಕ್ಕೆ ಕಾರಣವಾಯಿತಲ್ಲ ಎಂದು ಚಿಂತಿಸಿ ಇಬ್ಬರೂ ಹರನನ್ನು ನುತಿಸಿದರು. ಆಗ ಶಂಕರ ಪ್ರಸನ್ನನಾಗಲು ಎರಡು ಪಕ್ಷದ ಶರಗಳೂ ತಣ್ಣಗಾದುವು. ಪರಶಿವ ಪಾರ್ವತಿಯೊಡನೆ ಪ್ರತ್ಯಕ್ಷನಾಗಿ ಅರ್ಧನಾರೀಶ್ವರತ್ವವನ್ನು ತಳೆದು ಬ್ರಹ್ಮ ವಿಷ್ಣು ಮೊದಲಾದ ದೇವತೆಗಳನ್ನು ಸಂತೈಸಿದನು.

ಪಾಂಡವರು ವನವಾಸ ಮಾಡುವ ಕಾಲದಲ್ಲಿ ಅರ್ಜುನ ಇಂದ್ರಕೀಲಪ್ರಾಂತದಲ್ಲಿ ಉಗ್ರತಪವನ್ನಾಚರಿಸಲು ಅಲ್ಲಿಯ ಮುನಿಗಳೆಲ್ಲರೂ ಹರನಿಗೆ ಬಿನ್ನೈಸಿದರು. ಎಲ್ಲ ವನ್ನೂ ಅರಿತ ಶಿವ ಪಾರ್ವತಿ ಗುಹ ಗಣಪ ವೀರಗಣಸಮೇತನಾಗಿ ಶಬರವೇಷವನ್ನು ತಾಳಿದನು. ಪಾರ್ವತಿ ಬೇಡಿತಿ ವೇಷವನ್ನು ತಳೆದಳು. ಕಂತುಮರ್ದನ ಪುಳಿಂದನಾಗಲು ಲಕ್ಷ್ಮಿ ಸರಸ್ವತಿ ಶಚಿಯರು ಪುಳಿಂದಿಯರಾದರು. ಈ ಪಡೆಯೆಲ್ಲ ಬಿಲ್ಲು ಬಾಣಗಳನ್ನೂ ಬಲೆಗಳನ್ನೂ ಹಿಡಿದುಕೊಂಡು ಬೇಟೆಗೆ ಹೊರಟಿತು. ಅಮರಗಣ ಪ್ರಮಥಗಣ ರುದ್ರಗಣ ಹರಿ ಅಜ ಸುರಪರು ಶಾಬರವೇಷ ತಳೆದು ಕಿರಾತವೇಷದ ಹರನೊಡನೆ ಬೇಟೆಗೆ ಪ್ರಾರಂಭಿಸಿದರು. ಹೀಗೆ ಆ ಸೈನ್ಯ ಬರುತ್ತಿರಲು ಇಂದ್ರಕೀಲಪರ್ವತದ ಒಂದು ಪ್ರದೇಶದಲ್ಲಿ ಮುನಿಜನದ ಮಧ್ಯದಲ್ಲಿ ಪಾರ್ಥನು ಶಿವನನ್ನು ಕುರಿತು ಉಗ್ರತಪ ವನ್ನು ಮಾಡುತ್ತಿದ್ದನು.

ಹರನು ತನ್ನ ಲೀಲೆಯಿಂದ ಮೂಕಾಸುರನನ್ನು ನೆನೆಯಲು ಅವನು ಸೈರಿಭದಂತೆ ದೊಡ್ಡಹಂದಿಯ ರೂಪವನ್ನು ತಳೆದು ಅಲ್ಲಿ ಸುಳಿದಾಡಿದನು. ಹಂದಿಯನ್ನು ನೋಡು ತ್ತಲೆ ಶಬರರು ಕಡಿ ಬಡಿ ಎಂದು ಕೂಗಾಡುತ್ತ ನಾಯಿಂಗಳನ್ನು ಛೂಬಿಟ್ಟರು. ಹಂದಿ ಭೀಕರ ರೂಪವನ್ನು ತಳೆದು ಶಬರಪಡೆಯ ಮೇಲೆ ನುಗ್ಗಿ ಕೋರೆಹಲ್ಲುಗಳಿಂದ ಎಲ್ಲರನ್ನೂ ತಿವಿದುಕೊಂಡು ಬರುತ್ತಿತ್ತು. ಆಗ ಶಬರೇಶ್ವರನು ಹರಿತವಾದ ಬಾಣ ಗಳನ್ನು ಹಂದಿಯ ಮೇಲೆ ಬಿಡಲು ಅವು ಹಣೆಗೆ ತಾಗಿ ರಕ್ತಸುರಿಯಿತು. ಪೆಟ್ಟನ್ನು ತಿಂದ ಹಂದಿ ಭಯಂಕರವಾಗಿ ಅಲ್ಲಿದ್ದವರ ಮೇಲೆ ನುಗ್ಗಲು ತಪಸ್ಸು ಮಾಡುತ್ತಿದ್ದ ಅರ್ಜುನ ಅದನ್ನು ಕಂಡು ಬಾಣವನ್ನು ಆಕರ್ಣಾಂತವಾಗಿ ಎಳೆದು ಬಿಡಲು ಅದು ಹಂದಿಯ ಎದೆಗೆ ನಾಟಿ ಸತ್ತು ಬಿದ್ದಿತು. ಹಂದಿ ಸತ್ತುದನ್ನು ಶಿವಗಣಕಿರಾತರು

ನೋಡಿ ಕೊಂಡಾಡುತ್ತಿರಲು ಹರನು ಅಲ್ಲಿಗೆ ಬಂದು ''ಈ ಬೇಟೆ ನಮ್ಮದು, ಬಾಣಬಿಟ್ಟ ವರಾರು ಇದನ್ನು ತೆಗೆದುಕೊಂಡು ಹೋಗಿ'' ಎಂದು ಭಟರಿಗೆ ಹೇಳಿದನು. ಆ ಮಾತನ್ನು ಕೇಳಿಸಿಕೊಂಡ ಅರ್ಜುನ ಅಲ್ಲಿಗೆ ಬಂದು ''ಈ ಹಂದಿ ನನ್ನ ಬಾಣದಿಂದ ಸತ್ತಿದೆ. ಯಾರು ಇದನ್ನು ಮುಟ್ಟುವವರು'' ಎಂದು ಮೂದಲಿಸಿದನು. ಆ ಮಾತನ್ನು ಕೇಳಿದ ಹರ ಅರ್ಜುನನ ಮೇಲೆ ಬಾಣವನ್ನು ಬಿಡಲು ಅರ್ಜುನನೂ ಪ್ರತಿಯಾಗಿ ಬಾಣವನ್ನು ಪ್ರಯೋಗಿಸಿದನು, ಅವರಿಬ್ಬರೂ ಸಾಕಷ್ಟು ಸೆಣಸಾಡಿದ ಮೇಲೆ ಮಲ್ಲ ಯುದ್ಧಕ್ಕೆ ಸಿದ್ಧವಾದರು. ಹರನ ಪೆಟ್ಟಿನಿಂದ ಅರ್ಜುನ ಮೂರ್ಛೆಹೋದನು. ಮತ್ತೆ ಚೇತರಿಸಿಕೊಂಡು ''ನಿಟಿಲಾಕ್ಷನೊಲ್ಮೆಯಿಂದಲ್ಲದೀ ಭಿಲ್ಲನಂ ಗೆಲಬಾರದು'' ಎಂದು ಸೈಕತಲಿಂಗವನ್ನು ಮಾಡಿ ಭಕ್ತಿಯಿಂದ ಪೂಜಿಸಿ ಮತ್ತೆ ಬಂದು ಮಲ್ಲಯುದ್ಧಕ್ಕೆ ತೊಡಗಿ ದನು. ತಾನು ಪೂಜಿಸಿದ ಪುಷ್ಪಗಳೆಲ್ಲ ಶಬರನ ಮಂಡೆಯಲ್ಲಿ ಕಾಣಲು ಈತನು ನರನಲ್ಲ ಹರನೆಂದು ತಿಳಿದು ಹರನ ಪಾದಗಳ ಮೇಲೆ ಬಿದ್ದು ಕಾಪಾಡಬೇಕೆಂದು ಪ್ರಾರ್ಥಿಸಿ ಕೊಂಡನು. ಅವನ ಭಕ್ತಿಗೆ ಪ್ರಸನ್ನನಾದ ಶಿವನು ವರವನ್ನು ಕೇಳಿಕೋ ಎನ್ನುವನು. ಅರ್ಜುನ ಪಾಶುಪತಾಸ್ತ್ರವನ್ನು ಕೇಳಿಕೊಳ್ಳಲು ಹರನು ಅದನ್ನು ಕೊಟ್ಟನು. ಹರಸುರ ಜ್ಯೇಷ್ಠರೂ ಪಾರ್ವತಿಯೂ ಒಂದೊಂದು ಶರವನ್ನು ಕೊಟ್ಟು ಎಲ್ಲ ರಾಜರನ್ನೂ ಜಯಿಸಿ ಸುಖದಿಂದಿರುವಂತೆ ಆಶೀರ್ವದಿಸಿ ಕಳಿಸಿಕೊಟ್ಟರು. ಹರನು ಪಾರ್ವತಿಯೊಡನೆ ಕೈಲಾಸಕ್ಕೆ ಬಂದು ಸುಖದಿಂದಿದ್ದನು.

## ಕಂಕಾಳಧರ ಲೀಲೆ

ಅಸುರೇಶನಾದ ಬಲಿಚಕ್ರವರ್ತಿಯು ದಾನಧರ್ಮಪರನಾಗಿ ಸಕಲ ಕ್ಷಿತಿಯನ್ನೂ ಆಳುತ್ತಿದ್ದನು. ಅವನು ಯಜ್ಞಯಾಗಾದಿಗಳನ್ನು ಕ್ರಮಬದ್ಧವಾದ ಸೋಮಯಾಜಿ ಗಳಿಂದ ಮಾಡಿಸುತ್ತ ಕೀರ್ತಿವಂತನಾಗಿದ್ದನು. ಈ ವಾರ್ತೆಯನ್ನು ಅರಿತ ವಿಷ್ಣು ಸಕಲ ದೇವರ ಪದವಿಗಳು ಅವನ ಹಸ್ತಗತವಾಗುವವೆಂದು ತಿಳಿದು ಅದರಿಂದ ತಮ್ಮ ಪದವಿಗಳೆಲ್ಲ ಹೋಗಿ ಬಡವರಾಗುವುದಾಗಿ ಭಾವಿಸಿ ಬಲಿಯನ್ನು ಕೆಡಿಸಲು ವಾಮನಾವ ತಾರದ ವೃದ್ಧನಾಗಿ ಅವನ ಬಳಿಗೆ ಹೋದನು. ಬಲಿಯ ಒಡ್ಡೋಲಗ ಐವತ್ತು ಯೋಜನವಿತ್ತು. ವಾಮನ ಕೊಡೆ ಕಮಂಡಲುಗಳನ್ನು ಹಿಡಿದುಕೊಂಡು ಒಡ್ಡೋಲಗ ವನ್ನು ಪ್ರವೇಶಿಸಿದನು. ದೂರದಿಂದಲೇ ಕೈಯನ್ನು ಮೇಲೆತ್ತಿ ಆಯುರಾರೋಗ್ಯಮಸ್ತು ಶುಭಮಸ್ತು ಎಂದು ಹರಸಿದನು. ಬಲಿ ಆ ವಿಪ್ರನನ್ನು ಕರೆಸಿ ''ನೀನು ಬಯಸಿದುದು ಚೆನ್ನಾಗಿ ಪೇಳು ಕೊಟ್ಟಪೆ'' ಎಂದನು. ಈ ಮಾತು ಸತ್ಯವೇ ಎಂದು ವಿಪ್ರ ಕೇಳಲು ಬಲಿ ಆಣೆ ಭಾಷೆಕೊಟ್ಟನು. ವಾಮನನ ಕಪಟವನ್ನರಿಯದ ಬಲಿ ಉಂಡಮನೆಗೆ ಕೇಡನ್ನು ಬಗೆಯುವನಂತೆ ವೃಂದಾವನವ ಬಿತ್ತಿ ಪ್ರದಕ್ಷಿಣೆ ಮಾಡಿಕೊಂಡಿರುವುದಕ್ಕಾಗಿ ಮೂರಡಿ ಭೂಮಿಯನ್ನು ಯಾಚಿಸಿದನು. ಬಲಿ ''ಧನಕನಕ ವಾಹನ ವಸ್ತು ರಾಜ್ಯ ಯಾವುದನ್ನಾದರೂ ಕೇಳು ಕೊಡುತ್ತೇನೆ'' ಎನ್ನಲು ''ಮೃತ್ಯು ಹತ್ತಿರೆ ಸಾರಿತಿನ್ನೇಕೆ

ಮೂರಡಿಗೆ ಧಾರೆಯೆರೆ'' ಎಂದನು. ಅದರಂತೆ ಬಲಿ ಧಾರೆಯೆರೆಯಲು ಕನಕಭೃಂಗಾರವನ್ನು ಮೇಲಕ್ಕೆತ್ತಲು ಭೃಗುಮಹರ್ಷಿಯು ಬಲಿಯು ಅನ್ಯಾಯವಾಗಿ ಹಾಳಾಗುವನಲ್ಲ ಎಂದು ಬಗೆದು ಆ ಗಿಂಡಿಯಲ್ಲಿ ಹೊಕ್ಕು ನೀರು ಬರದಂತೆ ಅಡ್ಡಗಟ್ಟಿದನು. ಇದನ್ನು ಅರಿತ ವಿಷ್ಣು ದರ್ಭೆಯಿಂದ ಗಿಂಡಿಯ ರಂಧ್ರವನ್ನು ತಿವಿಯಲು ಆ ಋಷಿಯ ಒಂದು ಕಣ್ಣು ಕುರುಡಾಯಿತು. ಆಮೇಲೆ ಧಾರೆ ಎರೆಯಲು ವಾಮನ ಮುಗಿಲೆತ್ತರಕ್ಕೆ ಬೆಳೆದು ಆಕಾಶಕ್ಕೆ ಒಂದು ಅಡಿ ಭೂಮಿಗೆ ಒಂದು ಅಡಿಯನ್ನಿರಿಸಿ ಇನ್ನೊಂದು ಅಡಿ ಭೂಮಿಯನ್ನು ಕೊಡು ರಾಯ ಎನ್ನಲು ಬಲಿ ಭೂಮಿಯ ಮೇಲೆ ಮಲಗಿಕೊಂಡು ಇನ್ನೊಂದು ಅಡಿಯನ್ನು ಅಳೆದುಕೋ ಎನ್ನಲು ಅವನ ಎದೆಯ ಮೇಲೆ ಕಾಲನ್ನಿಟ್ಟು ಭೂಮಿಯೊಳಕ್ಕೆ ತುಳಿದು ಹಾಕಿದನು. ಎಡದ ಕಾಲಿಂದ ಬಲೀಂದ್ರನನ್ನು ಮೆಟ್ಟಿ ಬಲಗಾಲನ್ನು ಆಕಾಶಕ್ಕೆ ಚಾಚಲು ಅದು ತಾರೆಗಳನ್ನು ಉದುರಿಸುತ್ತ ಗ್ರಹಗಣಗಳನ್ನು ಬಡಿಯುತ್ತ ಬ್ರಹ್ಮಲೋಕದವರೆಗೂ ಹೋಯಿತು. ಇಂದ್ರನೇ ಮೊದಲಾದವರು ಆಯುಧಗಳಿಂದ ಎಷ್ಟು ಬಡಿದರೂ ಕಡಿದರೂ ಅದಾವುದನ್ನೂ ಲೆಕ್ಕಿಸದೆ ಬ್ರಹ್ಮನು ತಪಸ್ಸು ಮಾಡುತ್ತಿದ್ದ ಸ್ಥಳದವರೆಗೂ ಬಂದಿತು ಬ್ರಹ್ಮ ಏಕೆ ತಪಸ್ಸುಮಾಡುತ್ತಿದ್ದನೆಂದರೆ ಪಾರ್ವತಿಯ ಮದುವೆಯ ಸಮಯದಲ್ಲಿ ತೆರೆಯ ಮರೆಯಲ್ಲಿದ್ದು ಕಾಲನ್ನು ನೀಡಲು ಹರಿಗೆ ಅದು ಸಿಕ್ಕದಿರಲು ಪಾಪಿಷ್ಠನಾದ ಬ್ರಹ್ಮ ಆ ಪಾದವನ್ನು ಕಂಡು ಭ್ರಮಿಸಲು ಅವನಿಗೆ ವೀರ್ಯಸ್ಖಲನವಾಯಿತು. ಅದರಿಂದ ಅಸಂಖ್ಯಾತ ಬ್ರಹ್ಮರು ಹುಟ್ಟಲು ಅವರನ್ನೆಲ್ಲ ಕಾಲಲ್ಲಿ ಹೊಸಕಿ ಕೊಂದು ಹಾಕಿದನು. ಅತಿಸೂಕ್ಷ್ಮರೇತಸ್ಸಿನಿಂದ ನವಕೋಟಿ ವಾಲಖಿಲ್ಯರು ಅಂಗುಷ್ಠ ಪ್ರಮಾಣದಿಂದ ಹುಟ್ಟಿಕೊಂಡರು. ಇದನ್ನರಿತ ಹರನು ಅಜನೆ ನೀನು ಅಮಂಗಳನಾಗಿರುವೆ. ಹೋಗು ಇದನ್ನು ಮುಟ್ಟಿ ಶುಚಿಮಾಡುತ್ತೇನೆ. ನಿನ್ನ ಕಮಂಡಲದೊಳಿರುವ ಉದಕವೇ ಶಸ್ತ್ರವಾಗಲಿ ಎಂದು ಹೇಳಿ ಕಳಿಸಿದನು. ಈ ಪಾಪಶಮನಾರ್ಥವಾಗಿ ತಪಸ್ಸು ಮಾಡುತ್ತಿರಲು ವಾಮನನ ಕಾಲು ಬ್ರಹ್ಮನ ತಿಕವನ್ನು ತಾಕಿ ಒದೆಯಲು ಬ್ರಹ್ಮನು ನೋಡಿ ಕೋಪಗೊಂಡು ಆ ಕಮಂಡಲ ನೀರಿನಿಂದ ಅಭಿಮಂತ್ರಿಸಲು ಕಾಲು ಕತ್ತರಿಸಿ ಕೆಳಕ್ಕೆ ಬಿತ್ತು. ಇದರಿಂದ ಲೋಕಗಳೆಲ್ಲ ಭಯದಿಂದ ತತ್ತರಿಸಿದುವು. ಆ ಕಾಲು ಬಾತು ಕೀವು ನೆತ್ತರಿನಿಂದ ಖಂಡದಿಂಡುಗಳಾಗಿ ಬೀಳಲು ಹಡಿಕೆಯಾಯ್ತು. ಇದನ್ನು ತಿಳಿಯದ ಅಧಮರು ಬ್ರಹ್ಮನು ಎರೆದ ನೀರ ಧಾರೆಯಿಂದ ಇಪ್ಪತ್ತೆಂಟು ಯೋಜನದುದ್ದ ಇಳಿಯಲು ವೈಷ್ಣವರು ಹರಿಯ ಕಾಲೊಳಗೆ ಗಂಗೆ ಹುಟ್ಟಿತೆಂದು ಬೊಗಳುತ್ತಿದ್ದಾರೆ. ಅಜನು ಹರಿಯ ಕಾಲನ್ನು ಉದಕಾಸ್ತ್ರದಿಂದ ಹೋಳುಮಾಡಿದನೆಂಬುದು ಸತ್ಯ. ಕಡಿದ ಕಾಲುಗಳೆರಡೂ ಕೂಡಿ ಭೂಮಿಗೆ ಬಾಧೆಯನ್ನುಂಟುಮಾಡುತ್ತಿರಲು ನಾಗ ನರ ದೈತ್ಯರು ಮೊರೆಯಿಡಲು ಭೈರವನಿಗೆ ಅಪ್ಪಣೆಯನ್ನು ಕೊಟ್ಟನು. ಅವನು ವಾಮನನನ್ನು ಹಿಡಿದು ಅಮುಕಲು ಅವನ ಎಲುಬುಗಳೆಲ್ಲ ನುಗ್ಗುನುರಿಯಾದುವು. ಅವನು ಶಿವನನ್ನು ಪ್ರಾರ್ಥಿಸಿಕೊಳ್ಳಲು ಅವನ ಇಷ್ಟದಂತೆ ಆ ಎಲುಬುಗಳನ್ನೆಲ್ಲ ಧರಿಸಿ ಕಂಕಾಳಧರಲಿಲೆಯನ್ನು ಮೆರೆದನು.

## ಚಂಡೇಶ್ವರಾನುಗ್ರಹದ ಕಥೆ

ಚೋಳದೇಶದ ನಲ್ಲೂರೆಂಬ ಪುರದಲ್ಲಿ ಅಚ್ಯುತಭಟ್ಟ ಸಾವಿತ್ರಿದೇವಿ ಎಂಬ ದಂಪತಿಗಳಿದ್ದರು. ಅವರು ಅತ್ಯಂತ ಭೋಗಭಾಗ್ಯಗಳನ್ನು ಅನುಭವಿಸುತ್ತಿದ್ದರೂ ಅವರಿಗೆ ಮಕ್ಕಳಿರಲಿಲ್ಲ. "ಮಕ್ಕಳಿಲ್ಲದವರಿಗೆ ಸದ್ಗತಿ ಇಲ್ಲ. ಆದುದರಿಂದ ವಿಘ್ನೇಶ್ವರಾಯಲಕ್ಕೆ ಹೋಗಿ ಪೂಜೆಮಾಡೋಣ" ಎಂದು ಸಾವಿತ್ರಿ ಗಂಡನಿಗೆ ಹೇಳಿ ಒಪ್ಪಿಸಿದಳು. ಪುತ್ರಭಾಗ್ಯವನ್ನು ಕರುಣಿಸಬೇಕೆಂದು ಅವರು ಭಕ್ತಿಭಾವದಿಂದ ವಿಘ್ನೇಶ್ವರನನ್ನು ಪೂಜಿಸಲು, ವಿಘ್ನೇಶ್ವರ ಪ್ರಸಾದವನ್ನು ಕರುಣಿಸಿದನು. ಸಾವಿತ್ರಿ ಅದನ್ನು ಭಯ ಭಕ್ತಿಯಿಂದ ಸ್ವೀಕರಿಸಿ ಸೇವಿಸಲು ಕಾಲಕ್ರಮದಲ್ಲಿ ಆಕೆ ಗರ್ಭವತಿಯಾದಳು. ನವಮಾಸ ತುಂಬಲು ಸಾವಿತ್ರಿ ಗಂಡುಮಗನನ್ನು ಹೆತ್ತಳು. ಆ ಮಗುವಿಗೆ ಚಂಡೇಶಪಿಳ್ಳೆ ಎಂದು ನಾಮಕರಣಮಾಡಿದರು. ಚಂಡೇಶನು ದಿನದಿನಕ್ಕೆ ಬೆಳೆಯುತ್ತಾ ಹೋದಂತೆ ಆತನ ತಂದೆಯ ಐಶ್ವರ್ಯವೆಲ್ಲ ಕರಗುತ್ತಾ ಹೋಯಿತು. ಬರುಬರುತ್ತ ಅವರು ಕಡುಬಡವರಾದರು. ಆಗ ಆ ಊರಿನ ಜನರೆಲ್ಲ ಬಂದು ಅಚ್ಯುತಭಟ್ಟರಿಗೆ "ನಿಮಗೆ ಮಗ ಹುಟ್ಟಿದಾರಭ್ಯ ದಾರಿದ್ರ್ಯ ಬಂದಿತು. ಅವನನ್ನು ಮನೆಯಿಂದ ಕಳಿಸಿಬಿಡಿ" ಎಂದು ಹೇಳಿದರು. ಅದನ್ನು ಕೇಳಿದ ಅಚ್ಯುತಭಟ್ಟನು "ನನ್ನ ಸಮಸ್ತ ಸಂಪತ್ತು ಹೋದರೇನು? ಸದ್ಗತಿದಾಯಕನಾದ ಮಗನಿಲ್ಲವೆ" ಎಂದನು. ಬೆಳೆದು ದೊಡ್ಡವನಾದ ಚಂಡೇಶನಿಗೆ ಬುದ್ಧಿ ಬಂದಿತು. ಊಟಕ್ಕೇ ಇಲ್ಲದ ಸ್ಥಿತಿಯನ್ನು ಕಂಡ ಚಂಡೇಶ "ಊರಿನ ಕರುಗಳನ್ನು ಕೊಡಿಸಿಕೊಡಿ, ನಾನು ಅವನ್ನು ಮೇಯಿಸಿಕೊಂಡು ಬರುತ್ತೇನೆ" ಎಂದು ತಂದೆಯನ್ನು ಕೇಳಿಕೊಂಡನು. ವಿಘ್ನೇಶ್ವರನ ವರಪ್ರಸಾದದಿಂದ ಹುಟ್ಟಿದ ನಿನ್ನನ್ನು ದನಕಾಯುವ ಕೆಲಸಕ್ಕೆ ನಿಯೋಜಿಸಬೇಕಾಯಿತಲ್ಲಾ ಎಂದು ಪರಿತಪಿಸಿದ ಅಚ್ಯುತಭಟ್ಟ ವಿಧಿಯಿಲ್ಲದೆ ಆ ಕೆಲಸವನ್ನು ವಹಿಸಿದನು. ಅದರಿಂದ ಅವರಿಗೆ ಒಪ್ಪತ್ತಿನ ಊಟಕ್ಕೆ ಅವಕಾಶವಾಯಿತು. ಮೊದಲು ಐವತ್ತು ಕರುಗಳನ್ನು ಮೇಯಿಸುತ್ತಿದ್ದ ಚಂಡೇಶ ಆಮೇಲೆ ನೂರು ಹಸುಗಳನ್ನು ಮೇಯಿಸಿಕೊಂಡು ಬರುವುದಾಗಿ ಹೇಳಿದ. ಅದರಂತೆ ವ್ಯವಸ್ಥೆಮಾಡಲು ಅವರಿಗೆ ಎರಡುಹೊತ್ತಿನ ಊಟಕ್ಕೆ ಅನುಕೂಲವಾಯಿತು. ಚಂಡೇಶನು ಪೂರ್ವಸಂಸ್ಕಾರದಿಂದ ಶಿವನಿಲಯಕ್ಕೆ ಹೋಗಬೇಕೆಂದು ಇಚ್ಛಿಸಿದರೂ ಪಶುಗಳು ಎಲ್ಲಿಯಾದರೂ ಹೋಗಿಬಿಟ್ಟಾವೆಂದು ಅಲ್ಲೇ ನದಿಯ ತೀರದಲ್ಲಿ ಮರಳಿನ ಲಿಂಗವನ್ನು ಮಾಡಿ ಮುತ್ತುಗದ ಎಲೆಯಲ್ಲಿ ನೀರನ್ನು ತಂದು ಅಭಿಷೇಕಮಾಡಿ ಅಲ್ಲೇ ಇದ್ದ ವಿವಿಧ ಪುಷ್ಪಗಳನ್ನು ತಿರಿತಂದು ಪೂಜೆಮಾಡುತ್ತಿದ್ದನು. ಅರಣ್ಯದಲ್ಲಿದ್ದ ಹಣ್ಣುಹಂಪಲುಗಳನ್ನು ಎಡೆಮಾಡಿ ಭಕ್ತಿಯ ಆವೇಶದಿಂದ ಕುಣಿದಾಡುತ್ತಿದ್ದನು. ಕೆಲವು ಕಾರಣಿಕಗೋವುಗಳು ಅಲ್ಲಿಗೆ ಬಂದು ಚಂಡೇಶನ ಆಣತಿಯಂತೆ ಆ ಮರಳಲಿಂಗಕ್ಕೆ ಕ್ಷೀರಾಭಿಷೇಕವನ್ನು ಮಾಡಿದವು. ಈ ರೀತಿ ಎರಡು ಮೂರುದಿನಗಳು ಕಳೆದವು. ಚಂಡೇಶ ಗೋವುಗಳನ್ನು ಸಂಜೆ ಹೊಡೆದುಕೊಂಡು ಹೋಗಿ ಅವರವರ ಮನೆಗೆ ತಲಪಿಸುತ್ತಿದ್ದನು. ಗೋವುಗಳ ಒಡೆಯರು

ಹಾಲುಕರೆಯಲು ಹೋದಾಗ ಹಸುಗಳು ಹಾಲನ್ನು ಕರೆಯದಿರಲು ಅವರೆಲ್ಲ ಅಚ್ಯುತ ಭಟ್ಟರ ಮನೆಗೆ ಹೋಗಿ ವಿಷಯವನ್ನು ತಿಳಿಸಿದರು. ಆತನು ಅವರನ್ನು ಸಮಾಧಾನ ಪಡಿಸಿ ಕಳಿಸಿ ಮಗನೊಡನೆ ಈ ವಿಷಯವನ್ನು ಪ್ರಸ್ತಾಪಿಸಲು ಅವನು ಮನದಲ್ಲೇ ಮರುಗಿ ಸುಮ್ಮನಾದನು. ಮಾರನೆಯ ದಿನ ಎಂದಿನಂತೆ ಗೋವುಗಳನ್ನು ಹೊಡೆದು ಕೊಂಡು ಹೋಗಿ ಮೇಯಲು ಬಿಟ್ಟು ತಾನು ಮರಳಲಿಂಗವನ್ನು ಮಾಡಿ ಪೂಜೆಗೆ ಸಿದ್ಧನಾದನು. ಚಂಡೇಶನಿಗೆ ತಿಳಿಯದಂತೆ ಅಚ್ಯುತಭಟ್ಟ ಅಲ್ಲಿಗೆ ಬಂದು ಒಂದು ಮರವನ್ನು ಏರಿ ಕುಳಿತುಕೊಂಡನು. ಚಂಡೇಶ ಗೋವುಗಳ ಹೆಸರನ್ನು ಕರೆಯುತ್ತಲಿ ಅವು ಒಂದೊಂದಾಗಿ ಬಂದು ಆ ಲಿಂಗದ ಮೇಲೆ ಹಾಲನ್ನು ಕರೆಯುತ್ತಿದ್ದವು. ಅದನ್ನು ನೋಡುತ್ತಿದ್ದ ಅಚ್ಯುತಭಟ್ಟ ಮರದಿಂದ ಕೆಳಗಿಳಿದು ಬಂದು' "ಎಲೆ ಪಾಪಿ ಇದು ಏನು ? ಈ ಮರಳಗುಡ್ಡೆ ಏತಕ್ಕೆ, ಇದರ ಮೇಲೆ ಹಾಲನ್ನು ಏಕೆ ಕರೆಸಿದೆ" ಎಂದು ಕೆರಹುಗಾಲಿಂದ ಆ ಲಿಂಗವನ್ನು ಒದ್ದುಬಿಟ್ಟನು. ಅದನ್ನು ಕಂಡ ಚಂಡೇಶನಿಗೆ ಅತಿಯಾದ ಕೋಪಬಂದು ತಂದೆಯನ್ನು ಕೊಲ್ಲಬೇಕೆಂದು ಹವಣಿಸಿದನು. ಆದರೆ ಅವನಲ್ಲಿ ಯಾವ ಆಯುಧವೂ ಇರಲಿಲ್ಲ. ಆಗ ಲಿಂಗದಿಂದ ಒಂದು ಕೊಡಲಿಯನ್ನು ಸರ್ಪಕಂಕಣನಾದ ಶಿವನು ತನ್ನ ಭಕ್ತನಿಗೆ ನೀಡಿದನು. ಆ ಕೊಡಲಿಯಿಂದ ತಂದೆಯ ತಲೆಯನ್ನು ಕತ್ತರಿಸಿಬಿಟ್ಟು, ನಡೆದುಹೋದ ಅಕಾರ್ಯಕ್ಕೆ ಪರಿತಪಿಸಿ ಲಿಂಗವನ್ನಪ್ಪಿ ಕೊಂಡು ಮೊರೆಯಿಟ್ಟನು. ಆಗ ಶಿವನು ಪ್ರತ್ಯಕ್ಷವಾಗಿ ಅವನ ಇಷ್ಟದಂತೆ ಸದಾ ತನ್ನ ಜೊತೆಯಲ್ಲಿಯೇ ಇರುವ ವರವನ್ನು ಕರುಣಿಸಿ ಆ ಗೋವುಗಳ ಸಮೇತ ಚಂಡೇಶನನ್ನೂ ಕೈಲಾಸಕ್ಕೆ ಕರೆದೊಯ್ದನು.

## ವಿಷಧರಲೀಲೆ

ಶಿವನ ಅಂಶದ ದೂರ್ವಾಸಮುನಿ ಶಿವನ ಆಸ್ಥಾನಕ್ಕೆ ಬಂದು ನಮಸ್ಕರಿಸಿ ಸ್ತುತಿಸಿ ಓಲಗ ಮುಗಿದ ಮೇಲೆ ಹಿಂತಿರುಗಿ ಬರುತ್ತಿದ್ದಾಗ ಪಾರ್ವತಿ ತನಗೆ ಒಬ್ಬ ಸುಂದರಿ ತಂದಿತ್ತ ಮಂದಾರಮಾಲೆಯನ್ನು ಲಿಂಗಕ್ಕರ್ಪಿಸಿ ಮುಂದಿಗೆ ಮುಡಿದುಕೊಳ್ಳು ತ್ತಿದ್ದಳು. ಅಷ್ಟರಲ್ಲಿ ದೂರ್ವಾಸ ನಮಸ್ಕರಿಸಲು ಆ ಮಾಲೆಯನ್ನು ಆತನಿಗೆ ಕೊಟ್ಟಳು. ಆತನು ಅದನ್ನು ಅತ್ಯಂತ ಭಕ್ತಿಭಾವದಿಂದ ತರುತ್ತಿರುವಲ್ಲಿ ಇತ್ತ ದೇವೇಂದ್ರನು ಓಲಗ ವನ್ನು ಮುಗಿಸಿಕೊಂಡು ಐರಾವತವನ್ನು ಏರಬೇಕೆಂದಿರುವಷ್ಟರಲ್ಲಿ ದೂರ್ವಾಸನು ಅಲ್ಲಿಗೆ ಬಂದನು. ಪಾರ್ವತಿ ತನಗೆ ಕೊಟ್ಟ ಮಂದಾರಮಾಲೆಯನ್ನು ದೇವೇಂದ್ರನಿಗೆ ಕೊಡಬೇಕೆಂದು ಅವನ ಸಮೀಪಕ್ಕೆ ಬರಲು ದೇವೇಂದ್ರನು ಐರಾವತದ ಮೇಲೆ ಕುಳಿತಿದ್ದನು. ದೂರ್ವಾಸನು ಪಾರ್ವತಿ ತನಗೆ ಕೊಟ್ಟ ಮಂದಾರಮಾಲೆಯನ್ನು ಕೊಡಲು ಅವನು ಅಹಂಕಾರದಿಂದ ಅದನ್ನು ಅಂಕುಶಕ್ಕೆ ಸಿಕ್ಕಿಸಿಕೊಂಡು ಆನೆಯ ಮಸ್ತಕದ ಮೇಲೆ ಹಾಕಿದನು. ಆ ಹೂವಿನ ವಾಸನೆಗೆ ದುಂಬಿಗಳು ಮುತ್ತಲು ಆನೆ ಅವುಗಳ ಕಾಟವನ್ನು ತಡೆಯಲಾರದೆ ಆ ಹಾರವನ್ನು ಹರಿದು ಕೆಳಗೆ ಬಿಸಾಡಿತು.

ಚತುರಂಗ ಬಲವೆಲ್ಲ ಅದನ್ನು ತುಳಿದುಹಾಕಿತು. ಅದನ್ನು ಕಂಡ ದೂರ್ವಾಸನಿಗೆ ಸಿಟ್ಟುಬಂದು "ನಿನಗೆ ದಟ್ಟದಾರಿದ್ರ್ಯ ಈಗಲೇ ಬರಲಿ" ಎಂದು ಶಾಪವನ್ನು ಕೊಟ್ಟನು. "ಸಿರಿಯಿಂದ ದೊರೆಕೊಂಡುದೆಲ್ಲ ನೀರೊಳ್ ನೆರವುತಿರದೆ? ಪೋದಂದಂ." ಇಂದ್ರ ಸರ್ವಸ್ವವನ್ನೂ ಕಳೆದುಕೊಂಡು ದರಿದ್ರನಾಗಲು ಆತನು ಸುರಾಚಾರ್ಯನಲ್ಲಿಗೆ ಹೋಗಿ ನಡೆದದ್ದನ್ನೆಲ್ಲ ವಿವರಿಸಲು ಅವರು ದೂರ್ವಾಸರಲ್ಲಿಗೆ ಹೋಗಿ ಅವರ ಪಾದಪದ್ಮಗಳಿಗೆರಗಿ ಪ್ರಾರ್ಥಿಸುವಂತೆ ತಿಳಿಸಿದರು. "ಸಜ್ಜನರ ಕೋಪ ತೃಣದಗ್ನಿಯಂತೆ ಕ್ಷಣಮಾತ್ರದಲ್ಲಿ ನಂದುತ್ತದೆ. ಪಾಪಾತ್ಮರ ಕೋಪ ಬಡಬಾಗ್ನಿಯಂತೆ ಸಮುದ್ರವನ್ನೇ ಹೀರುತ್ತದೆ. ಅವರು ನಿನ್ನಮೇಲೆ ಕೋಪಿಸಿಕೊಳ್ಳುವುದಿಲ್ಲ ಹೆದರದೇ ಹೋಗಿ ಅವರನ್ನು ಆಶ್ರಯಿಸು" ಎಂದನು. ಅದರಂತೆ ಇಂದ್ರನು ದೂರ್ವಾಸರಲ್ಲಿಗೆ ಹೋಗಿ ಅಡ್ಡಬಿದ್ದು ತನ್ನ ಅಪರಾಧವನ್ನು ಕ್ಷಮಿಸಿ ಕರುಣಿಸಬೇಕೆಂದು ಕೇಳಿಕೊಂಡನು. ಸುಪ್ರಸನ್ನರಾದ ದೂರ್ವಾಸರು "ನಿನ್ನ ಸಂಪತ್ತೆಲ್ಲ ನಾಶವಾಯಿತು. ಮತ್ತೆ ಅದು ನಿನಗೆ ಬೇಕಾದರೆ ಕ್ಷೀರಸಾಗರವನ್ನು ಕಡೆದು ಪಡೆದುಕೋ" ಎಂದರು. ಇದ್ರನು ಉಗ್ರತಪ ವನ್ನು ಮಾಡಿ ಶಿವನನ್ನು ಮೆಚ್ಚಿಸಿ ಸುರರು ಅಸುರರು ಪಾಲ್ಗಡಲನ್ನು ಮಥಿಸಿದರೆ ಸಮಸ್ತ ಐಶ್ವರ್ಯ ಮರಳಿಬರುವುದು ಎಂಬ ವರವನ್ನು ಪಡೆದುಬಂದನು. ಅಸುರರನ್ನೂ ದೇವತೆಗಳನ್ನೂ ಈ ಕಾರ್ಯಕ್ಕೆ ಒಪ್ಪಿಸಿ ಮಂದರಾದ್ರಿಯನ್ನು ಮಂತಾಗಿ ಮಾಡಿ ಆದಿಶೇಷನನ್ನು ಹಗ್ಗವನ್ನಾಗಿ ಮಾಡಿ ಕಡೆಯಲು ಪ್ರಾರಂಭಿಸಿದರು. ಅದರಿಂದ ಹುಟ್ಟಿದ ವಸ್ತುಗಳನ್ನೆಲ್ಲ ಪಡೆದು ಮತ್ತೆ ಕಡೆಯಲು ಆದಿಶೇಷನಿಗೆ ಉಪದ್ರವ ತೋರಲು ವಿಷವನ್ನು ಉಗುಳಿದನು ಆ ವಿಷಜ್ವಾಲೆ ಹರಡಲು ಎಲ್ಲರೂ ಓಡಿ ಹೋದರು. ಅವರು ಬ್ರಹ್ಮನನ್ನು ಮೊರೆಹೊಕ್ಕರು. ಬ್ರಹ್ಮನಿಂದ ಏನೂ ಸಾಧ್ಯ ವಾಗದಿರಲು ಅವರೆಲ್ಲ ಕೆಟ್ಟೆವೆಂದು ಶಂಕರನಿಗೆ ಮೊರೆಯಿಟ್ಟರು. ಕೈಲಾಸಕ್ಕೆ ಹೋಗಿ ನಂದೀಶನಿಗೆ ನಮಸ್ಕರಿಸಿ ಎಲ್ಲ ವಿಷಯವನ್ನು ಅರಿಕೆಮಾಡಿಕೊಂಡರು. ನಂದೀಶನು ಪರಶಿವನಿಗೆ ಈ ಸಂಗತಿಯನ್ನು ತಿಳಿಸಲು ಅವರೆಲ್ಲರನ್ನು ಬರಮಾಡಿಕೊಂಡ ಶಿವನು ಅವರ ಪ್ರಾರ್ಥನೆಯನ್ನು ಮನ್ನಿಸಿ ಹೆದರಬೇಡಿರೆಂದು ಅಭಯವನ್ನಿತ್ತನು. ತನ್ನ ಅಂಗೈ ಯನ್ನು ನೀಡಿ ವಿಷವನ್ನು ಆಹ್ವಾನಿಸಲು ಅದು ಅಂಗೈಗೆ ಬರಲು ಅದನ್ನು ಪಾನಮಾಡಿ ಗಂಟಲಲ್ಲಿ ನಿಲ್ಲಿಸಿದನು. "ನಮ್ಮನ್ನು ಮರೆತು ಮಥನಮಾಡಿದ್ದರಿಂದ ನಿಮಗೆ ಹೀಗಾಯಿತು. ಆದುದರಿಂದ ಮೊದಲು ಹುಟ್ಟಿದ್ದನ್ನು ನಮಗೆ ಕೊಟ್ಟು ಆಮೇಲೆ ಹುಟ್ಟಿದ್ದನ್ನು ನೀವೆಲ್ಲ ಸಮಭಾಗಮಾಡಿಕೊಳ್ಳಿ" ಎಂದು ಹೇಳಿ ಆದಿಶೇಷನಿಗೆ "ಇನ್ನೂ ಮೂರುಸಾರಿ ಕಡೆಯಲಿ ನೀನು ಕೋಪಗೊಳ್ಳಬೇಡ" ಎಂದು ಹೇಳಿದನು. ಅದ ರಂತೆ ಮೊದಲನೆಯ ಸಾರಿ ಕಡೆಯಲು ಷೋಡಶಕಲಾಪೂರ್ಣನಾದ ಚಂದ್ರನು ಉದ್ಭವಿ ಸಿದನು. ಚಂದ್ರನ ಶೈತ್ಯದಿಂದ ಎಲ್ಲರೂ ಗಡಗಡನೆ ನಡುಗಿಹೋದರು. ಶಿವನನ್ನು ಪ್ರಾರ್ಥಿಸಲು ಶಿವನು ಒಂದು ಕಲೆಯನ್ನು ಶಿರದಲ್ಲಿ ಧರಿಸಿ ಉಳಿದ ಕಲೆಗಳನ್ನು ಧರಿಸಿ

ಕೊಂಡು ಆಕಾಶದಲ್ಲಿರುವಂತೆ ಚಂದ್ರನಿಗೆ ನಿರೂಪಿಸಿದನು. ದೇವಾಸುರರು ಎರಡನೆಯ ಬಾರಿ ಕ್ಷೀರಸಮುದ್ರವನ್ನು ಕಡೆಯಲು ಅಗಣಿತವಾದ ವಸ್ತುಗಳು ಹುಟ್ಟಿದವು. ಅವನ್ನೆಲ್ಲ ದೇವತೆಗಳೇ ತೆಗೆದುಕೊಂಡು ಕುಣಿದಾಡುತ್ತಿರಲು ದನುಜರು ತಮಗೆ ಏನೂಕೊಡದೆ ಇರುವುದು ನೀತಿಯೇ ಎಂದು ಅಮೃತಕುಂಡವನ್ನು ತೆಗೆದುಕೊಂಡುಹೋದರು. ಆಗ ದೇವತೆಗಳಿಗೆ ಏನುಮಾಡುವುದಕ್ಕೂ ತೋಚದೆ ವಿಷ್ಣುವಿಗೆ ದೂರಲು ವಿಷ್ಣುವು ಮತ್ತ ಕಾಶಿನಿಯ ರೂಪವನ್ನು ತಾಳಿ ಅಮೃತವನ್ನು ದೇವತೆಗಳಿಗೂ ಸುರೆಯನ್ನು ಅಸುರರಿಗೂ ಹಂಚುತ್ತಿರುವ ಸಮಯದಲ್ಲಿ ರಾಕ್ಷಸನೊಬ್ಬನು ಅಮರಪಂಕ್ತಿಗೆ ಬರಲು ಅವನಿಗೂ ಅಮೃತವನ್ನು ಎರೆಯಲು ಚಂದ್ರಸೂರ್ಯರು ನೋಡಿ ಅವನು ರಾಕ್ಷಸನೆಂದು ಹೇಳಲು, ವಿಷ್ಣು ಚಕ್ರದಿಂದ ಅವನ ತಲೆಯನ್ನು ಕತ್ತರಿಸಿದನು. ಅವನ ರುಂಡಮುಂಡ ಬೇರೆಬೇರೆ ಯಾಗಿ ರಾಹುಕೇತುಗಳಾದರು. ಈ ರಾಹುಕೇತುಗಳು ತಮ್ಮ ಪೂರ್ವವೈರದಿಂದ ಚಂದ್ರಸೂರ್ಯರನ್ನು ಕಾಲಕಾಲಕ್ಕೆ ನುಂಗುತ್ತವೆ. ಉಪಕಾರಮಾಡಲು ಬಂದ ದನುಜರಿಗೆ ದೇವತೆಗಳು ಘಾತಕವನ್ನು ಮಾಡಿದರು. ದೇವತೆಯರಿಂತಪ್ಪ ಘಾತಕರು ಶಿವಶಿವಾ ನರರೆಂತುಟೊ!

## ಹರ ಹರಿಗೆ ಚಕ್ರವನಿತ್ತುದು

ಅಧಿಕವಾದ ಜಲಪ್ರಳಯವಾಗಲು ಅಜಹರಿಗಳು ಹುಟ್ಟಿ ಶಿವನೇ ಸೃಷ್ಟಿಕರ್ತನು ಎಂಬುದನ್ನು ಮರೆತು ಜಲದಲ್ಲಿ ಮುಳುಗುತ್ತ ಏಳುತ್ತ ಆಳುತ್ತಿರಲು ಅವರಿಬ್ಬರಿಗೂ ಬೆಳಕುಕಾಣುವಂತೆ ಶಿವನು ಮಾಡಿದನು. ಅವರಿಗೆ ಕಿಂಚಿತ್‌ಜ್ಞಾನವನ್ನು ಕೊಡಲು ಅವರಿಬ್ಬರೂ ಭುಜಬಲವನ್ನು ಪಡೆದು ಒಬ್ಬರೊಬ್ಬರು ಹೊಡೆದಾಟಕ್ಕೆ ತೊಡಗಿದರು. ಇಬ್ಬರೂ ಕಾದಾಡಿ ಮೂರ್ಛಿತರಾಗಲು ಅದನ್ನು ನೋಡಿದ ಶಿವನು ಅವರಿಗೆ ಚೇತನ ವನ್ನಿತ್ತು ಅವರ ಮಧ್ಯೆ ಲಿಂಗಾಕಾರದಿಂದ ಉದ್ಭವಿಸಿದನು. ಅದರ ತೇಜಸ್ಸನ್ನು ನೋಡಲಾರದೆ ಅವರಿಬ್ಬರೂ ಕಣ್ಣುಗಳನ್ನು ಮುಚ್ಚಿದರು. ಅವರಿಬ್ಬರ ಅಜ್ಞಾನ ದೂರವಾಗಿ ಅವಿವೇಕದಿಂದ ತಾವು ಹೋರಾಡಿದ್ದಕ್ಕಾಗಿ ಪರಿತಪಿಸಿ ಆ ಲಿಂಗಕ್ಕೆ ಭಕ್ತಿ ಯಿಂದ ನಮಸ್ಕರಿಸಿ ಪರಿಪರಿಯಾಗಿ ಸ್ತೋತ್ರಮಾಡಿದರು. ಅವರ ಭಕ್ತಿಗೆ ಮೆಚ್ಚಿದ ಶಿವನು ಪ್ರತ್ಯಕ್ಷನಾಗಿ ನಿಮ್ಮಿಷ್ಟವೇನೆಂದು ಕೇಳಿದನು. ಅದಕ್ಕೆ ಅವರು ''ಪದಪದ್ಮ ಭಕ್ತಿಯಂ ಕೊಟ್ಟು ಕರುಣದೊಳೆಮ್ಮ ಸಲಹುವುದು. ಜನ್ಮಜನ್ಮದೊಳ್ ನಿಮ್ಮಡಿ ಯೊಳತ್ಯಂತ ಭಕ್ತಿಗೆಡದಂತೆ ಕರುಣಿಸುವುದು. ಅಲ್ಲದೆ ನಾವು ಮಾಡಿದ ಈ ಸ್ತೋತ್ರ ವನ್ನು ಪಠಿಸಿದವರಿಗೆ ಆಯುರಾರೋಗ್ಯಾದಿಗಳನ್ನೂ ಹಿಂದಿನ ಪಾಪಪರಿಹಾರವನ್ನೂ ಕರುಣಿಸಬೇಕು'' ಎನ್ನಲು, ಶಿವನು ''ತಥಾಸ್ತು'' ಎಂದನು. ಬ್ರಹ್ಮನಿಗೆ ಸೃಷ್ಟಿಮಾಡು ವಂತೆಯೂ ವಿಷ್ಣುವಿಗೆ ಲೋಕವನ್ನು ರಕ್ಷಿಸುವಂತೆಯೂ ಹೇಳಿ ಜಗತ್ತಿಗೆ ಮಾತಾಪಿತ ರಾಗಿ ಕಾಪಾಡುವುದೆಂದು ಆಜ್ಞೆಮಾಡಿದನು. ಆಗ ವಿಷ್ಣು ''ಎಲೈ ಪರಮೇಶ್ವರನೆ ದನುಜರು ಬ್ರಹ್ಮನಿಂದ ವರವನ್ನು ಪಡೆದು ಲೋಕವನ್ನು ಹಿಂಸಿಸಿದರೆ ನಿರಾಯುಧ

ಪಾಣಿಯಾದ ನಾನು ಅವರನ್ನು ಹೇಗೆ ಗೆಲ್ಲಲಿ'' ಎನ್ನಲು, ಪರಶಿವನು ದಶಸಹಸ್ರಾರ್ಕ ತೇಜಃಪ್ರಭಾಪುಂಜದ ಚಕ್ರವನ್ನೂ ಒಂದು ಗದೆಯನ್ನೂ ಕೊಟ್ಟನು ಬಲಗೈಯಲ್ಲಿ ಚಕ್ರವನ್ನೂ ಎಡಗೈಯಲ್ಲಿ ಗದೆಯನ್ನೂ ಹಿಡಿದ ವಿಷ್ಣು ಗಿರಿಜೆಯ ಪಾದಗಳಿಗೆ ವಂದಿಸಲು ಆಕೆ ಸರ್ವಭೀಕರ ನಿನಾದದಿಂದ ಮೆರೆವ ಶಂಖವನ್ನೂ ಮತ್ತೆ ಎರಡು ಕೈಗಳನ್ನೂ ಪದ್ಮಗಳನ್ನೂ ಅನುಗ್ರಹಿಸಿದಳು ವಿಷ್ಣು ಒಂದು ಕೈಯಲ್ಲಿ ಚಕ್ರವನ್ನೂ ಒಂದು ಕೈಯಲ್ಲಿ ಗದೆಯನ್ನೂ ಮತ್ತೊಂದುಕೈಯಲ್ಲಿ ಶಂಖವನ್ನೂ ನಾಲ್ಕನೆಯ ಕೈಯಲ್ಲಿ ಪದ್ಮವನ್ನೂ ಧರಿಸಿ ನಾಲ್ಕೈಯ್ಯ ಎನಿಸಿಕೊಂಡನು.

ಹರನ ತೊಡೆಯ ಮೇಲೆ ವಿಘ್ನೇಶ ಷಣ್ಮುಖರು ಸಂತೋಷದಿಂದ ಆಟವಾಡುತ್ತಿರುವಾಗ ಒಬ್ಬ ಗಣನಾಥನು ಮಾವಿನ ಹಣ್ಣೊಂದನ್ನು ತಂದು ಪರಮೇಶನಿಗೆ ಕಾಣಿಕೆಯಾಗಿತ್ತು ನಮಸ್ಕರಿಸಿದನು. ಆ ಹಣ್ಣನ್ನು ಕಂಡ ಮಕ್ಕಳಿಬ್ಬರೂ ಅದು ನನಗೆಬೇಕು ತನಗೆಬೇಕು ಎಂದು ಕಿತ್ತಾಡಲು, ಶಿವನು ಅದನ್ನು ಮೇಲಕ್ಕೆ ಎತ್ತಿ ಹಿಡಿದನು. ಆ ಹಣ್ಣನ್ನು ಕೊಡುವಂತೆ ಅವರಿಬ್ಬರೂ ಪಿಡಿಸಲು ಶಿವನು ಈ ಹಣ್ಣನ್ನು ಒಬ್ಬನಿಗೆ ಕೊಟ್ಟರೆ ಮತ್ತೊಬ್ಬನು ಕೋಪಿಸಿಕೊಳ್ಳುತ್ತಾನೆ. ಅದಕ್ಕಾಗಿ ಒಂದು ಉಪಾಯವನ್ನು ಮಾಡಬೇಕೆಂದು ಯೋಚಿಸಿ ಈ ಬ್ರಹ್ಮಾಂಡವನ್ನು ಯಾರು ಮೊದಲು ಸುತ್ತಿಬರುತ್ತಾರೋ ಅವರಿಗೆ ಈ ಹಣ್ಣನ್ನು ಕೊಡುವುದಾಗಿ ತಿಳಿಸಿದನು. ಅದನ್ನು ಕೇಳಿದ ಕೂಡಲೇ ಷಣ್ಮುಖ ''ನನ್ನ ಅಣ್ಣ ಡೊಳ್ಳುಹೊಟ್ಟೆಯುವ, ಅವನಿಂದ ಇದು ಸಾಧ್ಯವಿಲ್ಲ'' ಎಂದು ಭಾವಿಸಿ ನವಿಲನ್ನೇರಿ ತಾನು ಹೊರಟುಹೋದನು. ಇತ್ತ ಗಣಪತಿ ತನ್ನ ಕುಕ್ಷಿಯಲ್ಲೇ ಅಖಿಲಾಂಡವನ್ನು ತಳೆದಿರುವ ಶಿವನನ್ನು ಪ್ರದಕ್ಷಿಣೆ ಮಾಡಿ ಹಣ್ಣನ್ನು ಕೊಡುವಂತೆ ಕೇಳಿಕೊಂಡನು. ಸುಪ್ರಸನ್ನನಾದ ಶಂಕರ ಮಾವಿನಹಣ್ಣನ್ನು ಗಣಪತಿಗೆ ಕೊಟ್ಟು ಮುಂಡಾಡಿದ. ಇತ್ತ ಬ್ರಹ್ಮಾಂಡವನ್ನೆಲ್ಲ ಸುತ್ತಿಬಂದ ಷಣ್ಮುಖ ಹಣ್ಣನ್ನು ಕೊಡುವಂತೆ ತಂದೆಯನ್ನು ಕೇಳಲು ಆತನು ಗಣಪತಿಗೆ ಅದನ್ನು ಕೊಟ್ಟೆ ಅದಕ್ಕೆ ಕಾರಣವನ್ನು ಆತನನ್ನೇ ಕೇಳಿಕೊ ಎಂದನು. ಗಣಪತಿ ಷಣ್ಮುಖನಿಗೆ ಎಲ್ಲವನ್ನು ವಿವರಿಸಿ ಸಮಾಧಾನಪಡಿಸಿದನು. ಗಣಪನ ಮಾತಿಗೆ ಸಂತಸತಾಳಿದ ಶಂಕರ ''ನಿನ್ನಂತರಂಗದಭೀಷ್ಟ ಯಾವುದುಸುರೈ ಕೊಡುವೆನು'' ಎನ್ನಲು, ವಿಘ್ನೇಶ್ವರ ''ನಿಮ್ಮ ಶ್ರೀ ಚರಣಮಹಿಮೆಯನುಸುರ್ವನಂತಶಾಸ್ತ್ರಗಳನುರೆ ಬೋಧಿಸುವುದು'' ಎಂದು ಪ್ರಾರ್ಥಿಸಿಕೊಂಡನು.

ಶಬ್ದ ಕಲ್ಪ ಛಂದಸ್ಸ ಶಿಕ್ಷೆ ಜ್ಯೋತಿಷ ನಿರುಕ್ತಿ ಇವು ಆರು ಅಂಗಗಳು. ಋಕ್ಕು, ಯಜುಸ್, ಸಾಮ, ಅಥರ್ವಣ ಇವು ನಾಲ್ಕುವೇದಗಳು. ಮೀಮಾಂಸೆ, ಧರ್ಮಶಾಸ್ತ್ರ, ಪುರಾಣ, ತರ್ಕ ಇವೆಲ್ಲ ಕೂಡಿ ಹದಿನಾಲ್ಕು ವಿದ್ಯೆಗಳಾಗುತ್ತವೆ. ಆಯುರ್ವೇದ, ಅರ್ಥಶಾಸ್ತ್ರ, ಗಂಧರ್ವವಿದ್ಯೆ, ಧನುರ್ವೇದ ಇವು ಸೇರಿ ಹದಿನೆಂಟು ವಿದ್ಯೆಗಳಾದುವು. ಕಾಮಿಕದಿಂದ ವಾತೂಲದ ವರೆಗೆ ಲಲಿತಾಗಮಂಗಳು ಇಪ್ಪತ್ತೆಂಟು. ಶ್ರೀರುದ್ರದಿಂದ ಅಥರ್ವದ ವರೆಗೆ ಮೂವತ್ತೆರಡು ಉಪನಿಷತ್ತುಗಳು. ಇವನ್ನು ಪರಶಿವನು

ವಿಘ್ನೇಶ್ವರನಿಗೆ ಬೋಧಿಸಿದನು. ಸ್ಮೃತಿಗಳು ಹದಿನೆಂಟು. ಯಮುನ ಸ್ಮೃತಿ, ಗೌತಮನ ಸ್ಮೃತಿ, ಶಂಖಲಿಖಿತನ ಸ್ಮೃತಿ, ಪಾರಾಶರ ಸ್ಮೃತಿ ಮುಖ್ಯವಾದುವು. ಅವುಗಳಲ್ಲಿ ಧರ್ಮ ಜಾತಿವರ್ಣಾಶ್ರಮ ಆಚಾರ, ದಾಯಾದಭಾಗ ಅಷ್ಟಾದಶಾಂಕಿತವೃತ್ತಿ, ಪಾಪ ನಿವೃತ್ತಿಯು ನಿರೂಪಿತವಾಗಿದೆ.

ಶೈವ ಹತ್ತು, ವೈಷ್ಣವ ನಾಲ್ಕು, ಪಾವಕ ಒಂದು, ಸೌರ ಒಂದು, ವೈರಿಂಚ ಎರಡು ಹೀಗೆ ಹದಿನೆಂಟು ಉಪಪುರಾಣಗಳು. ಪುರಾಣಗಳು ಹದಿನೆಂಟು. ಜೀವಿಗಳು ಇವುಗಳ ತತ್ವವನ್ನು ತಿಳಿದು ಸುಖಿಸಬೇಕು. "ಎಲೈ ಗಣಪನೆ ನೀನು ವಿದ್ಯಾಧೀಶನಾಗು" ಎಂದು ಹರಸಿ, "ನಿನ್ನನ್ನು ಮೊದಲು ಪೂಜಿಸಿದವರಿಗೆ ಬುದ್ಧಿಯನ್ನು ಕೊಡು ! ಸಕಲ ಪ್ರಮಥ ರಲ್ಲಿ ಮುಖ್ಯನಾದುದರಿಂದ ಗಣಪ ಎಂಬ ಅಭಿಧಾನ ನಿನಗೆ ಪ್ರಾಪ್ತವಾಗಲಿ" ಎಂದು ವರವನ್ನು ಕೊಟ್ಟನು. ಪಾರ್ವತಿ ಪರಶು ಪಾಶಗಳನ್ನಿತ್ತು ಶತ್ರುಗಳನ್ನು ಇದ್ದಲ್ಲಿಯೇ ಜಯಿಸುವಂತೆ ಆಶೀರ್ವದಿಸಿದಳು. ವಿಘ್ನೇಶ್ವರ ಎಲ್ಲ ವರಗಳನ್ನು ಪಡೆದು ದುಷ್ಟ ಶಿಕ್ಷಣ ಶಿಷ್ಟಸಂರಕ್ಷಣೆಯನ್ನು ಮಾಡುತ್ತಾ ಇದ್ದನು.

ಮತ್ತೊಂದು ಕಲ್ಪದುತೆ ಪರಮೇಶನು ಪಾರ್ವತಿಯೊಡನೆ ಮಂದರಾದ್ರಿಯಲ್ಲಿ ಮತ್ತಗಜಹಸ್ತಿನೀರೂಪದಿಂದ ವಿರಹಿಸಲು ಅವರಿಗೆ ಗಜಾನನ ಹುಟ್ಟಿದನು. ಶಿವನು ಮಹಿಷಾಸುರನ ಪುತ್ರನಾದ ಗಜಾಸುರನನ್ನು ಕೊಲ್ಲಲು ಅವನು ಪರಶಿವನನ್ನು ಸ್ತುತಿ ಸಿದನು ಅದಕ್ಕೆ ಮೆಚ್ಚಿದ ಶಿವನು "ವರವನ್ನು ಕೇಳು" ಎನ್ನಲು ನಾನು ಮಾಡಿದ ಅಪರಾಧಕೋಟಿಯನ್ನು ನೋಡದೆ ನಿನ್ನ ತ್ರಿಶೂಲದಿಂದ ನನ್ನ ಚರ್ಮವನ್ನು ಸುಲಿದು ಧರಿಸಬೇಕೆಂದು ಪ್ರಾರ್ಥಿಸಿಕೊಂಡನು. ಅದರಂತೆ ಶಿವನು ಗಜಾಸುರನ ಚರ್ಮವನ್ನು ಉಟ್ಟುಹೊದೆದು ಆ ಗಜಾಸುರನ ಶಿರವನ್ನು ಪಾರ್ವತಿಗೆ ತೋರಿಸುವೆನೆಂದು ಕೈಯಲ್ಲಿ ಹಿಡಿದುಕೊಂಡು ಬಂದನು. ತಾನು ಬರುತ್ತಿರುವ ವಿಷಯವನ್ನು ಪಾರ್ವತಿಗೆ ಹೇಳಿ ಕಳಿಸಿದನು. ಪಾರ್ವತಿ, ಪುರುಷನಿಗೆ ಆರತಿಯನೆತ್ತಬೇಕೆಂದು ಅಭ್ಯಂಜನಮಾಡಲು ಹೋಗುವಾಗ ದೇಹದ ಕೊಳೆಯನ್ನು ತೆಗೆದು ಒಂದು ಉಂಡೆಯನ್ನು ಮಾಡಿ ಅದಕ್ಕೆ ಬೊಂಬೆಯ ರೂಪವನ್ನು ಕೊಟ್ಟು ಜೀವದಾನಮಾಡಿ ಬಾಗಿಲಲ್ಲಿ ಕಾಯುತ್ತಾ ಕೊಂಡಿರುವಂತೆ ಹೇಳಿ ಸ್ನಾನಕ್ಕೆ ಹೋದಳು. ಆ ವೇಳೆಗೆ ಸರಿಯಾಗಿ ಶಿವನು ಅಲ್ಲಿಗೆ ಬರಲು ಬಾಗಿಲಲ್ಲಿದ್ದ ಬೆನವಣ್ಣ "ಒಳಗೆ ಅಮ್ಮ ಮಿಂದಪಳು ಪೋಗಬೇಡ" ಎಂದು ಝಂಕಿಸಿ ತಡೆದನು. ಶಿವನೇ ತನ್ನ ತಂದೆ ಎಂಬುದನ್ನು ಆತನು ಅರಿಯ. ಇದರಿಂದ ಕೋಪಗೊಂಡ ಶಿವನು ಅವನ ತಲೆಯನ್ನು ಉಗುರಿನಿಂದ ಚಿವುಟಿ ಆಕಾಶಕ್ಕೆ ಎಸೆದು ಬಿಟ್ಟನು. ಒಳಗೆ ಬಂದ ಪರಶಿವನಿಗೆ ಪಾರ್ವತಿ ಆರತಿಯನ್ನೆತ್ತಿ ಕೈಯನ್ನು ಹಿಡಿದು ಕೊಳ್ಳಲು ರಕ್ತದಿಂದ ಕೂಡಿದ ಉಗುರನ್ನು ಕಂಡು ಕಾರಣವನ್ನು ಕೇಳಿದಳು. ಬಾಗಿಲಲ್ಲಿ ತನ್ನನ್ನು ತಡೆದ ಬಾಲಕನ ಶಿರವನ್ನು ಚಿವುಟಿಹಾಕಿದ್ದು ಅದು ಎನ್ನಲು 'ಆತನು ನಿನ್ನ ಮಗ' ಎಂದು ಶೋಕಿಸಿದಳು. ಶಿವನು ಆ ಗಜಾಸುರನ ತಲೆಯನ್ನು ಅವನ ಮುಂಡಕ್ಕೆ

ಜೋಡಿಸಿ ಪ್ರಾಣದಾನಮಾಡಿದನು. "ಅಖಿಲಮತಗಳಲ್ಲಿ ಎಲ್ಲ ಲೋಕಗಳಲ್ಲಿ ದೇವಾಳಿಯೊಳಗೆ ನೀನೇ ಉತ್ತಮನು. ಸಕಲ ವಿದ್ಯಾಭ್ಯಾಸದೊಳಗೆ ನಿನಗೆ ಅಗ್ರಪೂಜೆ ಸಲ್ಲಲಿ" ಎಂದನಂ ಪಾರ್ವತಿ ಪರಮೇಶ್ವರರು ವರಗಳನ್ನಿತ್ತರು.

## ಉಮಾಸ್ಕಂದಲೀಲೆ

ಗಿರಿಜೆ ಕಲ್ಯಾಣವಾದ ಮೇಲೆ ರಜತಾದ್ರಿಯಿಂದ ಮಂದರಾಚಲಕ್ಕೆ ಬಂದಳು. ಶಂಕರನು ತಾರಕಾಸುರನನ್ನು ವಧಿಸಲು ಷಣ್ಮುಖನನ್ನು ಪಡೆಯಬೇಕೆಂದು ಸಾಹಸ್ರಾಬ್ದ ಪಾರ್ವತಿಯೊಡನೆ ಕ್ರೀಡಿಸುತ್ತಿದ್ದನು. ಇತ್ತ ತಾರಕನ ಬಾಧೆ ತಲ್ಲಣಗೊಳಿಸುತ್ತಿತ್ತು. ಶಂಕರನು ಜಗತ್ತನ್ನು ರಕ್ಷಿಸುವ ಕಾರ್ಯವನ್ನು ಬಿಟ್ಟದ್ದರಿಂದ ಕಾರ್ಮೋಡಗಳು ಮಾಂಸ ಮೂಳೆಗಳನ್ನು ಸುರಿದವು. ಸಮುದ್ರಗಳಂ ಮಡುವಿನ ನೀರನ್ನು ಹೀರಿದುವು. ಬಡಬಾಗ್ನಿ ಬ್ರಹ್ಮಾಂಡವನ್ನೇ ಸುಡಲು ಪ್ರಾರಂಭಿಸಿತು. ಜಂಝಾಮಾರುತ ಬೀಸಲು ನಕ್ಷತ್ರಗಳು ಭೂಮಿಗೆ ಉದುರಿದುವು. ಈ ತೆರನ ಅನೇಕ ಉತ್ಪಾತಗಳಾದುವು. ಧೂಮಕೇತು ಕಾಣಿಸಿಕೊಂಡಿತಂ. ಇದನ್ನೆಲ್ಲ ಕಂಡ ದೇವತೆಗಳು ಚಿಂತಾಕ್ರಾಂತರಾದರು. ದೇವರ ಕೃಪೆಯಿಲ್ಲದಿರುವುದರಿಂದ ಜಗತ್ತಿಗೆ ಭಯಪ್ರಾಪ್ತಿಯಾಗಿದೆ. ಬ್ರಹ್ಮ ವಿಷ್ಣು ಇಂದ್ರನೇ ಮೊದಲಾದ ದೇವತೆಗಳೂ ಮುನಿಮುನಿಗಳೂ ತಮ್ಮನ್ನು ರಕ್ಷಿಸುವರಾರೋ ಎಂದು ಚಿಂತಿಸುತ್ತಿದ್ದರು. ಆ ಸಮಯಕ್ಕೆ ಸರಿಯಾಗಿ ನಾರದನು ಅಲ್ಲಿಗೆ ಬಂದರು. ಆಗ ದೇವೇಂದ್ರನೇ ಮೊದಲಾದ ದೇವತೆಗಳೆಲ್ಲ ನಾರದನಿಗೆ ನಮಸ್ಕರಿಸಿ ಈ ಉಪದ್ರವಕ್ಕೆ ಕಾರಣವನ್ನೂ ಅದರ ನಿವಾರಣೋಪಾಯವನ್ನೂ ತಿಳಿಸುವಂತೆ ಕೇಳಿಕೊಂಡರು. ಅದಕ್ಕೆ ನಾರದ "ಶಿವನು ಪಾರ್ವತಿಯೊಡನೆ ಕ್ರೀಡಾಮಗ್ನನಾಗಿ ಜಗತ್ತಿನ ನೆನಹನ್ನು ಮರೆತನು. ಆದರಿಂದ ಲೋಕವೆಲ್ಲವೂ ಭಯದಿಂದ ತಲ್ಲಣಿಸುತ್ತಿದೆ. ನೀವು ಅವರ ಕೂಟಕ್ಕೆ ವಿಘ್ನವನ್ನು ಮಾಡಿದರೆ ಬದುಕುವಿರಿ. ಇಲ್ಲದಿದ್ದರೆ ಪಾರ್ವತಿಯ ಗರ್ಭದಲ್ಲಿ ಮಗನೇನಾದರೂ ಜನಿಸಿದರೆ ನಿಮ್ಮ ಭಂಗಕ್ಕೆ ಮೇರೆಯೇ ಇರುವುದಿಲ್ಲ" ಎಂದನು. ನಾರದನಂ ಹೊರಟು ಹೋದ ಮೇಲೆ ದೇವೇಂದ್ರನು ದೇವತೆಗಳೊಡನೆ ವಿಷ್ಣುವಿನ ಬಳಿಗೆ ಬಂದು ಈ ವಿಷಯವನ್ನು ತಿಳಿಸಿದನು. ವಿಷ್ಣುವು "ಎಲೈ ಸುರಪನೆ, ನಮ್ಮ ಒಡೆಯನಾದ ಶಿವನು ಕಾಮಿಯಲ್ಲ. ಸರ್ವಬೋಧ, ಜಗದ್ರಕ್ಷಕ. ಈತನ ವೀರ್ಯದಿಂದ ಹುಟ್ಟುವ ಕುಮಾರ ತಾರಕನನ್ನು ಸಂಹರಿಸುತ್ತಾನೆ. ಗೌರೀದೇವಿಯಲ್ಲಿ ಹುಟ್ಟುವ ಈ ಕುಮಾರನು ನಮ್ಮೆಲ್ಲರನ್ನು ಕೊಲ್ಲುತ್ತಾನೆ. ಮಾರಾರಿಯ ಉಗ್ರತರದ ವೀರ್ಯವನ್ನು ಯಾರು ಧರಿಸಲು ದಕ್ಷರು? ವಿಚಾರ ಮಾಡಿ" ಎನ್ನಲು, ಅವರೆಲ್ಲರೂ ಯೋಚಿಸಿ "ಅಗ್ನಿ ಈ ಕಾರ್ಯಮಾಡಲು ಸಮರ್ಥ" ಎನ್ನಲು ಅಗ್ನಿಯನ್ನು ಈ ಕಾರ್ಯಕ್ಕೆ ಜತನದಿಂದ ಒಪ್ಪಿಸುತ್ತಿದ್ದರು. "ಅಗ್ನಿಯೇ ನೀನು ಹೋಗಿ ಹರಗಿರಿಜೆಯರ ರತಿಗೆ ಭಂಗತಂದರೆ ನಾವೆಲ್ಲ ಉಳಿಯುತ್ತೇವೆ" ಎನ್ನಲು; ವಿಷ್ಣುವೇ ಪರಮೇಶನ ಏಕಾಂತಕೂಟಕ್ಕೆ

ನನ್ನನ್ನು ಕಳಿಸುವುದಂ ಸೂಕ್ತವಲ್ಲ. ಧ್ಯಾನ, ಮಂತ್ರ, ಭೋಜನ, ಶಯನ, ಮದನ ಕ್ರೀಡೆ ಇವು ನಡೆಯುತ್ತಿರುವಲ್ಲಿಗೆ ಹೋಗುವುದು ನೀತಿಯಲ್ಲ. ನೀವು ನನ್ನನ್ನು ಇಂತಹ ಕಾರ್ಯಕ್ಕೆ ಕಳುಹುವುದು ಧರ್ಮವೆ? ನಾನು ಈ ಕಾರ್ಯ ಮಾಡಲಾರೆ'' ಎಂದನು. ಆಗ ವಿಷ್ಣು ''ಎಲೆ ವಹ್ನಿಯುತ್ತಮರುಂ ತಾ ಕೆಟ್ಟು ಪರರನಂತುಳುಹುವರು ಪರರ ಕಷ್ಟವೆ ತಮ್ಮದೆಂಬುವರು ಮಲಹರನ ತನುವಲ್ಲವೇ ನೀನು ಸಂದೇಹಮುಳಿದು ಪೋಪುದು ಧರ್ಮವೈ'' ಎಂದು ನಾನಾವಿಧವಾಗಿ ಧರ್ಮಬೋಧೆಯನ್ನು ಮಾಡಿದನು. ಉಳಿದವ ರೆಲ್ಲರೂ ಅಗ್ನಿಯನ್ನು ಸ್ತುತಿಸಿ ಪ್ರಾರ್ಥಿಸಲು ಅವನು ಆ ಕಾರ್ಯಕ್ಕೆ ಒಪ್ಪಿಕೊಂಡು ಮಂದರಾಚಲಕೈದಿ ನಂದೀಶ್ವರನನ್ನು ಕಾಣುತ್ತಲೆ ಭೀತಿಗೊಂಡನು. ಆತನ ಕಣ್ಣು ತಪ್ಪಿಸಿ ಒಳಕ್ಕೆ ಹೋಗುವುದು ಎಂತಂ ಎಂದು ಚಿಂತಿಸುತಿರುವಲ್ಲಿ ಪಾರ್ವತಿಯ ಕಣ್ಣು ಗಳಿಗೆ ಆಹ್ಲಾದವನ್ನುಂಟುಮಾಡುತ್ತಿದ್ದ ಪಕ್ಷಿಸಮೂಹವನ್ನು ನೋಡಿ ತಾನು ಹಂಸೆಯ ಆಕಾರವನ್ನು ತಾಳಿ ಒಳಕ್ಕೆ ಹೋದನು. ಅಲ್ಲಿ ಪಾರ್ವತಿಯ ವಾಹನವಾದ ಸಿಂಹವು ಮಹಾಸಿಡಿಲರವದಂತೆ ಗರ್ಜಿಸುತ್ತಿರಲು ಅದನ್ನು ಕೇಳಿದ ಅಗ್ನಿಯು ಹೆದರಿಕೊಂಡು ದೇವತೆಗಳಿದ್ದಲ್ಲಿಗೆ ಓಡಿಬಂದು ಎಲ್ಲವನ್ನು ಅವರಿಗೆ ವಿವರಿಸಿದನು. ಆಗ ವಿಷ್ಣು ಮತ್ತು ಬ್ರಹ್ಮದೇವತೆಗಳನ್ನು ಕೂಡಿಕೊಂಡು ಮಂದರಾಚಲಕ್ಕೆ ಬಂದು ಪರಶಿವನನ್ನು ಕುರಿತು ಪರಿಪರಿಯಾಗಿ ಸ್ತೋತ್ರಮಾಡಿದರು. ಅದರಿಂದ ಪ್ರಸನ್ನನಾದ ಪರಶಿವನಂ ಅವರ ಅಭೀಷ್ಟವೇನೆಂದು ಕೇಳಿದನು. ಅದಕ್ಕೆ ದೇವತೆಗಳು ''ದೇವಿಯರ ಗರ್ಭದೊಳ್ ಸುಕು ಮಾರನುದಿಸದೋಲೀ ವರವನಿತ್ತು ರಕ್ಷಿಸಬೇಹುದು'' ಎಂದು ಪ್ರಾರ್ಥಿಸಿಕೊಳ್ಳಲು ಶಂಕರನು ಸಹಸ್ರಾಬ್ದಪರಿಯಂತ ಕ್ರೀಡಿಸಿಯೆ ತೀವಿರ್ದ ರೇತಸ್ಸನೀಗ ಪೊರಗಿಡಲಾಗಿ ನೀವೆಲ್ಲರದರಿಂದ ಮೃತವಪ್ಪಿರಿ'' ಎಂದನು. ಅದನ್ನು ಕೇಳಿದ ದೇವತಗಳೆಲ್ಲ ಭಯದಿಂದ ತಲ್ಲಣಿಸಿ ಚಿಂತಾಕ್ರಾಂತರಾಗಿರಲು ಅಗ್ನಿಯು ಮುಂದೆ ಬಂದು ತಾನು ಶಿವನ ರೇತಸ್ಸನ್ನು ಕೊಳ್ಳವುದಾಗಿ ದೇವತೆಗಳನ್ನು ಸಮಾಧಾನ ಪಡಿಸಿ ಶಿವನ ಮುಂದೆ ಹೋಗಿ ವೀರ್ಯ ಭಿಕ್ಷೆಯನ್ನು ನೀಡಬೇಕೆಂದು ಬೊಗಸೆಯನ್ನೊಡ್ಡಿದನು. ಶಿವನು ವೀರ್ಯಭಿಕ್ಷೆಯನ್ನು ನೀಡಲು ಅದನ್ನು ತಾಳಿದ ಅಗ್ನಿ ಅದರ ಉರಿಯನ್ನು ತಾಳದೆ ಸಪ್ತಸಾಗರಗಳಲ್ಲಿ ಮುಳು ಗಿದನಂ. ಈ ವಿಷಯುವನ್ನು ಶಿವನು ಪಾರ್ವತಿಗೆ ಹೇಳಲು ಕುಮಾರೋದಯಕ್ಕೆ ಅಡ್ಡಿ ಬಂದ ದೇವತೆಗಳ ಮೇಲೆ ಕೋಪಗೊಂಡ ಪಾರ್ವತಿ ಬ್ರಹ್ಮ ವಿಷ್ಣು ದೇವೇಂದ್ರ ಮೊದಲಾದವರಿಗೆ ಎಂದೆಂದೂ ಮಕ್ಕಳಾಗದಿರಲೆಂದೂ ಅವರ ಹೆಂಡತಿಯರು ಬಂಜೆಯ ರಾಗಲೆಂದೂ ಶಾಪವನ್ನು ಕೊಟ್ಟಳು. ಅದನ್ನು ಕೇಳಿದ ದೇವತೆಗಳೆಲ್ಲ ಪಾರ್ವತಿಯನ್ನು ಪ್ರಾರ್ಥಿಸಿಕೊಳ್ಳಲು ''ಅಧ್ವರದ ಮಂತ್ರದಿಂದ ನಿಮಗೆ ಮಕ್ಕಳಾಗಲಿ'' ಎಂದಳು. ದೇವತೆ ಗಳು ಅಗ್ನಿಮುಖರಾದುದರಿಂದ ಅಗ್ನಿಯುಂ ಉಗುಳಿದ ರೇತಸ್ಸನ್ನು ಕೊಂಡು ಹೆಂಗಸರಂತೆ ಗರ್ಭಿಣಿಯರಾಗಿ ಐವತ್ತೆಂಟು ಸಾವಿರವರ್ಷ ಬಳಲಿ ಬೆಂಡಾಗಿ ಆ ಬಾಧೆಯನ್ನು ತಾಳಲಾ ರದೆ ಪರಶಿವನನ್ನು ಮೊರೆಹೊಕ್ಕರು. ದೇವತೆಗಳು ಪಾರ್ವತಿಯಲ್ಲಿ ಕುಮಾರನು

ಹುಟ್ಟಿದಂತೆ ಮಾಡಿದ್ದಕ್ಕಾಗಿ ಈ ಬಾಧೆಯನ್ನು ಅನುಭವಿಸಬೇಕಾಯಿತು ಎಂದು ಶಿವನು ಅವರನ್ನು ಸಮಾಧಾನಪಡಿಸಿ ಮೇರುವಿನ ಉತ್ತರಕ್ಕಿರುವ ಶರದಾವವೆಂಬ ವನದಲ್ಲಿರುವ ಶರವಣ ಕೊಳದಲ್ಲಿ ಧಾತುವನ್ನು ವಮನಮಾಡಿ ಉಪದ್ರವವನ್ನು ಕಳೆದುಕೊಳ್ಳುವಂತೆ ಹೇಳಿದನು. ಆ ಕೊಳದಲ್ಲಿ ರಾಶಿಯಾದ ಶುಕ್ಲವು ಕನಕಪ್ರಭೆಯಂತೆ ಬೆಳಗುತ್ತ ಅಲ್ಲಿದ್ದ ತರು ಗಿರಿ ತೃಣ ಗುಲ್ಮ ಖಗ ಮೃಗಗಳನ್ನೆಲ್ಲ ಕನಕಪ್ರಭೆಯುಕ್ತವಾಗಿಸಿತು. ಸುರರ ಬಾಧೆಯನ್ನು ಬಿಡಿಸಿದ ಶಿವನು ಪಿಂಗಳನೆಂಬ ಗಣಪನನ್ನು ಅಲ್ಲಿಗೆ ಕಾವಲಿಡಿಸಿದನು. ಬ್ರಹ್ಮ ವಿಷ್ಣು ದೇವೇಂದ್ರರೇ ಮೊದಲಾದವರು ಬಾಧೆಯಿಂದ ಮುಕ್ತರಾದರೂ ಅಗ್ನಿಗೆ ಅದರ ಕೋಟಲೆ ತಪ್ಪಲಿಲ್ಲ. ಅದರಿಂದ ಅಗ್ನಿ ಹರಿ ಮುಖ್ಯನಿರ್ಜರರನ್ನು ದೂಷಿಸಲು ಆಗ ನಾರಾಯಣ ಅವನಿಗೆ ಒಂದು ಉಪಾಯವನ್ನು ಹೇಳಿದನು. "ಸಪ್ತರ್ಷಿಗಳ ಹೆಂಡಿರು ನದಿಯ ತೀರಕ್ಕೆ ಬರುತ್ತಾರೆ. ನೀನು ಅಲ್ಲಿಗೆ ಹೋಗಿ ತೇಜಸ್ಸಿನಿಂದ ಉರಿಯುತ್ತಿರು. ಆ ಹೆಂಗಸರು ಚಳಿಗೆ ಭಯಪಟ್ಟು ನಿನ್ನಲ್ಲಿಗೆ ಬರುತ್ತಾರೆ. ನಿನ್ನನ್ನು ಮುಟ್ಟಿದಾಕ್ಷಣ ಅವರು ಗರ್ಭಧರಿಸುವರು. ಆಗ ನಿನ್ನ ಬಾಧೆ ಹೋಗುವುದು'' ಎಂದನು. ಅದರಂತೆ ಆ ಋಷಿಪತ್ನಿಯರು ಅಲ್ಲಿಗೆ ಬಂದರು. ಅವರಲ್ಲಿ ಅರುಂಧತಿಯನ್ನು ಬಿಟ್ಟು ಉಳಿದವರು ಅಗ್ನಿಯ ಸ್ಪರ್ಶವನ್ನು ಪಡೆದರು. ಅರುಂಧತಿ ಅಗ್ನಿ ಪುರುಷನೆಂದೂ ಆತನನ್ನು ಸೋಕುವುದು ಯೋಗ್ಯವಲ್ಲವೆಂದು ಹೇಳಿದರೂ ಉಳಿದ ಆರುಮಂದಿ ಅದನ್ನು ಕೇಳಲಿಲ್ಲ, ಅರುಂಧತಿ ಮರಳಿನಿಂದ ಬಿಂದಿಗೆಯನ್ನು ಮಾಡಿ ಹಾವಿನ ಸಿಂಬೆಯನ್ನು ಸುತ್ತಿ ಮಂಜಿನ ನೀರನ್ನು ತಂದು ಪತಿಸೇವೆಯಲ್ಲಿ ತೊಡಗಿದಳು. ಉಳಿದವರು ಬೆಂಕಿಯನ್ನು ಚೆನ್ನಾಗಿ ಕಾಯಿಸಿಕೊಂಡು ಆಮೇಲೆ ನೀರು ತರಲು ಮರಳಗಡಿಗೆ ಮಾಡಲು ಅದು ಸಾಧ್ಯವಾಗಲಿಲ್ಲ. ಹಾವನ್ನು ಸಿಂಬೆಮಾಡಲು ಹೋದಾಗ ಅವು ಭುಸ್ಸೆಂದು ಕಚ್ಚಲು ತೊಡಗಿದವು, ಅವರು ನಾಚಿಕೆಯಿಂದ ಆಶ್ರಮಕ್ಕೆ ಹಿಂತಿರುಗಿದರು. ಅವರ ಪತಿಗಳು ಅರುಂಧತಿಯಂತೆ ಪತಿವ್ರತೆಯಾಗಿ ಬಾರದೆ ಅಗ್ನಿಯನ್ನು ಸ್ಪರ್ಶಿಸಿ ಜಾರೆಯರಾದಿರೆಂದು ಅವರನ್ನು ಹೊರಕ್ಕಟ್ಟಿಬಿಟ್ಟರು. ಆ ಋಷಿಪತ್ನಿಯರು ಒಹಳವಾಗಿ ನೊಂದು ಪಾರ್ವತಿಯ ಬಳಿಗೆ ಬಂದು ನಮಸ್ಕರಿಸಿ ನಿಂತರು. ಪಾರ್ವತಿ ಅವರ ವೃತ್ತಾಂತವನ್ನು ಕೇಳಿ "ನೀವೆಲ್ಲ ಶರವಣ ಕೊಳಕ್ಕೆ ಹೋಗಿ ನಿಮ್ಮ ನಿಮ್ಮ ಹೊಟ್ಟೆಗಳನ್ನು ಸೀಳಿ ಒಳಗಿರುವ ಬೀಜವನ್ನು ಒಂದರ ಮೇಲೊಂದು ಇರಿಸಿರಿ. ಆಗ ನನ್ನ ಮಗ ಜನಿಸುತ್ತಾನೆ. ಅವನಿಗೆ ಮೊಲೆಗೊಟ್ಟು ಸಲಹಿ'' ಎಂದು ಹೇಳಿದಳು. ಅದರಂತೆ ಅವರು ವೀರ್ಯವನ್ನು ಮಡಗಲು ಅದು ಸಹಸ್ರವರ್ಷ ಗೆಣಸಿನಂತೆ ಇತ್ತು. ಸ್ಕಂದದಂತಿದ್ದುದರಿಂದ ಅವನಿಗೆ ಸ್ಕಂದನೆಂಬ ಹೆಸರಾಯಿತು. ಆರುತಲೆ ಒಂದು ದೇಹವಾಗಲು ಷಣ್ಮುಖನೆಂದು ಹೆಸರಿಟ್ಟರು. ಅದರಿಂದ ಅವನಿಗೆ ಕಾರ್ತಿಕೇಯನೆಂಬ ಹೆಸರು ಬಂದಿತು. ಕುಮಾರೋದಯದಿಂದ ದೇವತೆಗಳು ಭಯಗೊಂಡರು. ದಿಗ್ಗಜಗಳು ನಡುಗಿದವು. ಈ ವಿಷಯವನ್ನು ಪಿಂಗಳ ಗಣೇಶ್ವರನು ಬಂದು ಶಿವನಿಗೆ ತಿಳಿಸಲು ಶಿವನು ಪಾರ್ವತಿಯೊಡನೆ ಕುಮಾರನನ್ನು

ನೋಡಲು ಬಂದನು. ಕುಮಾರನನ್ನು ಅತ್ಯಂತ ಸಂತೋಷದಿಂದ ಎತ್ತಿ ಮುದ್ದಾಡಿದರು. ಅವನ ಲೀಲೆಗಳನ್ನು ನೋಡಿ ಆನಂದಭರಿತರಾದರು.

ಕುಮಾರನಿಗೆ ಐದನೆಯ ದಿನವಾಗುತ್ತಲೇ ಹರಿ ಅಜ ಅಮರೇಂದ್ರರೇ ಮೊದಲಾದವರನ್ನೆಲ್ಲ ಹಿಂಸಿಸಿ ನಗುತ್ತಿದ್ದನು. ಸೂರ್ಯನನ್ನು ಮಿಂಚುಹುಳುವಿನಂತೆಯೂ ಚಂದ್ರನನ್ನು ಬಿಲ್ಲೆಯಂತೆಯೂ ಮಾಡಿ ಆಡುತ್ತಿದ್ದನು. ಹೀಗೆ ಸಚರಾಚರಗಳನ್ನು ಬಾಧಿಸಿ ಬಾಲಲೀಲೆಯನ್ನಾಡುತ್ತಿರಲು ಅವನ ಬಾಲಲೀಲೆಗೆ ಅಂಜಿ ಎಲ್ಲರೂ ದೇವೇಂದ್ರನಿಗೆ ಬಿನ್ನೈಸಿದರು. ದೇವೇಂದ್ರನು "ಶಿಶುಹತ್ಯೆ ಮಹಾಪಾತಕ" ಎಂದನು. ಅದಕ್ಕೆ ದೇವತೆಗಳೆಲ್ಲ "ದುಷ್ಟನಿಗ್ರಹ ಶಿಷ್ಟಪರಿಪಾಲನಮಾಡುವುದು ನಿನ್ನ ಕರ್ತವ್ಯ. ಅವನು ಕೇವಲ ಶಿಶುವಲ್ಲ. ನಿನ್ನಂತಹ ಸಹಸ್ರ ಇಂದ್ರರು ಅವನ ಒಂದು ರೋಮಕ್ಕೂ ಸಾಟಿಯಲ್ಲ" ಎಂದು ರೇಗಿಸಿದರು. ಇಂದ್ರನು ಸನ್ನಾಹಭೇರಿಯನ್ನು ಹೊಡೆಸಿ ಸಮಸ್ತ ಬಲದೊಡನೆ ಶರವಣ ಪ್ರದೇಶಕ್ಕೆ ಬಂದು ಬೀಡುಬಿಟ್ಟನು. ಆ ಸಮಯದಲ್ಲಿ ನಾರದನು ಅಲ್ಲಿಗೆ ಬಂದು ಕುಮಾರನ ಉತ್ಪತ್ತಿಕ್ರಮವನ್ನು ತಿಳಿಸಿ ಅವನ ಪರಾಕ್ರಮವನ್ನು ವರ್ಣಿಸಿದನು. ಅದರಿಂದ ರೋಷಗೊಂಡ ಇಂದ್ರನು ಕುಮಾರನನ್ನು ಮುತ್ತಿ ಅಸ್ತ್ರಪ್ರಯೋಗಮಾಡಲು ಕುಮಾರನು ಲೀಲಾಜಾಲವಾಗಿ ಅವನ್ನು ನಿವಾರಿಸಿ ಎಲ್ಲರನ್ನು ಮೂರ್ಛೆಗೊಳಿಸಿದನು. ಕೊನೆಗೆ ದೇವೇಂದ್ರನೇ ಎದುರಾಗಲು ಅವನ ಐರಾವತವನ್ನು ಕೊಂದು ಇಂದ್ರನನ್ನು ಹೊಡೆದುರುಳಿಸಿದನು. ಆಗ ಬೃಹಸ್ಪತಿ ದೇವೇಂದ್ರನಿಗೆ ಬುದ್ಧಿವಾದವನ್ನು ಹೇಳಿ ಕುಮಾರನನ್ನು ಮೊರೆಹೋಗುವಂತೆ ತಿಳಿಸಿದನು. ಅದರಂತೆ ಇಂದ್ರನು ಕುಮಾರನಿಗೆ ಶರಣಾಗತನಾಗಿ ರಕ್ಷಿಸುವಂತೆ ಪ್ರಾರ್ಥಿಸಿಕೊಂಡನು. ಸುಪ್ರಸನ್ನನಾದ ಕುಮಾರನು ವರವನ್ನು ಕೇಳಿಕೋ ಎನ್ನಲು 'ನೀನು ಸೇನಾಪತಿಯಾಗಿ ನಮ್ಮೆಲ್ಲರನ್ನೂ ಕಾಪಾಡಬೇಕು' ಎಂದನು. ಕುಮಾರನು ಅದನ್ನು ಒಲ್ಲೆನೆಂದನು. ದೇವೇಂದ್ರನು ಚಿಂತಾಕ್ರಾಂತನಾಗಿ ಶಿವನ ಪಾದಧ್ಯಾನ ಮಾಡಲು ಶಿವನು ಪಾರ್ವತಿಯೊಡನೆ ಪುತ್ರನನ್ನು ನೋಡುವ ಅಪೇಕ್ಷೆಯಿಂದ ಬಂದು ಅವನನ್ನು ಮುದ್ದಾಡಲು ಆಗ ಇಂದ್ರನು ಬಂದು ಪರಶಿವನಿಗೆ ಬಿನ್ನೈಸಿಕೊಂಡನು. ಶಿವನು ನಂದೀಶನನ್ನು ನೋಡಲು ಅವನು ಷಣ್ಮುಖನಿಗೆ ತಾರಕಾಸುರನ ಸಂಗತಿಯನ್ನು ತಿಳಿಸಿದನು. ತಾರಕಾಸುರನು ಉಗ್ರತಪಸ್ಸನ್ನು ಮಾಡಲು ಬ್ರಹ್ಮನು ಅವನಿಗೆ ವರವನ್ನು ಕೇಳಿಕೊಳ್ಳುವಂತೆ ತಿಳಿಸುವನು. ಅದಕ್ಕೆ ಅವನು ಸುರನರೋರಗರೆನ್ನ ಬೆಂಬಳಿಯಲ್ಲಿರಬೇಕು. ಯಾರಿಂದಲೂ ತನಗೆ ಲಯವಿಲ್ಲದ ವರವನ್ನು ಕೊಡು ಎನ್ನಲು, ಬ್ರಹ್ಮನು ಪರಶಿವನನ್ನು ಬಿಟ್ಟು ಉಳಿದವರೆಲ್ಲ ಅನಿತ್ಯರು. ಆದುದರಿಂದ ನಿನಗೆ ಹೇಗೆ ಮರಣವುಂಟಾಗಬೇಕು ಎನ್ನಲು, ಪರಶಿವನ ವೀರ್ಯವನ್ನು ಅಗ್ನಿಮುಂತಾದವರು ಸೇವಿಸಿ ಶರವಣದಲ್ಲಿ ಉಗುಳಲು ಅಲ್ಲಿ ಉರಿಯುವ ಅಗ್ನಿಯನ್ನು ಕೃತ್ತಿಕೆಯರು ಕಾಸಲು ಅದರಿಂದ ಹುಟ್ಟಿದ ಷಡ್ವದನ ಇಂದ್ರನಿಗೆ ಸೇನಾನಿಯಾಗಿ ಹುಟ್ಟಿದ ಏಳುದಿನಗಳಲ್ಲಿ

ಕೊಂದರೆ ನನಗೆ ಸಾವು ಉಂಟಾಗುತ್ತದೆ ಎಂದನು. ಅದರಂತೆ ಬೇಕಾದ ವರಗಳನ್ನು ಪಡೆದ ತಾರಕನು ಸಪ್ತಸಾಗರಗಳ ದಡದಲ್ಲಿ ಮಯನಿಂದ ಪಟ್ಟಣವನ್ನು ರಚಿಸಿ ಅನೇಕ ಲೋಕಗಳನ್ನು ಹಾಳುಮಾಡುತ್ತ ತೊಂದರೆಯನ್ನುಂಟುಮಾಡುತ್ತಿದ್ದನು. ಆದುದರಿಂದ ಇಂದ್ರನ ಸೇನಾಪತಿಯಾಗಿ ತಾರಕನನ್ನು ಸಂಹರಿಸಬೇಕು ಎನ್ನಲು ಕುಮಾರನು ಅದನ್ನು ಅಂಗೀಕರಿಸಿದನು. ಯುದ್ಧಕ್ಕೆ ಸನ್ನದ್ಧರಾಗಿ ಸಮರಭೇರಿಯನ್ನು ಹೊಡೆಸಲು ತಾರಕನು ಸೈನ್ಯಸಮೇತ ಕುಮಾರನ ಮೇಲೆ ಬರಲು ಕುಮಾರನು ಅವನ ಬಲವನ್ನೆಲ್ಲ ಧೂಳೀಪಟಮಾಡಿ ಗೌರಿಯಿತ್ತ ಶಕ್ತ್ಯಾಯುಧವನ್ನು ತಾರಕನ ಮೇಲೆ ಪ್ರಯೋಗಿಸಲು ಅದು ಅವನ ಎದೆಯನ್ನು ಡೋರುಮಾಡಿ ಕೆಳಕ್ಕುರುಳಿಸಿತು. ಸುರರು ಪೂಮಳೆಗರೆದು ಕೊಂಡಾಡಿದರು. ಪಾರ್ವತಿ ಪರಮೇಶ್ವರರು ಮಗನನ್ನು ಮುಂಡಾಡಿದರು.

## ಏಕಪಾದಲೀಲೆ

ಈಶ್ವರನು ತನ್ನ ಶಕ್ತಿಯಿಂದ ಭೂಮಿ ಆಕಾಶ ಬ್ರಹ್ಮಾಂಡವನ್ನು ನಿರ್ಮಿಸಿದನು. ತನ್ನ ಬಲಗಡೆಯಲ್ಲಿ ಬ್ರಹ್ಮನನ್ನು ಹುಟ್ಟಿಸಿ ಭೂಮಿಗೆ ಅವನನ್ನು ಅಧಿದೈವಮಾಡಿದನು. ಎಡಭಾಗದಿಂದ ವಿಷ್ಣುವನ್ನು ಹುಟ್ಟಿಸಿ ಭೂಮಿಗಾಧಾರವಾದ ಜಲಕ್ಕೆ ಅಧಿಪತಿಯನ್ನು ಮಾಡಿ ಅಗ್ನಿಗೂ ಆಕಾಶಕ್ಕೂ ತಾನೇ ಒಡೆಯನಾದನು. ಹರಿಬ್ರಹ್ಮರು ರುದ್ರನಿಗೆ ಹೇಗೆ ಸೇವ್ಯರಾದರು ಎಂದರೆ ಅವನಿ ಮತ್ತು ಜಲ ಅಧೋಗಮನವುಳ್ಳವು. ಅಗ್ನಿಯನ್ನು ತಲೆಕೆಳಗುಮಾಡಿದರೂ ಊರ್ಧ್ವಗಮನವಾದುದು. ಆದುದರಿಂದ ರುದ್ರನೇ ಸರ್ವೇಶ್ವರನು. ಮೃತ್ಯುಂಜಯನೆ ಕರ್ತ. ಹರಿಯಜರು ಭೃತ್ಯರು. ಇದಕ್ಕೆ ಹಲವಾರು ದೃಷ್ಟಾಂತಗಳು ನಿರೂಪಿತವಾಗಿವೆ. ''ಶ್ರೀರುದ್ರನೀಶ್ವರಸದಾಶಿವಂ ಪರಶಿವಂ ಚಾರು ಚಾತುರ್ವಿದ್ಯಮೊಂದದಾಗೀ ಬ್ರಹ್ಮವೇ ರುದ್ರನಾಗಿರ್ಪನಾತನೇ ಏಕಪದಲೀಲೆಯೊಳ್ ಕರ್ತನೆನಿಪಂ'' ಎಂದನು. ಹರಿಹರರು ಒಂದೇ ಎಂಬುವವರ ಅಭಿಪ್ರಾಯವನ್ನು ಖಂಡಿಸಿ ''ಅಜ್ಞಾನಿಗಳ್ ಹೀನರು ತ್ರಿಮೂರ್ತಿಗಳನೊಂದೆಂಬರಲ್ತು ಹರಿಯಜರು ಲೆಂಕರು ರುದ್ರನೆ ತಾನೆ ಕರ್ತನು'' ಎಂದು ನಿರೂಪಿಸಿದನು. ಪರಶಿವನು ತನ್ನ ವಿಲಾಸದಿಂದ ಅವಯವಗಳನ್ನು ಬಿಗಿದು ಏಕಪಾದದಿಂದ ನಾಟ್ಯವನ್ನು ನಟಿಸಲು ಅವಯವಗಳಲ್ಲೆಲ್ಲಾ ಬೆವರಿನ ಹನಿಗಳು ಮೌಕ್ತಿಕದ ಮಣಿಗಳಂತೆ ಹೊಳೆಯುತ್ತ ಎಲ್ಲರನ್ನೂ ಭಯಪಡಿಸುತ್ತಿರಲು ಮಲ್ಲಿಗೆಯ ದಂಡೆಯಂತೆ ಶಿವನು ಅವನ್ನು ಶಿರಸ್ಸಿನಲ್ಲಿ ಧರಿಸಿದನು. ಗಂ ಎಂದರೆ ಗಗನ. ಆ ಗಗನದೊಳಗೆ ಗಮಿಸಿದ್ದರಿಂದ ಗಂಗಾ ಎಂಬ ಹೆಸರಾಯಿತು. ಅದನ್ನು ಧರಿಸಿದ್ದರಿಂದ ಗಂಗಾಧರ ಎಂಬ ಹೆಸರುಂಟಾಯಿತು. ಗಂಗೆಯನ್ನು ಶಿರದಲ್ಲಿ ಧರಿಸಿದ ಶಿವನು ತನ್ನ ಶಕ್ತಿಯಿಂದ ಅಂಡಬ್ರಹ್ಮಾಂಡಗಳನ್ನು ಸೃಷ್ಟಿಸಿದನು. ಆ ಅಂಡದೊಳಗೆ ಹರಿ ಅಮರೇಂದ್ರಕುಲ ನರೋರಗ ದೈತ್ಯ ಗಂಧರ್ವ ಯಕ್ಷಸಂಕುಲ ಉದಿಸಿತು. ಆದುದರಿಂದ ಜಗತ್ತಿಗೆಲ್ಲ ಜನಕನು ಈಶ್ವರನಲ್ಲದೆ ಬೇರೆ ಯಾರೂ ಇಲ್ಲ. ಗಂಗೆಯ ಉದ್ಭವವನ್ನು ಪಾರ್ವತಿಗೆ ಶಿವನು ಹೇಳಿದನು. ಪೂರ್ವಕಲ್ಪಾಂತದಲ್ಲಿ

ರತ್ನಸಿಂಹಾಸನದಲ್ಲಿ ಆರೂಢನಾಗಿದ್ದಾಗ ಕಾಳಿ ತನ್ನ ಕಣ್ಣುಗಳನ್ನು ಎರಡೂ ಕೈಗಳಿಂದ ಮುಚ್ಚಿದಳು. ಆಗ ಅಗ್ನಿನೇತ್ರವನ್ನು ತೆರೆಯಲು ಅದರ ಜ್ವಾಲೆ ಹಿಮವಂತನನ್ನು ಸುಡುತ್ತಿದ್ದುದನ್ನು ಕಂಡ ಪಾರ್ವತಿ ತನ್ನ ತಂದೆಗೆ ಸಂಕಟವಾಯಿತೆಂದು ಭಾವಿಸಿ ಉರಿಗಣ್ಣನ್ನು ತೆರೆದುದಕ್ಕೆ ಕಾರಣವನ್ನು ಕೇಳಿದಳು. ''ಎಲೈ ಪಾರ್ವತಿಯೆ ನೀನು ನನ್ನ ಕಣ್ಣುಗಳನ್ನು ಮುಚ್ಚಿದ್ದರಿಂದ ಚಂದ್ರಸೂರ್ಯರು ಜಗತ್ತಿಗೆ ಇಲ್ಲದಂತಾದರು. ನೀನು ಮುಚ್ಚಿದ್ದು ಒಂದು ನಿಮಿಷವಾದರೂ ಜಗತ್ತಿಗೆ ಬಹಳಕಾಲವಾಯಿತು. ಲೋಕವನ್ನು ರಕ್ಷಿಸುವುದಕ್ಕಾಗಿ ಕಣ್ಣು ತೆರೆದೆ. ಮತ್ತು ನಿನ್ನಯ ಕೈಬೆರಳುಗಳು ತುಂಬ ಮೃದು. ಅವು ನೊಂದಾವೆಂದು ಉರಿಗಣ್ಣು ತೆರೆದೆ'' ಎಂದನು. ಪಾರ್ವತಿ ''ನಮ್ಮಯ್ಯ ನುರಿದಪ'' ಎನ್ನಲು, ಕಣ್ಣನ್ನು ಮುಚ್ಚಿ ''ನಿನ್ನ ತಂದೆಗೆ ಏನೂ ಭಯವಿಲ್ಲ'' ಎಂದನು. ಮುಂದೆ ದಶಾಂಗುಲಿಗಳಿಂದ ದಶಗಂಗೆಯಾದ ವಿವರಗಳನ್ನು ತಿಳಿಸಿದನು. ಬ್ರಾಹ್ಮಿ, ಮಂದಾಕಿನಿ, ಭೋಗವತಿ, ಕುದ್ದಾಲೆ, ಬ್ರಹ್ಮೋಕ್ತೆ, ಸುರಸೆ, ಅಘನಾಶಿನಿ, ಪ್ರವಾಹೆ ಎಂಬ ಏಳುಗಂಗೆಗಳು ಭೂಲೋಕ ನಾಗಲೋಕಗಳಲ್ಲಿ ಸಂಚರಿಸುತ್ತವೆ. ಈ ನದಿಗಳು ಧರೆ ಪಾತಾಳಗಳನ್ನು ಭೇದಿಸಿಕೊಂಡು ಅನಾಹುತವನ್ನು ಮಾಡಲು ಬ್ರಹ್ಮ ವಿಷ್ಣು ಮೊದಲಾದ ದೇವತೆಗಳು ಆ ಜಲಪ್ರಳಯವನ್ನು ತಡೆಯುವಂತೆ ಪರಶಿವನಿಗೆ ಮೊರೆ ಯಿಟ್ಟರು. ಶಂಕರನು ಅವರನ್ನೆಲ್ಲ ಸಂತೈಸಿ ಗಂಗೆಯನ್ನು ಶ್ರೀಮಕುಟತಟಜಟಾಪಟ ಲಾಗ್ರದಲ್ಲಿ ಹಿಮಕಣದಂತೆ ಧರಿಸಿದನು. ಗಂಗೋದಕವಿಲ್ಲದಿರಲು ಜಗತ್ತು ಹೇಗೆ ಜೀವಿಸುವುದು, ಭೂಮಿ ಹೇಗೆ ನಿಲ್ಲುವುದು ಎಂದು ಕೇಳಲು ಶಿವನ ಪಂಚಾಸ್ಯದಿಂದ ಧರೆ ಜಲ ದಹನ ಪವನ ಅಂಬರಗಳು ಉದಿಸಿದವು. ಅದರಿಂದ ಅಜಾಂಡ ಹುಟ್ಟಿತು. ಪರಶಿವನು ಪಂಚತನ್ಮಾತ್ರಗಳಿಂದ ಪಂಚಭೂತಂಗಳನ್ನು ಸೃಜಿಸಿದನು. ಚಿತ್ತಜಾಂತಕನು ಆತ್ಮನನ್ನು ಸೃಜಿಸಿದನು. ಆತ್ಮನಿಂದ ಗಗನ, ಗಗನದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಧರೆ, ಧರೆಯಿಂದ ಓಷಧಿಗಳು, ಓಷಧಿಗಳಿಂದ ಅನ್ನ, ಅನ್ನದಿಂದ ಜೀವ, ಜೀವದಿಂದ ಚರಾಚರ ಜನನವಾಯಿತು. ಪಿಂಡ ಬ್ರಹ್ಮಾಂಡ ಸೃಷ್ಟಿ ವಿಲಯಗಳಿಗೆ ಜಲವೇ ಕಾರಣ. ಇದನ್ನು ಅರಿಯದ ಅಜ್ಞಾನಿಗಳು ವಿಷ್ಣುವಿನ ಕಾಲೊಳಗೆ ಗಂಗೆ ಹುಟ್ಟಿತೆಂದು ಬೊಗಳುವರು. ಹರಿಬ್ರಹ್ಮರು ತಮ್ಮ ಸಂಶಯ ನಿವಾರಣೆಯಾಯಿತೆಂದು ಶಿವನಿಗೆ ಹೇಳಲು ಶಿವನು ಜಟೆಯಿಂದ ಗಂಗೆಯನ್ನು ಬಿಡಲು ಅವು ಚತುರ್ಮುಖವಾಗಿ ಹರಿದು ನಾಲ್ಕು ನದಿಗಳಾದುವು. ಅವು ಸೀತೆ, ನಂದೆ, ಭದ್ರೆ ಮತ್ತು ಸೋಮೆ. ಈ ನದಿಗಳು ಪುಣ್ಯನದಿಗಳೆನಿಸಿ ತಮ್ಮನ್ನು ಕೀರ್ತಿ ಸುವವರ ಪಾಪಪರಿಹಾರಮಾಡುತ್ತ ಸಮುದ್ರವನ್ನು ಸೇರುತ್ತವೆ.

ಶಿವನ ಮಸ್ತಕದಲ್ಲಿರುವ ಗಂಗೆ ಭೂಲೋಕಕ್ಕೆ ಬಂದು ಕಾಶಿಯಲ್ಲಿ ಭಾಗೀರಥಿ ಎಂಬ ಹೆಸರನ್ನು ಪಡೆದ ಕಥೆ. ಷಟ್ಚಕ್ರವರ್ತಿಗಳಲ್ಲಿ ಒಬ್ಬನಾದ ಸಗರ ಮಹಾರಾಜನಿಗೆ ಇಬ್ಬರು ಹೆಂಡತಿಯರು. ಅವರಿಗೆ ವಸಿಷ್ಠ ವಿಶ್ವಾಮಿತ್ರರು ಗುರುಗಳು. ವಸಿಷ್ಠ

ಮುನಿ ಬಂದಾಗ ಹಿರಿಯ ಪಟ್ಟದರಾಣಿ ಅವರನ್ನು ಸತ್ಕರಿಸಲು 'ನಿನ್ನಿಷ್ಟವೇನು' ಎಂದು ಕೇಳಲು 'ನನ್ನ ಸವತಿ ದುಷ್ಟೆ. ಅವಳಿಗೆ ಹುಟ್ಟುವ ಮಕ್ಕಳಿಗಿಂತ ಮಿಗಿಲಾದ ಮಗನನ್ನು ನನಗೆ ಕರುಣಿಸಬೇಕು' ಎಂದು ಕೇಳಿಕೊಂಡಳು. ಅದರಂತೆ ಆಕೆಗೆ ವರವನ್ನು ಕೊಟ್ಟು ಹೋಗಲು ಕಾಲಕ್ರಮದಲ್ಲಿ ಆಕೆಗೆ ಪುತ್ರನು ಹುಟ್ಟಲು ಅವನನ್ನು ಸಂತೋಷದಿಂದ ಸಲಹುತ್ತಿದ್ದಳು. ಇದನ್ನು ಕಂಡ ಕಿರಿಯ ಪಟ್ಟದರಾಣಿ ವಿಶ್ವಾಮಿತ್ರನನ್ನು ನೆನೆದಳು. ಕೂಡಲೆ ಅಲ್ಲಿಗೆ ಬಂದ ಗುರುವಿಗೆ ನಮಸ್ಕಾರಮಾಡಿ ಸ್ತುತಿಸಲು ಅವರು 'ನಿನ್ನಿಷ್ಟವೇನು' ಎನ್ನಲು 'ನನ್ನ ಸವತಿ ದೊಡ್ಡಗುರುವಿನ ಶಿಷ್ಯಳಾದುದರಿಂದ ದನುಜನಂದದ ಮಗನನ್ನು ಪಡೆದಳು. ನಾನಾದರೂ ಬಡಗುರುವಿನ ಶಿಷ್ಯಳು. ನನಗೆ ಪುತ್ರಸಂತಾನವಿಲ್ಲ ''ಎಂದಳು. ಅದನ್ನು ಕೇಳಿದ ವಿಶ್ವಾಮಿತ್ರ ಅತ್ಯಂತ ಕೋಪವನ್ನು ತಾಳಿ ತಾನು ಬಡವನೇ, ತನ್ನ ಮಹಿಮೆಯನ್ನು ದಾನವಾಂತಕನೇ ಮೊದಲಾದ ನಿರ್ಜರರೆಲ್ಲ ಬಲ್ಲರು. ತ್ರಿಶಂಕುವಿಗೆ ಸ್ವರ್ಗಭೋಗವನ್ನು ಕೊಡಲಾರದ ವಸಿಷ್ಠ ಎಂತಹ ದೊಡ್ಡವನು ಎಂದು ಗುಡುಗಿ ''ವಸಿಷ್ಠ ನಿನ್ನ ಸವತಿಗೆ ಒಬ್ಬ ಮಗನನ್ನು ಕೊಟ್ಟರೆ ನಾನು ನಿನಗೆ ಅರವತ್ತುಸಾವಿರ ಮಕ್ಕಳಾಗುವ ವರವನ್ನು ಕೊಡುತ್ತೇನೆ'' ಎಂದು ಹೇಳಿ ಆ ವರವನ್ನು ಕೊಟ್ಟನು. ಅದರಂತೆ ಅವಳು ಅರುವತ್ತುಸಾವಿರ ಮಕ್ಕಳನ್ನು ಪಡೆದಳು. ಮೊದಲ ಅರಸಿಯ ಮಗ ಅಸಮಂಜಸನಿಗೆ ಹದಿನಾಲ್ಕು ವರ್ಷವಾಗಲು ಅವನಿಗೆ ಮದುವೆಯನ್ನು ಮಾಡಿದರು. ಅವನು ದುಷ್ಟನಾಗಿ ಪುರಜನರನ್ನು ಹಿಂಸಿಸುತ್ತಿದ್ದುದರಿಂದ ಧರ್ಮಜ್ಞರ ಮಾತಿನಂತೆ ಅವನನ್ನು ಊರುಬಿಟ್ಟು ಹೊರಡಿಸಿದರು. ಅವನ ಹೆಂಡತಿ ಮಗನನ್ನು ಪಡೆಯಲು ಅವನಿಗೆ ಅಂಶುಮಾನ್ ಎಂದು ನಾಮಕರಣ ಮಾಡಿ ಕ್ರಮೇಣ ಅವನಿಗೆ ಸಕಲವಿದ್ಯೆಗಳನ್ನು ಕಲಿಸಿದರು. ಸಗರನು ಸದ್ಗತಿಯನ್ನು ಪಡೆಯಲು ಶತಕ್ರತುಗಳನ್ನು ಮಾಡಲು ನಿರ್ಧರಿಸಿ ತೊಂಬತ್ತುಯಾಗಗಳನ್ನು ಮಾಡಿದನು. ಸಗರನಿಗೆ ತೊಂಬತ್ತು ವರ್ಷವಾಗಲು ಸ್ವರ್ಗಭೋಗವನ್ನು ಪಡೆಯುವ ಉದ್ದೇಶದಿಂದ ತೊಂಬತ್ತೊಂಬತ್ತು ಯಾಗಗಳನ್ನು ಮಾಡಿದನು. ಕೊನೆಯದಾದ ನೂರನೆಯ ಯಾಗಕ್ಕೆ ಕುದುರೆಯನ್ನು ಸಿದ್ಧಪಡಿಸಿ ಅದನ್ನು ಬಿಟ್ಟು ಅತಿಯಾದ ದಾನಧರ್ಮಗಳನ್ನು ಮಾಡಿದನು. ಇದನ್ನು ಅರಿತ ಇಂದ್ರನು ಮನಸ್ಸಿನಲ್ಲಿಯೇ ಚಿಂತಿಸಿ ಚಿತ್ರವರ್ಮನಿಗೆ ಆ ಯಾಗದ ಕುದುರೆಯನ್ನು ಕದ್ದುತರುವಂತೆ ಹೇಳಿದನು. ಅದರಂತೆ ಅವನು ಕುದುರೆಯನ್ನು ಕದ್ದು ಸ್ವರ್ಗಕ್ಕೆ ತಂದನು. ಕುದುರೆ ಕಳುವಾದುದನ್ನು ಭಟರು ಸಗರ ಚಕ್ರವರ್ತಿಗೆ ತಿಳಿಸಲು ಇದು ಇಂದ್ರನ ಕಾರ್ಯವೆಂದು ಅರಿತು ತನ್ನ ಕುಮಾರರಿಗೆ ಈ ವಿಷಯವನ್ನು ತಿಳಿಸಲು ಅವರು ಸ್ವರ್ಗಕ್ಕೆ ದಾಳಿಯನ್ನಿಟ್ಟರು. ಈ ಸುಳಿವನ್ನು ಅರಿತ ಇಂದ್ರನು ಕುದುರೆಯನ್ನು ಭೋಗಾವತಿಗೆ ಕೊಂಡುಹೋಗುವಂತೆ ಚಿತ್ರವರ್ಮನಿಗೆ ತಿಳಿಸಲು ಅವನು ಹಾಗೆಯೇ ಮಾಡಿದನು. ಸಗರಪುತ್ರರು ದೇವಲೋಕವನ್ನೆಲ್ಲ ಹುಡುಕಿದರೂ ಕುದುರೆ ಸಿಕ್ಕದಿರಲು ಆ ವಿಷಯವನ್ನು ಸಗರನಿಗೆ ತಿಳಿಸಿದರು. ಸಗರನು ಪಾತಾಳಲೋಕಕ್ಕೆ

ಹೋಗಿ ಕುದುರೆಯನ್ನು ಹುಡುಕುವಂತೆ ಹೇಳಲು ಅವರು ಭೂಮಿಯನ್ನೇ ಅಗೆದು ಪಾತಾಳಲೋಕವನ್ನು ಪ್ರವೇಶಿಸಿದರು. ಅಲ್ಲಿಯ ಭೋಗಾವತೀ ಪಟ್ಟಣವನ್ನು ಮುತ್ತಲು ಸಗರ ಪುತ್ರರಿಗೂ ನಾಗಲೋಕದವರಿಗೂ ಭಯಂಕರ ಯುದ್ಧವಾಗುವುದು. ಆದಿಶೇಷನಿಗೆ ಈ ವಿಷಯ ತಿಳಿಸಲು ಆವನು ಚಿತ್ರವರ್ಮನನ್ನು ವಿಚಾರಿಸಲು "ಈ ಕುದುರೆಯ ನಿಮಿತ್ತ ನಾಗಗಳಿಗೆಲ್ಲ ಪ್ರಾಣಹಾನಿಯಾಗುವುದು ವಿಹಿತವಲ್ಲ ನಾನು ಅದೃಶ್ಯ ಕರಣದ ವಿದ್ಯೆಯಿಂದ ಈ ಕುದುರೆಯನ್ನು ಸಗರ ಪುತ್ರರಿಗೆ ತೋರಿಸಿ ಕೊಂಡೊಯ್ಯುವೆ" ಎಂದನು. ಸಗರ ಪುತ್ರರು ಕುದುರೆಯನ್ನು ನೋಡುತ್ತಲೇ ಕಳ್ಳನನ್ನು ಹಿಡಿಯಿರಿ ಎಂದು ಕೂಗಾಡಲು ಚಿತ್ರವರ್ಮನು ಆ ಕುದುರೆಯನ್ನು ಕಪಿಲಮುನಿಯು ತಪಸ್ಸುಮಾಡುತ್ತಿದ್ದ ಎಡೆಗೆ ಕೊಂಡೊಯ್ದು ಆ ಮುನಿಯ ಹಿಂದೆ ಆ ಕುದುರೆಯನ್ನು ಕಟ್ಟಿಹೋದನು. ಈ ವಾರ್ತೆಯನ್ನು ಕೇಳಿದ ಸಗರ ಪುತ್ರರು ಕಪಿಲಮುನಿಯ ಆಶ್ರಮಕ್ಕೆ ಬಂದು ಅಲ್ಲಿದ್ದ ಕುದುರೆಯನ್ನು ನೊಡಿ ಮುತ್ತಿಕೊಳ್ಳಲು ಆ ಗದ್ದಲವನ್ನು ಕೇಳಿದ ಕಪಿಲಮುನಿ ಕಣ್ಣುಗಳನ್ನು ತೆರೆಯಲು ಸಗರಪುತ್ರರೆಲ್ಲ ಸುಟ್ಟು ಬೂದಿಯಾದರು. ಮಕ್ಕಳು ಬಾರದುದಕ್ಕೆ ಚಿಂತಾಕ್ರಾಂತನಾದ ಸಗರನು ತನ್ನ ಮೊಮ್ಮಗನಾದ ಅಂಶುಮಂತನಿಗೆ ಈ ವಿಷಯವನ್ನು ತಿಳಿಸಿ ಪಾತಾಳಲೋಕಕ್ಕೆ ಹೋಗಿ ತನ್ನ ಚಿಕ್ಕಪ್ಪಂದಿರನ್ನು ಹುಡುಕಿ ಕೊಂಡು ಬರುವಂತೆ ಹೇಳಿದನು. ಅಂಶುಮಂತನು ವಿಚಾರಮಾಡುತ್ತ ಧ್ಯಾನಮಗ್ನ ನಾಗಿದ್ದ ಕಪಿಲಮುನಿಯ ಬಳಿಗೆ ಬಂದು ನಮಸ್ಕರಿಸಿದನು. ಕಪಿಲಮುನಿ ಆತನ ವಿಷಯವನ್ನು ಕೇಳಲು ಸಗರ ಪುತ್ರರು ಬೆಂದು ಬೂದಿಯಾದುದನ್ನು ತಿಳಿಸಿದನು. ಅಂಶುಮಂತ ಅವರನ್ನು ಕಾಪಾಡಬೇಕೆಂದು ಕಪಿಲಮುನಿಯನ್ನು ಪ್ರಾರ್ಥಿಸಿಕೊಂಡನು. ಆದಕ್ಕೆ ಕಪಿಲಮುನಿ ಶಿವನ ಮುಕುಟದ ಗಂಗೆ ಇವರ ಮೇಲೆ ಹರಿದರೆ ಇವರು ಸ್ವರ್ಗಸ್ಥ ರಾಗುವರು ಎಂದನು. ಅಂಶುಮಂತನು ಹಿಂತಿರುಗಿ ಈ ವಿಷಯವನ್ನು ಸಗರನಿಗೆ ತಿಳಿಸಲು ಆತನು ಅಂಶುಮಂತನಿಗೆ ಪಟ್ಟವನ್ನು ಕಟ್ಟಿ ಐವತ್ತುವರ್ಷಗಳು ತಪಸ್ಸನ್ನು ಮಾಡಿ ಸ್ವರ್ಗಸ್ಥನಾದನು. ಆ ಮೇಲೆ ಅಂಶುಮಂತನು ತನ್ನ ಮಗನಾದ ಖಟ್ವರನಿಗೆ ಪಟ್ಟವನ್ನು ಕಟ್ಟಿ ತಾನೂ ಐವತ್ತು ವರ್ಷತಪಸ್ಸು ಮಾಡಿ ಮರಣವೈದಿದನು. ಖಟ್ವರ ತನ್ನ ಮಗ ದಿಲೀಪನಿಗೆ ಪಟ್ಟವನ್ನು ಕಟ್ಟಿ ಐವತ್ತುವರ್ಷ ತಪಸ್ಸುಮಾಡಿ ಮಡಿದನು. ದಿಲೀಪನು ತನ್ನ ಮಗನಾದ ಭಗೀರಥನಿಗೆ ಪಟ್ಟವನ್ನು ಕಟ್ಟಿ ತಪವನ್ನು ಮಾಡಿ ಪ್ರಾಣ ತ್ಯಾಗಮಾಡಿದನು. ಭಗೀರಥನೂ ತನ್ನ ಮಗನಿಗೆ ಭೂಭಾರವನ್ನು ವಹಿಸಿ ತನ್ನ ತಾತಂದಿರಂತೆ ವ್ಯರ್ಥವಾಗಿ ಸಾಯಬಾರದೆಂದು ಉಗ್ರವಾದ ತಪವನ್ನಾಚರಿಸಿದನು. ಆತನ ತಪಸ್ಸಿಗೆ ಮೆಚ್ಚಿದ ಪರಶಿವನು ಅವನ ಇಷ್ಟವೇನೆಂದು ಕೇಳಲು ತನ್ನ ಪಿತೃಗಳಾದ ಅರುವತ್ತುಸಾವಿರ ಸಗರರು ಕಪಿಲಮುನಿಯ ಶಾಪದಿಂದ ಅಳಿದುದನ್ನು ಹೇಳಿ ಅವರನ್ನು ಕಾಪಾಡಲು ಮಸ್ತಕಾಗ್ರದ ಗಂಗೆಯನ್ನು ಬಿಂದು ಸಂಗಮಾತ್ರದಿಂದ ದಯ

ಪಾಲಿಸಬೇಕೆಂದು ಪಾರ್ಥಿಸಿಕೊಂಡನು. "ನರಸುರೋರಗ ಯಕ್ಷ ಗರುಡ ಗಂಧರ್ವಾದಿ
ಚೌಶೀತಿ ಜೀವತತಿ ಇರದೆಸಗಿದಖಿಳ ಪಾಪಗಳ ಸ್ಪರ್ಶನದಿಂದ ಪರಿಹರಿಸಿ ಸದ್ಗತಿಯನು
ಕರುಣಿಸು" ಎಂದು ಕೇಳಿಕೊಂಡನು. ಭಗೀರಥನ ಪ್ರಾರ್ಥನೆಯಂತೆ ಗಂಗೆ ಹರನ
ಮಕುಟದಿಂದಿಳಿಯಲು ಶಿವನ ಹಣೆಯ ಭಸ್ಮ ಅದನ್ನು ಪಾನಮಾಡಿಬಿಟ್ಟಿತು. ಅದರಿಂದ
ಕಂಗೆಟ್ಟ ಭಗೀರಥ ಮತ್ತೆ ಹನ್ನೆರಡು ಸಾವಿರವರ್ಷ ತಪಸ್ಸು ಮಾಡಿದ. ಪ್ರತ್ಯಕ್ಷನಾದ
ಪರಶಿವನಿಗೆ ಮತ್ತೆ ಗಂಗೆಯನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಿಕೊಂಡ ಪರಶಿವ
ಉಗುರುಗಳ ಕೊನೆಯಿಂದ ಹನಿರೂಪವಾಗಿ ಗಂಗೆಯನ್ನು ಹರಿಸಿದ. ಅದು ಭಗೀರಥನ
ಹಿಂದೆ ಬಂದದ್ದರಿಂದ ಭಾಗೀರಥಿಯೆನಿಸಿತು. ಗಂಗೆ ಉಕ್ಕಿ ಹರಿಯುತ್ತ ಜಹ್ನುಋಷಿಯ
ಆಶ್ರಮವನ್ನು ಪ್ರವೇಶಿಸಲು ತನ್ನ ಯಜ್ಞಕ್ಕೆ ಅಡ್ಡಿಯುಂಟಾಗುವುದೆಂದು ಆತನು
ಒಕ್ಕುಡಿತೆಯಿಂದ ಅದನ್ನು ಪಾನಮಾಡಿಬಿಟ್ಟನು. ಭಗೀರಥ ಪರಶಿವನನ್ನು ಕುರಿತು
ಸಾವಿರವರ್ಷ ತಪಸ್ಸುಮಾಡಲು ಈಶ್ವರನು ಪ್ರತ್ಯಕ್ಷನಾಗಿ ಮತ್ತೇಕೆ ತಪಸ್ಸನ್ನು
ಮಾಡಿದೆ ಎನ್ನಲು ಆತನು ನಡೆದ ಸಂಗತಿಯನ್ನು ತಿಳಿಸಿದನು. ಈಶ್ವರ ಆ ಮುನಿಯನ್ನೇ
ತಪಸ್ಸಿನಿಂದ ಒಲಿಸಿಕೋ ಎನ್ನಲು ಅಂತೆಯೇ ಮಾಡಿ ಆ ಮುನಿಯ ಜಾನುವಿನಿಂದ
ಮತ್ತೆ ಗಂಗೆಯನ್ನು ಪಡೆದನು.

ಎಲ್ಲ ಶಾಸ್ತ್ರಗಳು ಗಂಗೆ ಶಿವನಿಂದ ಹುಟ್ಟಿದಳು ಎಂದು ಹೇಳುತ್ತಿರುವಾಗ
ವಿಷ್ಣುವಿನ ಕಾಲಲ್ಲಿ ಗಂಗೆ ಹುಟ್ಟಿತು ಎಂದು ಯುಕ್ತಿಹೀನರು ನುಡಿಯುತ್ತಾರೆ.
ಭೃಗುವಿನ ಶಾಪದಿಂದ ಬಹುಜನ್ಮಗಳನ್ನು ಪಡೆದ ವಿಷ್ಣು ಬಲಿಯು ಭೂದಾನವನ್ನು
ಕೊಡುವಾಗ ಕಾಲನ್ನು ಆಕಾಶಕ್ಕೆ ಚಾಚಲು ಬ್ರಹ್ಮನು ಅವನ ಪಾದವನ್ನು ತೊಳೆದನು.
ವಿಷ್ಣುವಿನ ಪಾದದಿಂದ ಗಂಗೆ ಉದ್ಭವಿಸಿತು. ಅದನ್ನು ಶಿವನು ತಲೆಯಲ್ಲಿ ದೇವತೆಗಳ
ಪ್ರಾರ್ಥನೆಯಂತೆ ತಳೆದನು ಎಂಬುವವರಿಗೆ ಈರೀತಿ ಹೇಳಿದೆ. ಬ್ರಹ್ಮನು ವಿಷ್ಣುವಿನ
ಪಾದವನ್ನು ತೊಳೆಯುವುದಕ್ಕೆ ಮೊದಲೇ ಕಮಂಡಲಲ್ಲಿ ಜಲವಿರಲಿಲ್ಲವೆ? ಅಗಸ್ತ್ಯನು
ಸಮುದ್ರಪಾನಮಾಡಲು ಅಂಗೈಯಲ್ಲಿ ಜಲವನ್ನು ಕೊಂಡಾಗ ಮತ್ಸ್ಯನು ಅದರಲ್ಲಿರ
ಲಿಲ್ಲವೆ? ಗಂಗೆಯ ತೀರದಲ್ಲಿ ವರಾಹನನ್ನು ಕೊಂದಾಗ ಗಂಗೆಯು ಇರಲಿಲ್ಲವೆ?
ಮೊದಲು ವರಾಹವತಾರ ಆಮೇಲೆ ವಾಮನಾವತಾರವಲ್ಲವೆ? ಶಿವನು ತನ್ನ ಪಂಚಾಸ್ಯ
ದಿಂದ ಪಂಚತತ್ವಗಳನ್ನು ಕಲ್ಪಿಸಿ ಅದರಲ್ಲಿ ಬ್ರಹ್ಮಾಂಡವನ್ನು ನಿರ್ಮಿಸಿ
ವಿಷ್ಣುವಿಗೆ ಸ್ಥಿತಿಕರ್ಮವನ್ನೂ ಜಲಕ್ಕೆ ಅಧಿದೈವನೆಂದೂ ನೇಮಿಸಲಿಲ್ಲವೆ? ಇದೇರೀತಿ
ಹಲವಾರು ದೃಷ್ಟಾಂತಗಳನ್ನು ಕೊಟ್ಟು ಹರಿಪದೋದ್ಭವೆ ಗಂಗೆ ಎಂಬುದು ಮಿಥ್ಯೆ
ಎಂದು ಸ್ಥಾಪಿಸಿದ್ದಾನೆ. ಶಿವನ ದೇಹ ಪಾವನವಾದುದರಿಂದ ರುದ್ರಾಕ್ಷಿ ಒಗೆದುವು.
ಶಿವನು ಸದಮಳ ಸಚ್ಚಿದಾನಂದಾನಂದ ಲಕ್ಷಣನೆಂದೂ ಶಿವನಿಗೆ ಹೊರತಾಗಿ ಅನ್ಯ
ವಿಲ್ಲೆಂದೂ ಪುರಾಣಗಳು ಸಾರುತ್ತಿವೆ. ಇದನ್ನು ಅರಿಯದೆ ನುಡಿಯುವವರು ನರಕಿಗಳು.
ಶಿವನ ದೇಹ ಸಾವಯವ ನಿರವಯವ. ವಿಧಿಹರಿಗಳ ಶರೀರಗಳು ಪ್ರಾಕೃತಗಳು. ಶಿವನ

ದೇಹ ಪಾವನ. ಅದರಲ್ಲಿ ಸಕಲ ತೀರ್ಥಗಳೂ ಅಡಗಿವೆ. ಶಿವನ ಪಾದಾಂಗುಷ್ಠದಿಂದ ಚತುಷ್ಪಷ್ಟಿ ಭುವನ ಪಾವನ ತೀರ್ಥಗಳು ಹುಟ್ಟಿದುವು. ಶಿವನ ಜಟೆಯಿಂದ ಭಗೀರಥ ಗಂಗೆಯನ್ನು ತಂದುದರಿಂದ ಭಾಗೀರಥೀ ಎಂಬ ಹೆಸರಾಯಿತು. ಹೀಗೆಯೇ ಗಂಗೆ ಜಾಹ್ನವಿ ಗೌತಮಿ ಗೋದಾವರಿ ಎಂಬ ಹೆಸರುಗಳಿಂದಲೂ ಪ್ರಚಲಿತಳಾಗಿದ್ದಾಳೆ. ವಿಷ್ಣುವಿನ ಕಾಲಲ್ಲಿ ಗಂಗೆ ಹುಟ್ಟಿದ್ದರೆ ಭೂಮಿಯಲ್ಲಿ ಅದು ಯಾವುದು; ಮಂದಾಕಿನಿ, ಕೃಷ್ಣ ಭೀಮರಥಿ, ಪಿನಾಕಿನಿ, ಮಲಹಾರಿಣಿ, ತುಂಗೆ, ನರ್ಮದೆ, ಸುಮಂಗಲೆ, ಕಾವೇರಿ, ಕೌಶಿಕಿ, ತಾಮ್ರಪರ್ಣಿ, ಗಂಡಕಿ, ಕಪಿಲೆ ಇವುಗಳಲ್ಲಿ ಯಾವುದು ಗಂಗೆ?

ಭೂಲೋಕದಲ್ಲಿ ಗಂಗೆಗೆ ವಿಷ್ಣುಪದಿ ಎಂಬ ಹೆಸರಿಲ್ಲವೆ ಎಂದರೆ ವಿಷ್ಣುಪದ ಎಂದರೆ ಆಕಾಶದಲ್ಲಿ ಸಂಚರಿಸುವುದರಿಂದ ವಿಷ್ಣುಪದಿ ಎಂಬ ಹೆಸರು ಬಂದಿದೆ. ಸುರರ ಮಾರ್ಗಕ್ಕೆ ಏಕೆ ಆ ಹೆಸರು ಬಂದಿತೆಂಬುದನ್ನು ನೈಘಂಟುಕ ರೀತ್ಯಾ ವಿವರಿಸಲಾಗಿದೆ. ಈಶ್ವರನು ಜಗದ್ವ್ಯಾಪ್ತ. ಆತನಿಗೆ ಧರಣಿಯೇ ಪೀಠ. ಅಂಬರವೇ ಲಿಂಗ. ಹರಿ ಭೃತ್ಯ ಹರ ಕರ್ತೃ ಗಂಗಾಧರ ಎಂಬ ಹೆಸರು ಬಂದುದಕ್ಕೆ ಕಾರಣವನ್ನು ವಿವರಿಸುವನು. ಶಿವನ ಅನುವಿನೊಂದೊಪ್ಪುವ ವೃಷಭೇಶ್ವರನು ಮತ್ತು ಆತನ ಸದ್ಧರ್ಮ ಕೃತಯುಗದಲ್ಲಿ ಪ್ರವರ್ತಿಸಿತು. ತ್ರೇತಾಯುಗದಲ್ಲಿ ಧರ್ಮವು ಮೂರು ಪಾದದಲ್ಲಿಯೂ ಕಲಿಯುಗದಲ್ಲಿ ಏಕಪಾದದಲ್ಲಿಯೂ ನಡೆಯುತ್ತದೆ. ಈ ವೃಷಭಮೂರ್ತಿ ಧರ್ಮ ಮೂರ್ತಿಯಾಗಿ ಯುಗಯುಗಾಂತರದಲ್ಲಿ ಧರ್ಮವನ್ನು ಸ್ಥಾಪಿಸುತ್ತಾನೆ.

## ಅನ್ನದಾನದ ಕಥೆ

ಹನ್ನೆರಡುವರ್ಷದ ಬರ ಉಂಟಾಗಲು ಗೌತಮನು ಹರನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದನು. ಶಂಕರನು ಪ್ರಸನ್ನನಾಗಿ ವರವನ್ನು ಬೇಡಿಕೊಳ್ಳುವಂತೆ ತಿಳಿಸಲು "ಎಲೈದೇವನೆ ನಾನು ಭೂಮಿಯಲ್ಲಿ ಬೀಜವನ್ನು ಬಿತ್ತಿದ ಕೂಡಲೆ ಫಲವನ್ನು ಕೊಡುವಂತೆ ಕರುಣಿಸಬೇಕು" ಎಂದನು. ಶಿವನು ಆ ವರವನ್ನು ಕೊಟ್ಟನು. ಮುನಿ ಸುಖವಾಗಿದ್ದನು. ಹೀಗಿರಲು ಐದುವರ್ಷದ ಬರ ಬಂದಿತು. ಕಾಲಕಾಲಕ್ಕೆ ಮಳೆಗಳಾಗಲಿಲ್ಲ. ಗಂಗಾನದಿಯೇ ಮೊದಲಾದ ನದಿಗಳೂ ಕೆರೆಗಳೂ ಬಾವಿಗಳೂ ಬತ್ತಿ ಹೋದವು. ಖಗಮೃಗಗಳೂ ನರರೂ ಪಶುಗಳೂ ಬಳಲಿ ಬಾಯಾರಿ ಅನೇಕ ಜೀವಗಳು ಪ್ರಾಣಬಿಟ್ಟವು. ದಾರುಕವನದ ಮುನಿಗಳು ಉಪವಾಸದಿಂದ ಕಷ್ಟಪಡುತ್ತ ಗೌತಮನು ಶಿವನನ್ನು ಒಲಿಸಿ ವರವನ್ನು ಪಡೆದುಕೊಂಡುದನ್ನು ಕೇಳಿ ಅವರ ಆಶ್ರಮಕ್ಕೆ ಪ್ರಯಾಸದಿಂದ ಹೋದರು. ಗೌತಮನು ಅವರನ್ನೆಲ್ಲ ಸತ್ಕರಿಸಿ ಅಮೃತಾನ್ನ ಫಲಗಳನ್ನು ಕೊಟ್ಟು ಸಲಹಿದನು. ಅವರೆಲ್ಲರೂ ಗೌತಮನನ್ನು ಕೊಂಡಾಡಿದರು. ಬರಗಾಲ ಮುಗಿದು ಸುಭಿಕ್ಷ ನೆಲಸಿದ ಮೇಲೆ ಅವರೆಲ್ಲ ತಮ್ಮ ಆಶ್ರಮಗಳಿಗೆ ಹಿಂತಿರುಗುವುದಾಗಿ ತಿಳಿಸಲು ಗೌತಮನು "ಇದೇ ನಿಮ್ಮಾಶ್ರಮ. ಇಲ್ಲೇ ಸುಖವಾಗಿರಿ" ಎಂದನು. ಆದರೂ ಅವರು ತಮ್ಮ ಊರಿಗೆ ಹೋಗಬೇಕೆಂದು ಹೇಳಿದಾಗ ಶಾಂಡಿಲ್ಯ

ಮುನಿ ಹನ್ನೆರಡುವರ್ಷ ಬರಬಂದಾಗ ಗೌತಮ ನಿಮ್ಮನ್ನು ಸಲಹಿದ. ಈಗ ಆತನನ್ನು ಬಿಟ್ಟುಹೋಗುವುದು ಉಚಿತವಲ್ಲ ಎಂದುಂ ಅನ್ನದಾನದ ಕಥೆಯುನ್ನು ಹೇಳಿದನು.

ಧರ್ಮಪಾಲಕ ಎಂಬ ನಗರದಲ್ಲಿ ಸತ್ಯನಿಧಿ ಎಂಬ ಮಹಾರಾಜ ಸಕಲ ವೈಭವಗಳಿಂದ ರಾಜ್ಯಭಾರಮಾಡುತ್ತ ಪುರೋಹಿತರನ್ನು ಕರೆಸಿ "ಷೋಡಶ ಮಹಾದಾನಗಳನ್ನು ಮಾಡಿ, ಧರ್ಮಗಳಲ್ಲಿ ಅಧಿಕವಾದುದು ಯಾವುದು ಹೇಳಿ" ಎಂದು ಅವರನ್ನು ಕೇಳಿದನು. ಅದಕ್ಕೆ ಅವರು ಎಲ್ಲ ದಾನಗಳೊಳಗೆ ಅನ್ನದಾನವೆ ಮಿಗಿಲುಂ ಎಂದರು. ಅದನ್ನು ಕೇಳಿದ ರಾಜನಂ "ನೀವೆಲ್ಲರುಂ ಜಗದೊಳಗೆಯನ್ನದಾನವೆಯಧಿಕವೆಂದಿರೆಲೆ ಯನ್ನದಾನದ ಮಹಿಮೆಯಂ ಸೊಗಸುದೋರ್ಪಂತೆನಗೆ ದೃಷ್ಟವಂ ತೋರಿದೊಡೆ ಯಗಲದತಿಸುಖದೊಳಿರ್ಪಿರಿಯಲ್ಲದೊಡೆ ನಿಮ್ಮನಗಣಿತದ ಬಾಧೆಗಳ ಮಾಡಿಸುವೆ" ಎಂದನು. ದೇವದತ್ತನೇ ಮೊದಲಾದ ಮುನ್ನೂರು ಜನ ವಿದ್ವಾಂಸರು ಇದರಿಂದ ಚಿಂತೆಗೊಳಗಾದರು. ದೇವದತ್ತನ ಮಗಳು ತಾನುಂ ರಾಜನಿಗೆ ಅನ್ನದಾನದ ಮಹಿಮೆ ಯನ್ನು ಹೇಳುವೆನು ಎನ್ನಲು ಅವರೆಲ್ಲರೂ ಆಕೆಯನ್ನೂ ಕರೆದುಕೊಂಡು ರಾಜನ ಆಸ್ಥಾನಕ್ಕೆ ಹೋದರು. ಆಕೆ ರಾಜನಿಗೆ "ಅನ್ನದಾನದ ಮಹಿಮೆಯನ್ನು ಅರಿಯ ಬೇಕಾದರೆ ಪುರೋಹಿತಪುರಕೆ ಹೋಗಿ. ಆ ಊರಿನ ಭದ್ರರಾಜನ ಹೆಂಡತಿ ಮಗನನ್ನು ಪಡೆಯುವವರೆಗೂ ಅಲ್ಲಿರಿ. ಆಕೆಗೆ ಶಿಶು ಜನನವಾದಕೂಡಲೇ ಅದು ಅನ್ನದಾನದ ಮಹಿಮೆಯನ್ನು ನಿಮ್ಮ ಮನಸ್ಸಿಗೆ ಆನಂದವಾಗುವಂತೆ ಹೇಳುವುದು" ಎಂದಳು. ಅದರಂತೆ ರಾಜನು ಮಂತ್ರಿಗಳಿಗೆ ರಾಜ್ಯಭಾರವನ್ನು ವಹಿಸಿ ದೇಶಗಳನ್ನು ತಿರುಗುತ್ತಾ ಹೊರಟನು. ದಾರಿಯಲ್ಲಿ ಒಂದು ಘೋರಾರಣ್ಯ ಸಿಕ್ಕಿತು. ಅಲ್ಲಿ ಕಂಕಾಳಮೇಘ ಎಂಬ ಬೇಡ ಮನುಷ್ಯರನ್ನು ಪಶುಪಕ್ಷಿಮೃಗಗಳನ್ನು ಭಕ್ಷಿಸುತ್ತ ಹೆಂಡತಿಯೊಡನೆ ವಾಸವಾಗಿದ್ದನು. ಅವನು ರಾಜನನ್ನು ನೋಡಿದ ಕೂಡಲೇ ಹಿಡಿದುಕೊಂಡುಹೋಗಿ ಹೆಂಡತಿಗೆ ಒಪ್ಪಿಸಿ ಅವನನ್ನು ಕೊಂದು ಅಡಿಗೆಮಾಡಿ ಬಡಿಸುವಂತೆ ಹೇಳಿ ಹೊರಟು ಹೋದನು. ಆ ರಾಜನನ್ನು ಕಂಡ ಬೇಡನ ಹೆಂಡತಿ ಕನಿಕರಗೊಂಡು ಅವನನ್ನು ಬಚ್ಚಿಟ್ಟು ಬೇರೆ ಮಾಂಸದಿಂದ ಅಡುಗೆಯನ್ನು ಮಾಡಿದಳು. ಅರಸನಂ ತನಗೆ ಪ್ರಾಪ್ತವಾದ ದುರ್ಮರಣಕ್ಕಾಗಿ ಪರಿತಪಿಸಿದನು. ಬೇಡನು ಎಂದಿನಂತೆ ಬಂದು ಊಟಕ್ಕೆ ಕುಳಿತು ರುಚಿಕರವಾದ ಮಾಂಸವನ್ನು ಸೇವಿಸಿ ಹೆಂಡತಿಯನ್ನು ಜೊತೆಯಲ್ಲಿ ಊಟ ಮಾಡಲು ಕರೆದನು. ಅದಕ್ಕೆ ಆಕೆ ಒಪ್ಪದೇ ಓರೆನೋಟದಿಂದ ಹಿಂದಕ್ಕೆ ಸರಿದಳು ಬೇಡನು ಗಾಬರಿಗೊಂಡು ಆಕೆಯ ಕೋಪಕ್ಕೆ ಕಾರಣವನ್ನು ಕೇಳಿದನು. ಪ್ರಸನ್ನ ಚಿತ್ತಳಾದ ಬೇಡಿತಿ ತನ್ನ ಗಂಡ ತಂದವನನ್ನು ಉಳಿಸಿದುದಾಗಿಯೂ ಬೇರೆಯ ಮಾಂಸವನ್ನು ಅಡುಗೆಮಾಡಿ ಬಡಿಸಿದುದಾಗಿಯೂ ಉಳಿಸಿದ ಆತನು ತನ್ನ ತಮ್ಮನೆಂದೂ ಹೇಳಿದಳುಂ. ಇದನ್ನು ಕೇಳಿದ ತನ್ನ ಗಂಡ ಏನುಮಾಡಿ ಬಿಡುವನೋ ಎಂದು ಹೆದರಿಕೊಂಡಿರಲು ಆ ಬೇಡನು ಅವಳು ಮಾಡಿದ ಕಾರ್ಯವನ್ನು

ಮೆಚ್ಚಿ ಭಾವಮೈದುನನನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದು ಹೆಂಡತಿಗೆ ಹೇಳಿದನು. ಇಷ್ಟುಹೊತ್ತಿನಲ್ಲಿ ಈತನನ್ನು ಕಳಿಸುವುದು ಬೇಡ. ಈ ಕಾಡಿನಲ್ಲಿ ದುಷ್ಟಪ್ರಾಣಿಗಳಿವೆ. ಬೆಳಗಾದ ಮೇಲೆ ಕಳಿಸೋಣ. ಈತನು ನಮ್ಮ ಆಹಾರವನ್ನು ಸೇವಿಸುವುದಿಲ್ಲವೆಂದು ತಿಳಿದು ಬಿದಿರಕ್ಕಿಯನ್ನು ತಂದು ಅನ್ನಮಾಡಿ ಊಟಮಾಡಿಸಿದರು. ಒಂದು ಎತ್ತರವಾದ ಸ್ಥಳದಲ್ಲಿ ಆತನನ್ನು ಮಲಗಿಸಿ ಕಾವಲಿಗಾಗಿ ಸೇವಕರನ್ನು ನೇಮಿಸಿ ತಾನೂ ತನ್ನ ಹೆಂಡತಿಯೂ ಬೇರೆ ಸ್ಥಳದಲ್ಲಿ ಮಲಗಿಕೊಂಡರು. ಅವರು ನಿದ್ರೆ ಹೋಗುತ್ತಿದ್ದಾಗ ಒಂದು ಹುಲಿ ಬಂದು ಆ ಬೇಡನನ್ನು ಕಚ್ಚಿ ಸಾಯಿಸಿತು. ಇದನ್ನು ನೋಡಿದ ಬೇಡಿತಿ ಗಂಡನ ಸಾವಿಗಾಗಿ ಪರಿತಪಿಸಿದಳು. ಅದನ್ನು ನೋಡಿದ ರಾಜ ತನ್ನ ಜೊತೆಯಲ್ಲಿ ಅರಮನೆಗೆ ಬಂದು ಮಾತೆಯಂತೆ ಇರಬೇಕೆಂದು ಆ ಬೇಡಿತಿಗೆ ಹೇಳಿದನು. ಆದಕ್ಕೆ ಆಕೆ "ಕಾಂತಿಯಿಂದಿಳಿದ ಮಣಿ ಜೀವವಿಲ್ಲದ ಕಾಯಮಿಟ್ಟಂತೆ ನನ್ನ ದೇಹಂ ನಿಂತಿರ್ದಡೇನುಫಲವಿಲ್ಲ" ಎಂದು ಹೇಳಿ ಪ್ರಾಣ ಬಿಡಲು ಆ ರಾಜನು ಅವರಿಬ್ಬರಿಗೂ ಅಗ್ನಿಸಂಸ್ಕಾರವನ್ನು ಮಾಡಿ ಅಲ್ಲಿಂದ ಹೊರಟು ರೋಹಿತ ಪಟ್ಟಣಕ್ಕೆ ಬಂದನು. ಅಲ್ಲಿಯ ಭದ್ರಾಶ್ವರಾಜನನ್ನು ಕಂಡು ಕ್ಷೇಮ ಸಮಾಚಾರವನ್ನು ವಿಚಾರಿಸಿ ಆತನ ಪಟ್ಟದರಾಣಿ ರಾಜಕುಮಾರನನ್ನು ಪಡೆಯುವುದಾಗಿಯೂ ಆಗ ಆ ಮಗುವನ್ನು ತನಗೆ ತೋರಿಸಬೇಕೆಂದೂ ಕೇಳಿಕೊಂಡನು. ಪುತ್ರೋತ್ಸವವಾಗುವ ವಾರ್ತೆಯನ್ನು ಹೇಳಿದುದಕ್ಕಾಗಿ ರಾಜನು ಬ್ರಾಹ್ಮಣವೇಷದ ಸನ್ಯಾಸಿಯನ್ನು ಸತ್ಕರಿಸಿ ಗೌರವದಿಂದ ನೋಡಿಕೊಳ್ಳುತ್ತಿದ್ದನು. ಹೀಗಿರಲು ನವಮಾಸಗಳು ತುಂಬುತ್ತಲೆ ರಾಣಿ ಗಂಡುಮಗುವನ್ನು ಹೆತ್ತಳು. ರಾಜನು ಬ್ರಾಹ್ಮಣನನ್ನು ಕರೆದುಕೊಂಡುಹೋಗಿ ಹುಟ್ಟಿದ ಮಗುವನ್ನು ಆತನ ಮುಂದೆ ತಂದಿರಿಸಲು ಆ ಮಗುವು ಕೂಡಲೆ ಎದ್ದು ಕುಳಿತು ಆ ಬ್ರಾಹ್ಮಣನಿಗೆ "ಎಲೈ ಸತ್ಯನಿಧಿ ಭೂಪಾಲನೆ ಅನ್ನದಾನದ ಮಹಿಮೆಯನ್ನು ಅರಿಯಲು ಆ ಪುರೋಹಿತನ ಮಗಳು ಇಲ್ಲಿಗೆ ಕಳಿಸಿಕೊಟ್ಟಿದ್ದಾಳೆ. ನಾನು ಯಾರು ಎಂಬುದು ನಿನಗೆ ಗೊತ್ತೆ? ನೀನು ಕಾಡಿನಲ್ಲಿ ಬರುತ್ತಿದ್ದಾಗ ನಿನಗೆ ವ್ಯಾಧನಿಂದ ಬಂದ ಆಪತ್ತನ್ನು ಬಲ್ಲೆಯಾ? ನಿನ್ನನ್ನು ಆ ಆಪತ್ತಿನಿಂದ ರಕ್ಷಿಸಿದ ಹೆಂಗಸು ಯಾರು? ನಿನಗೆ ಬಿದಿರಕ್ಕಿಯನ್ನು ಅಂದು ಕೊಟ್ಟುದರ ಫಲವೇ ಇಂದು ಈ ರಾಜ್ಯಪದವಿಯನ್ನು ಅನುಭವಿಸುವುದಕ್ಕಾಗಿ ನಾನು ಹುಟ್ಟಿದ್ದೇನೆ. ನನ್ನ ಹೆಂಡತಿಯಾಗುವಳು ನಿನ್ನ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟುತ್ತಾಳೆ. ಅವಳೇ ನನಗೆ ಪಟ್ಟದರಾಣಿಯಾಗುತ್ತಾಳೆ. ಬಿದಿರಕ್ಕಿಯಿಂದ ಇಷ್ಟು ಫಲವಾಯಿತು. ಆದುದರಿಂದ ಅನ್ನದಾನಕ್ಕೆ ಸಾಟಿಯಾವುದುಂಟು? ಸಹಸ್ರಾರು ಆನೆ ಕುದುರೆಗಳನ್ನು ಅನೇಕ ಗೋವುಗಳನ್ನೂ ಕನಕಪಾತ್ರೆಯನ್ನೂ ಕೋಟಿ ಕನ್ಯೆಯರನ್ನು ದಾನಮಾಡಿದರೂ ಇವೆಲ್ಲವೂ ಅನ್ನದಾನದ ಫಲಕೆ ಸಮನಾಗುವುದಿಲ್ಲ" ಎಂದು ಹೇಳಿ ಮರದಲ್ಲಿ ಅದು ಮಲಗಿಕೊಂಡಿತು. ಆದನ್ನು ಕೇಳುತ್ತಿದ್ದ ಇಬ್ಬರು ರಾಜರೂ ಆಶ್ಚರ್ಯಚಕಿತರಾಗಿ

ಇಂತಹ ಮಗುವನ್ನು ಎಂದೂ ನೋಡಿಲ್ಲ ಎಂದು ಶಿವಭಕ್ತರಿಗೆ ಅನೇಕ ದಾನಗಳನ್ನು ಮಾಡಿದರು. ಪ್ರೇಮವನ್ನು ತೆಗೆಯುವಂತೆ ಸತ್ಯನಿಧಿ ಮಹಾರಾಜನಿಗೆ ಭದ್ರಾಶ್ವ ಮಹಾರಾಜ ಹೇಳಿ ತನ್ನ ಪರಿವಾರಸಮೇತ ಆತನನ್ನು ಧರ್ಮಪಾಲಾಖ್ಯ ನಗರಕ್ಕೆ ಬಿಟ್ಟುಬಂದನು. ಆಮೇಲೆ ಸತ್ಯನಿಧಿ ಮಹಾರಾಜನ ಹೆಂಡತಿ ಹೆಣ್ಣುಮಗುವನ್ನು ಹೆತ್ತಮೇಲೆ ಆ ರಾಜನಿಗೆ ಅವಳು ಹೆಂಡತಿಯಾದಳು. ಆದುದರಿಂದ ಗೌತಮನು ದಿನವೆಲ್ಲ ಅನ್ನದಾನ ಮಾಡಿದ ಆತನನ್ನು ಬಿಟ್ಟುಹೋಗುವುದು ಉಚಿತವಲ್ಲ ಎಂದು ಶಾಂಡಿಲ್ಯಮುನಿ ಹೇಳಿದನು.

ಅನ್ನದಾನದ ಕಥೆಯನ್ನು ಕೇಳಿದ ಮೇಲೂ ಆ ಋಷಿಗಳು ತಮ್ಮ ದುರ್ಬುದ್ಧಿಯನ್ನು ಬಿಡದೆ 'ನಾವು ಗೌತಮನ ಸೇವಕರೆ' ಎಂದು ಸಿಡಿಮಿಡಿಗೊಂಡು ಅವನ ಮೇಲೆ ಗೋವಧೆಯನ್ನು ತರಬೇಕೆಂದು ಸಂಚನ್ನು ಹೂಡಿದರು. ಅದಕ್ಕಾಗಿ ಯಾಗವನ್ನು ಮಾಡಿ ಅಗ್ನಿಯನ್ನು ಪ್ರತ್ಯಕ್ಷಮಾಡಿಕೊಳ್ಳಲು ಆತನು ಅವರ ಇಷ್ಟವಾವುದೆಂದು ಕೇಳಲು ಅದಕ್ಕೆ ಅವರು 'ನಾವು ಒಂದು ಆಕಾರವನ್ನು ಮಾಡಿ ಹೊಲದಲ್ಲಿ ಇರಿಸುತ್ತೇವೆ. ಅದನ್ನು ನೀನು ಸಾಯುವಂತೆ ಮಾಡಬೇಕು'' ಎಂಬುದೇ ನಮ್ಮ ಇಷ್ಟವೆಂದರು. ಅದಕ್ಕೆ ಅಗ್ನಿ ''ಗೌತಮನು ಪಾಪರಹಿತ, ಸುಕೃತವಂತ, ಸರ್ವಜ್ಞ. ನಾನು ಆತನಿಗೆ ಪಾಪವುಂಟು ಮಾಡಲು ಇಚ್ಛಿಸುವುದಿಲ್ಲ. ನೀವು ಬೇಕಾದರೆ ಹುಲ್ಲಿನಿಂದ ಗೋವನ್ನು ಮಾಡಿ. ನಾನು ಅದನ್ನು ಪ್ರವೇಶಿಸುತ್ತೇನೆ'' ಎನ್ನಲು, ಆ ಮುನಿಗಳು ಹಾಗೆಯೇ ಒಂದು ತೃಣಪಶುವನ್ನು ಮಾಡಿ ಎರಡು ಕಾಲು ಹೊಲದಲ್ಲೂ ಮತ್ತೆರಡು ಕಾಲು ಹೊರಗೂ ಇರಿಸಿದರು. ಆ ಬಡಕಲು ಹಸುವನ್ನು ಕಂಡು ಗೌತಮನು ಕನಿಕರದಿಂದ ಹುಲ್ಲನ್ನು ಮೇಯಲಿ ಎಂದು ಅದರ ಮೈಯನ್ನು ತಡವಿದನು. ಕೂಡಲೇ ಅದು ಬಿದ್ದು ಸತ್ತು ಹೋಗಲು ಗೌತಮನು ಅತ್ಯಂತ ದುಃಖದಿಂದ ಶಿವನನ್ನು ಪ್ರಾರ್ಥಿಸುತ್ತಿರಲು ಅಷ್ಟರಲ್ಲಿ ಆ ಮುನಿಗಳೆಲ್ಲ ಬಂದು ಗೋವಧೆಯನ್ನು ಮಾಡಿದವನ ಮನೆಯಲ್ಲಿ ಅನ್ನಪಾನಾದಿಗಳನ್ನು ಪಡೆದರೆ ಮಹಾಪಾಪವೆಂದು ಅಲ್ಲಿಂದ ಹೊರಡಲು ಅನುವಾದರು. ಅದನ್ನು ಕಂಡ ಗೌತಮನು ಅವರನ್ನು ಅಡ್ಡಗಟ್ಟಿ ತಾನು ಗೋವನ್ನು ಕೊಲ್ಲಲಿಲ್ಲವೆಂದೂ ಅದನ್ನು ಮುಟ್ಟಿದ ಕೂಡಲೇ ಅದೇ ಬಿದ್ದು ಸತ್ತಿತೆಂದೂ ; ಈ ಪಾಪ ಪರಿಹಾರ ಹೇಗೆ ಸಾಧ್ಯ ಎಂದು ಅವರನ್ನೇ ಕೇಳಿದನು. ಅದಕ್ಕೆ ಅವರು ಈ ಮಹಾ ಪಾಪನಿವಾರಣೆಯಾಗಬೇಕಾದರೆ ಶಿವನ ಜಟಾಜೂಟದ ಗಂಗೆಯನ್ನು ತಂದು ಅದರ ಮೇಲೆ ಹರಿಸಿದರೆ ಪಾಪನಿವಾರಣೆಯಾಗುವುದು ಎಂದು ಹೇಳಿ ಹೊರಟುಹೋದರು. ಗೌತಮನು ತ್ರಿಯಂಬಕ ಪರ್ವತದಲ್ಲಿ ಪರಶಿವನನ್ನು ಕುರಿತು ತಪಸ್ಸುಮಾಡಿದನು. ಆತನ ತಪಸ್ಸಿಗೆ ಮೆಚ್ಚಿದ ಪರಶಿವನು ಆತನ ಇಷ್ಟವೇನೆಂದು ಕೇಳಲು ಗೋವಧೆಯ ಪರಿಹಾರಕ್ಕಾಗಿ ಗಂಗೆಯನ್ನು ಕರುಣಿಸುವಂತೆ ಕೇಳಿಕೊಳ್ಳಲು ''ಆಗಲಿ'' ಎಂದು ಹೇಳಿದನು. ಅಲ್ಲದೆ ಧರೆಯಲ್ಲಿ ಗೋವಧೆಯೇ ಮೊದಲಾದ ಪಾಪಗಳನ್ನು ಮಾಡಿದವರ ಸಂತತಿಯಲ್ಲಿ

ಇಪ್ಪತ್ತೊಂದು ತಲೆಮಾರಿನಲ್ಲಿ ಯಾರೇ ಈ ಪಾಪಮಾಡಿದರೂ ಗಂಗೆಯ ಸ್ಪರ್ಶದಿಂದ ಅವರ ಪಾಪಪರಿಹಾರವಾಗುವಂತೆ ಕರುಣಿಸಬೇಕೆಂದೂ ಪ್ರಾರ್ಥಿಸಿಕೊಂಡನು. ಶಿವನು ತಲೆಯ ಒಂದು ಕೂದಲ ಕಣವನ್ನು ಕಿತ್ತುಕೊಡಲು ಅದು ಗಂಗೆಯಾಗಿ ಹರಿಯಿತು. ಸತ್ತ ಗೋವಿನ ಮೇಲೆ ಹರಿದು ಅದಕ್ಕೆ ಪ್ರಾಣಬರುವಂತೆ ಮಾಡಿತು. ಆದ್ದರಿಂದಲೇ ಇದಕ್ಕೆ ಗೋದಾವರಿ ಎಂಬ ಹೆಸರು ಭೂಮಿಯಲ್ಲಿ ಪ್ರಸಿದ್ಧವಾಯಿತು. ಗೌತಮನು ತಾನು ತಂದ ಗಂಗೆಯಲ್ಲಿ ಸ್ನಾನಾರ್ಚನೆಗಳನ್ನು ಮುಗಿಸಿ ನಿರ್ದೋಷಿಯಾದ ತನ್ನಮೇಲೆ ಆರೋಪ ಹೊರಿಸಿದ ಅಜ್ಞಾನಿಗಳಾದ ಬ್ರಾಹ್ಮಣರನ್ನು ಶಪಿಸಬೇಕೆಂದು ಯೋಚಿಸಿದನು. ಅವರಿಗೆ ನಾನಾರೀತಿಯ ಶಾಪಗಳನ್ನು ಕೊಟ್ಟನು. ''ಅಗಜಾಧಿಪತಿಗೆ ಹರಿಯಜರಧಿಕವೆಂದೂಳಿ ನರಕದೊಳಗಾಳಿ''; ''ಅಸಮ ಶಿವಶಾಸನವ ಕೆಡಿಸಿ ಘೋರಾಂಧ ತಾಮಸನರಕದೊಳಾಳಿ''; ''ಚಿತ್ತಜಾರಿಯಂ ಸ್ಮರಣೆಯಂ ಪಳಿದು ಹರಿಯಂ ನೆನೆವುತ್ತ ನರಕಕ್ಕಿಳಿಯಿರೈ''; ''ಯಮಭಟರು ಘೋರಯಾತನೆಯನ್ನೈದಿಸಲಿ ನಿಮ್ಮನು ಬಿಟ್ಟು ಪರಪುರುಷರಲಿ ನಿಮ್ಮಯಾ ನಾರಿಯರು ರತಿಯನೆಸಗಲಿ''. ಈ ಶಾಪವು ಭಯಂಕರರೂಪದಿಂದ ಬ್ರಾಹ್ಮಣರನ್ನು ಮುತ್ತಲು ಅವರು ಭಯಭೀತರಾಗಿ ಶಿವಸ್ಮರಣೆಮಾಡುತ್ತ ಶ್ರೀರುದ್ರ ಮುಖ್ಯವಾದ ಮಂತ್ರಗಳನ್ನು ಜಪಿಸುತ್ತಿದ್ದರು. ಅದನ್ನು ಕಂಡ ಪರಶಿವನು ಆ ನೀಚೋತ್ತಮರಿಗೆ ಉತ್ತಮರು ಬೋಧಿಸಲು ನಾಚುತ್ತಾರೆ. ನೀಚರಿಂದಲೇ ಬೋಧನೆಯನ್ನು ಮಾಡಿಸಬೇಕೆಂದು ವಿಷ್ಣುವಿಗೆ ಆ ಕಾರ್ಯವನ್ನು ವಹಿಸಿದನು. ವಿಷ್ಣು ದಾರುಕವನಕ್ಕೆ ಬಂದನು.

ವಿಷ್ಣು ಒಂದು ಆನೆಯಮೇಲೆ ಕುಳಿತು ಪುಸ್ತಕಗಳೊಡನೆಯೂ ಶಿಷ್ಯರೊಡನೆಯೂ ದಾರುಕವನಕ್ಕೆ ಬಂದು ''ಮುನಿಗಳಿರ ನಿಮ್ಮಭಿಮತದ ದೈವಮಂ ಚಂದಾಗಿ ಪೇಳ್ವುದು'' ಎಂದನು. ಅವರು ''ಏಕ ಏವೋ ರುದ್ರಃ'' ಎನ್ನಲು ಅವರಿಗೆ ''ವಿಷ್ಣು ಮಾಯಾತ್ಮಕಂ ಜಗಂ'' ಎಂದು ಹೇಳಲು ಅವರೆಲ್ಲ ವೈಷ್ಣವರಾದರು. ಮತ್ತೆ ಕೆಲವರಿಗೆ ಬೌದ್ಧ ಧರ್ಮವನ್ನು ಬೋಧಿಸಲು ಅವರು ಬೌದ್ಧರಾದರು. ಕೆಲವರನ್ನು ಜೈನರನ್ನಾಗಿಯೂ ಕೆಲವರನ್ನು ಚಾರ್ವಾಕರನ್ನಾಗಿಯೂ ಮತ್ತೆ ಕೆಲವರನ್ನು ಸಾಂಖ್ಯರನ್ನಾಗಿಯೂ ಮಾಡಿದನು. ಶಂಕರನಿಗೆ ಇದನ್ನು ಬಿನ್ನವಿಸಿಕೊಂಡನು. ಗೌತಮನ ಶಾಪದಿಂದಲೂ ಹರಿಯ ದುರ್ಬೋಧೆಯಿಂದಲೂ ಮುನಿವ್ರಾತ ಮತಾಂತರವನ್ನು ಹೊಂದಿ ಶಿವನನ್ನು ಶಿವಭಕ್ತರನ್ನು ನಿಂದಿಸುತ್ತ ಅಪನೀತಿಯಿಂದ ನಡೆಯುತ್ತಿರಲು ಗೌತಮನು ಅವರೆಲ್ಲರ ವಾದಗಳನ್ನು ಸಕಾರಣವಾಗಿ ಖಂಡಿಸುತ್ತ ಶಿವನೇ ಸರ್ವೋತ್ತಮನೆಂಬುದನ್ನು ಸಾರಿ ತೋರಿದನು. ಆ ವಿಪ್ರರು ಗೌತಮನೊಡನೆ ವಾದಿಸಲಾರದೆ ವಿಷ್ಣುವಿನ ಬಳಿಗೆ ಹೋಗಿ ''ಗೌತಮನ ಕೂಡಾರುವಾದಕ್ಕೆ ದಕ್ಷರು ಶೂರ ನಿನ್ನಯ ಬೋಧೆಯಂ ಕೇಳಿಯಾ ವಿಗಡ ಹೋರಿದೆವು ತೃಣರಾಶಿಯಗ್ನಿಯೊಳ್ ಸೆಣಸುವೊಲ್ ನೀರೇಜನೇತ್ರ ನಿನ್ನಯ ಶಾಸ್ತ್ರ ವಾತಂಗೆಯೇನಪ್ಪುದೋ'' ಎಂದರು. ಅದನ್ನು ಕೇಳಿದ ಹರಿ ತಾನೇ ಹೋಗುವುದಾಗಿ

ಹೇಳಿ ಒಂದು ಆನೆಯಮೇಲೆ ಪುಸ್ತಕಗಳನ್ನು ಹೇರಿಕೊಂಡು ಬಹುಶಿಷ್ಯರೊಡಗೂಡಿ ಗೌತಮನ ಬಳಿಗೆಬಂದನು. ಅವನನ್ನು ಕಂಡ ಗೌತಮ ಎಲ್ಲ ಮುನಿಗಳೂ ಸೋತು ಭಂಗಪಟ್ಟು ಹೋದುದನ್ನೂ ಭೃಗುವಿನ ಶಾಪದಿಂದ ದಶಾವತಾರಗಳನ್ನು ಪಡೆದ ದ್ದನ್ನು ಎತ್ತಿ ಆಡಿದನು. ಆಗ ವಿಷ್ಣು ನಾಚಿಕೆಪಟ್ಟುಕೊಂಡು ಶಿವನಲ್ಲಿಗೆ ಹೋಗಿ ಸಾಷ್ಟಾಂಗ ನಮಸ್ಕಾರಮಾಡಿ ಗೌತಮನಿಂದ ತಾನು ಅನುಭವಿಸಿದ ಸೋಲನ್ನು ನಿವೇದಿಸಿಕೊಂಡನು. ಆಗ ಶಿವನು ಆ ಗೌತಮನನ್ನು ಒಂದು ಪ್ರಶ್ನೆಯಿಂದ ಸೋಲಿಸು ವುದಾಗಿ ಹೇಳಿ ಶಂಭುಭಟ್ಟಾರಕ ಎಂಬ ಹೆಸರಿನಿಂದ ಶಿಷ್ಯರೊಡನೆ ಗೌತಮನ ಆಶ್ರಮಕ್ಕೆ ಬಂದನು ಅಲ್ಲಿಯ ಚರರಿಗೆ "ಬಡಹಾರುವರನ್ನು ಸೋಲಿಸಿದ್ದು ಹೆಚ್ಚಿನದಲ್ಲ. ಶಂಭುಭಟ್ಟನ ಕೂಡೆ ವಾದಮಾಡಿ ಜೈಸುವಂತೆ ಗೌತಮನಿಗೆ ಹೇಳಿ ಕರೆತನ್ನಿ" ಎಂದು ಕಳಿಸಿಕೊಟ್ಟನು. ಅವರಿಬ್ಬರಿಗೂ ಸಾಕಷ್ಟು ವಾದವಿವಾದಗಳಾದುವು. ವಾದ ದಲ್ಲಿ ಸೋತುಹೋದ ಶಂಭುಭಟ್ಟ ಹಣೆಗಣ್ಣನ್ನು ತೆರೆಯಲು ಗೌತಮನು ಅದಕ್ಕೆ ಎಳ್ಳಷ್ಟು ಅಳುಕದೆ ಶಿವನುಂಟೆಂಬ ಪಕ್ಷದಲ್ಲಿ ನನ್ನ ಅಂಗಾಲಿನಲ್ಲಿ ಅರಳಿ ತಾವರೆ ಯಂತಿದ್ದ ಕಣ್ಣನ್ನು ತೋರಿಸಿದನು. ಶಿವ ಪ್ರಸನ್ನನಾಗಿ ಗೌತಮರಿಗೆ ಅಕ್ಷಪಾದಂಕ ವನ್ನು ಕೊಟ್ಟು ಹಣೆಯಲ್ಲಿ ಲಿಂಗವನ್ನು ಧರಿಸಿ ವಾದಿಗಳಿಕ್ಕೆ ಅಗ್ರೇಸರನಾಗುವಂತೆ ಮೂರ್ಧಾಭಿಷೇಕವನ್ನು ಮಾಡಿದನು. ಗೌತಮನ ಮೇಲೆ ಮಿಥ್ಯಾಗೋಪಥೆಯ ಹೊರಿಸಿದ್ದ ಭ್ರಷ್ಟಮುನಿಗಳು ನರಕಭಾಜನರಾಗುವರೆಂದು ಕರುಣಿಸಿ ನಂದೀಶನನ್ನು ಕಳಿಸಿ ಅವರಿಗೆ ಸದ್ಬೋಧೆಯನ್ನು ಮಾಡಿಸಿದನು. ಅವರೆಲ್ಲರೂ ಶಿವಭಕ್ತರಾದರು.

## ದಕ್ಷಿಣಾಮೂರ್ತಿಲೀಲೆ ಸಗರ ಶೂದ್ರನ ಕಥೆ

ಆನೆ ಕುದುರೆ ಮೊದಲಾದ ವಾಹನಗಳಿಂದಲು ಮುದಿಯೆತ್ತನ್ನು ಏರಿದ್ದಾದರೂ ಏನು? ಚಂದನ ಗಂಧವನ್ನು ಬಿಟ್ಟು ಭಸ್ಮವನ್ನು ಚಿನ್ನದ ಆಭರಣಗಳಿಗೆ ಬದಲಾಗಿ ಎಲಂಮಾಲೆಯನ್ನು ಬಟ್ಟೆಯನ್ನು ಬಿಟ್ಟು ಚರ್ಮವನ್ನು ಹೊದ್ದದ್ದು ಮೇರುಮಂದರ ವಿದ್ದು ಸುಡುಗಾಡಲ್ಲಿ ವಾಸಿಸುವುದಾದರೂ ಏಕೆ? ಉರಗಾಭರಣಗಳನ್ನು ಮರುಳು ತಂಡಗಳನ್ನು ಏಕೆ ಹೊಂದಿರುವ ಎನ್ನಲು ಆಚಾರ್ಯರು ಹೇಳತೊಡಗಿದರು.

ಪರಶಿವನು ಪೂರ್ವಧರ್ಮ ಕೆಡಬಾರದೆಂದು ನೆನೆದಾಕ್ಷಣ ಸದ್ಗುಣವೆ ವೃಷಭ ರೂಪದಿಂದ ಬರಲು ಶಿವನು ಅದನ್ನು ಏರಿ ಜಗತ್ತನ್ನೆಲ್ಲ ಸುಟ್ಟು ಭಸ್ಮಮಾಡಲು ಎಲ್ಲವೂ ಸುಡುಗಾಡಾಯಿತು. ಆಗ ಶಿವನು ಭಸ್ಮವನ್ನು ಧರಿಸಿ ಹರಿಬ್ರಹ್ಮರ ಎಲುಮಾಲೆಗಳನ್ನು ಹಾಕಿಕೊಂಡನು. ದೇವಾಸುರರು ಕ್ಷೀರಸಮುದ್ರವನ್ನು ಕಡೆಯುವ ವಾಗ ವಿಷ್ಣು ಆಮೆಯ ರೂಪಿನಿಂದ ಭೂಮಿಯು ಪಾತಾಳಕ್ಕಿಳಿಯದಂತೆ ಮಾಡಿದನು. ಸಮುದ್ರವನ್ನು ಕಲಕಿದ ಕಚ್ಛಪನನ್ನು ಕೊಂದು ಹರಿಯ ಪ್ರಾರ್ಥನೆಯಂತೆ ಅದರ ಬೆನ್ನಿನ ಚಿಪ್ಪನ್ನು ಪದಕವಾಗಿ ಧರಿಸಿದನು. ವಿಷ್ಣು ವರಾಹರೂಪವನ್ನು ತಾಳಿ ಲೋಕವನ್ನು ಪೀಡಿಸಲು ಅದನ್ನು ಕೊಂದು ಅದರ ಕೋರೆದಾಡೆಯನ್ನು ಪದಕಕ್ಕೆ

ಸೇರಿಸಿಕೊಂಡನು. ನರಸಿಂಹನನ್ನು ಸಂಹರಿಸಿ ಅವನ ಚರ್ಮವನ್ನು ಕಂಚುಕವಮಾಡಿಕೊಂಡನು. ಗಜಾಸುರನನ್ನು ಕೊಂದು ಚರ್ಮವನ್ನು ಹೊದ್ದನು.

ಹಿಮವತ್ಪರ್ವತದ ತಪ್ಪಲಲ್ಲಿ ದಾರುವನವಿತ್ತು. ಆ ವನದ ಶೃಂಗಾರವನ್ನು ಕಂಡು ಎಂಟೊಂಬತ್ತುಸಾವಿರ ಋಷಿಗಳು ಅಲ್ಲಿ ನೆಲಸಿದರು. ಅವರೆಲ್ಲ ಒಂದೊಂದು ಕಡೆಯಲ್ಲಿ ತಪಸ್ಸುಮಾಡುತ್ತಿದ್ದರು. ಕೆಲವರು ಹರನನ್ನೇ ಏಕದೈವವೆಂದು ಭಜಿಸುತ್ತಿದ್ದರು. ಮತ್ತೆ ಕೆಲವರು ಪರದೇವತೆಗಳನ್ನು ಜಿನ ಬುದ್ಧ ಕೇಸರಿ ಭೈರವ ಮೊದಲಾದವರನ್ನು ಪೂಜಿಸುತ್ತಿದ್ದರು. ಅವರೆಲ್ಲರೂ ನಾನಾ ದೈವಗಳನ್ನು ಪೂಜಿಸುತ್ತ ಭ್ರಾಂತಿಯಿಂದಿದ್ದರು. ಈ ಋಷಿಗಳ ಮನಸ್ಸಿನ ಅಂತರವನ್ನು ನೋಡುವ ಸಲುವಾಗಿ ಪರಶಿವನು ಮನ್ಮಥರೂಪವನ್ನು ತಿರಸ್ಕರಿಸುವಂತಹ ಭಿಕ್ಷುಕನ ವೇಷವನ್ನು ಧರಿಸಿ ದಾರುವನಕ್ಕೆ ಬಂದನು. ಮುನಿಕೇರಿಯಲ್ಲಿ ಭಿಕ್ಷಾಂದೇಹಿ ಎನ್ನಲು ಭಿಕ್ಷವನ್ನು ನೀಡಲು ಬಂದ ಮುನಿಸತಿಯರು ಆತನ ಮನೋಹರವಾದ ರೂಪಕ್ಕೆ ಮರುಳಾಗಿ ಆತನ ಹಿಂದೆಯೇ ಹೊರಟರು. ಅವರಿಗೆಲ್ಲ ನಾನಾ ಚಿತ್ತವಿಕಾರಗಳಾದುವು. ಋಷಿಗಳು ಭಿಕ್ಷುಕನನ್ನು ಕಲ್ಲುಗುಂಡುಗಳಿಂದ ಹೊಡೆದರೂ ಅದನ್ನು ಆತನು ಲೆಕ್ಕಿಸಲೇ ಇಲ್ಲ. ಆ ಭಿಕ್ಷುಕನನ್ನು ಹೇಗೆ ಕೊಲ್ಲಬೇಕು ಎಂದು ಯೋಚಿಸುತ್ತಿರುವಲ್ಲಿ ಶಿವನ ನಿರೂಪದಿಂದ ವಿಷ್ಣು ರತಿಯನ್ನು ಮೀರಿಸುವ ಹೆಣ್ಣಿನಾಕಾರವನ್ನು ತಳೆದು ಹಾವಭಾವಗಳನ್ನು ನಟಿಸುತ್ತ ಆ ಮುನಿಗಳ ಎದುರಿನಲ್ಲಿ ಸುಳಿದಾಡಿದನು. ಮುನಿಗಳ ಕೋಪವೆಲ್ಲ ಅಡಗಿಹೋಗಿ ತಾಪಕ್ಕೆ ಒಳಗಾದರು. ಅವಳ ಸುತ್ತಲೂ ಸುತ್ತುತ್ತ ಅವಳನ್ನು ಹಿಡಿದುಕೊಳ್ಳಲು ಹೋಗಿ ನಿರಾಶರಾದರು. ಆ ಮೋಹಿನಿಯನ್ನು ಮೋಹಿಸಿ ಭಂಗಿತರಾದ ಮುನಿಗಳು ಆಕೆಯ ನಿಮಿತ್ತವಾಗಿ ಭ್ರಷ್ಟರಾದುದನ್ನು ತಮ್ಮ ಪತ್ನಿಯರೂ ಆ ಭಿಕ್ಷುಕನ ಹಿಂದೆ ಹೋಗಿ ಸೂಳೆಯರಾದುದನ್ನು ಕಂಡು ಅವನನ್ನು ಹೇಗಾದರೂ ಮಾಡಿ ಕೊಲ್ಲಬೇಕೆಂದು ಮಾರಣ ಹೋಮವನ್ನು ಮಾಡಲಿಚ್ಛಿಸಿದರು. ಹೋಮಕುಂಡದಿಂದ ಭೀಕರವಾದ ಉರಗವು ಹುಟ್ಟಿ ಏನುಮಾಡಬೇಕೆಂದು ಕೇಳಲು ಆ ಭಿಕ್ಷುಕನನ್ನು ಸಂಹರಿಸುವಂತೆ ತಿಳಿಸಿದರು. ಭಿಕ್ಷುಕನು ಆ ಅಪಸ್ಮಾರವನ್ನು ಎಡಗಾಲಲ್ಲಿ ಮೆಟ್ಟಿ ನಾಟ್ಯವನ್ನಾಡಿದನು. ಹೀಗೆಯೇ ಕುಂಡದಲ್ಲಿ ಜನಿಸಿದ ಹರಿಣ, ವ್ಯಾಘ್ರಾಸುರ, ಶೂಲ, ಗದೆ, ಸರ್ಪ, ಭೂತವೇತಾಳರನ್ನೆಲ್ಲ ತನ್ನ ಅಂಗದಲ್ಲಿ ಧರಿಸಿಕೊಂಡನು. ವಹ್ನಿಯನ್ನು ವಾಮಕರದಲ್ಲಿ ಧರಿಸಿಕೊಂಡನು.

**ಸ್ಕಾಂದಪುರಾಣದ ಸಗರನೆಂಬ ಶೂದ್ರನ ಕಥೆ —**

ಸಗರನೆಂಬ ಶೂದ್ರ ಪರರೊಡವೆಗೆ ಆಸೆಪಡದೆ ತನ್ನ ಒಡವೆಯನ್ನು ಇತರರಿಗೆ ಕೊಡದೆ ಎಂಬತ್ತುವರ್ಷಗಳು ಗೌರವದಿಂದ ಬಾಳುತ್ತಿದ್ದನು. ಒಂದುದಿನ ಮಳೆಬರಲು ದೇವಾಲಯವನ್ನು ಹೊಕ್ಕನು. ಅಲ್ಲಿ ನಡೆಯುತ್ತಿದ್ದ ಪುರಾಣ ಪ್ರವಚನವನ್ನು ಕೇಳಿದನು. ಧರ್ಮವನ್ನು ಮಾಡದಿಹ ಗೃಹಸ್ಥನಿಗೆ ಪಂಚಪಾತಕಗಳು ಘಟಿಸುವುದನ್ನು ಪ್ರತಿದಿನ ದೇವತಾರ್ಥ ಮಾಡುವವರಿಗೆ ದೋಷವಿಲ್ಲವೆಂಬುದನ್ನು ಕೇಳಿದನು.

ಪರರೊಡವೆಯನ್ನು ಮುಟ್ಟದೆ ತನ್ನ ಅನ್ನವನ್ನು ತಿನ್ನುವವನಿಗೆ ನರಕವೆಲ್ಲಿಯದು ಎಂದು ಭಾವಿಸಿದ ಸಗರ ಮನೆಗೆ ಬಂದು ಸತ್ತು ಹೋಗಲು ಯಮಕಿಂಕರರು ಅವನನ್ನು ಕೊಂಡೊಯ್ಯಲು ಚಿತ್ರಗುಪ್ತನು ''ಇವನಿಗೆ ಇನ್ನೂ ಹತ್ತುದಿನದ ಆಯುಸ್ಸಿದೆ. ಸಗರನೆಂಬ ಕುಂಬಾರನನ್ನು ಕರೆತನ್ನಿ. ಹೆಸರು ಒಂದೇ ಇದ್ದ ಮಾತ್ರಕ್ಕೆ ಇವನನ್ನು ತರಬಹುದೆ?'' ಎಂದನು. ಆಗ ಯಮಧರ್ಮ ಅವನ ಪಾಪ ಪುಣ್ಯಗಳನ್ನು ತಿಳಿಸುವಂತೆ ಹೇಳಲು ''ಎಲೆ ಜೀಯ ಇವನು ಎಂಬತ್ತುವರ್ಷ ಬದುಕಿದ್ದರೂ ಧರ್ಮವನ್ನು ಮನಸ್ಸಿನಲ್ಲಾದರೂ ನೆನೆಯಲಿಲ್ಲ. ಇವನು ಊಟ ಮಾಡಿದ ಅನ್ನದ ಅಗುಳಿನಷ್ಟು ನರಕಯಾತನೆಯನ್ನು ಅನುಭವಿಸಬೇಕು'' ಎಂದು ಕಳಿಸಿಬಿಟ್ಟರು. ಸತ್ತವನು ಬದುಕುವುದು ಅಸಾಧ್ಯ. ಶಿವಶರಣರ ಕರುಣವನ್ನು ಪಡೆಯಬೇಕು ಎಂದಿರುವಾಗ ದೂರದಲ್ಲಿ ಸುಖಮುನಿಯನ್ನು ಕಂಡನು. ಅವರು 'ಎಲೈ ಸಗರನೆ ಇನ್ನು ಹತ್ತು ದಿನಗಳಲ್ಲಿ ನಿನ್ನ ಪಾಪಗಳು ಹೇಗೆ ನಾಶವಾಗುವುವು'' ಎನ್ನಲು ''ಗುರುವೆ ತಮ್ಮ ದರ್ಶನ ಬಹುಳದೀಕ್ಷೆ'' ಎಂದು ಅಡ್ಡಬಿದ್ದು ಮನೆಗೆ ಬಂದು ಧನವನ್ನು ಶಿವಧರ್ಮಕ್ಕೆ ವಿನಿಯೋಗಿಸಿ ಮುನಿವೇಷವನ್ನು ತಳೆದನು. ಗುರುಪದಾಂಬುಜ ಚಿಂತೆಯಿಂದವನು ಮರಣವನ್ನು ಕಳೆದು ಬಹಳ ವರ್ಷ ತಪಸ್ಸು ಮಾಡುತ್ತಿದ್ದನು. ಅವನು ಧರ್ಮವನ್ನು ತಿಳಿಯದೆ ಶಿವಲಿಂಗವನ್ನು ಹೇಗೆ ಧ್ಯಾನ ಮಾಡುತ್ತಾನೆ ಎಂದು ದಾರುವನದಲ್ಲಿ ಮಾತನಾಡುತ್ತಿದ್ದರು. ಶಿವನ ಶೇಫ ಕತ್ತರಿಸಿ ಬೀಳಲು ಅದನ್ನೇ ಲಿಂಗವೆಂದು ಬೊಗಳುವರು. ನಿಶ್ಚಿಂತೆಯಿಂದ ಅದನ್ನೇ ಧ್ಯಾನ ಮಾಡಿ ತಪಸ್ಸನ್ನಾಚರಿಸಲು ಶಿವನು ಮೆಚ್ಚಿ ಗಣಪದವಿಯನ್ನು ಕೊಟ್ಟನು. ಅವನೇ ಶಿಶ್ನಾಸ್ಯ ಗಣವರನಾದನು. ಹರನ ಪುಲ್ಲಿಂಗವನ್ನು ಜ್ಯೋತಿಸ್ವರೂಪವೆಂದು ಅರಿಯದೆ ಅದನ್ನೇ ಧ್ಯಾನಿಸಲು ಅವನ ಮುಖದಲ್ಲಿ ಶಿಶ್ನವು ನೇತಾಡುತ್ತ ಈರೀತಿಯಾಯಿತು. ಲಿಂಗವು ಏಕವೆಂದೂ ಅವ್ಯಕ್ತವೆಂದೂ ಬ್ರಹ್ಮವೆಂದೂ ನಿಶ್ಚಿತವಾಯ್ತು. ಶಿವನ ಲಿಂಗವನ್ನೇ ಶಿವಲಿಂಗ ಎಂದು ಹೇಳುವರು ಭವಿಗಳು. ಈ ಮಾತು ಸಲ್ಲದು. ಅವಿರಳ ಪರಬ್ರಹ್ಮ ಸ್ವಪ್ರಕಾಶವೇ ಲಿಂಗ. ಸ್ವಯಂಜ್ಯೋತಿಯೇ ಶಿವ. ಅದನ್ನು ಲಿಂಗವೆಂದು ಹೇಳುವರು. ಈ ನಿಂದಕರ ನುಡಿಯನ್ನು ಕೇಳಿದರೆ ದೋಷ. ಅಷ್ಟಮೂರುತಿಯಾದ ಶಿವನು ಜಟಾಮಕುಟದಿಂದ ಚಂದ್ರಕಳೆಯಿಂದ ಕಮಲಮುಖದಿಂದ ಧರಿಸಿದ ಭಸ್ಮದಿಂದ ಸರ್ಪಹಾರದಿಂದ ರಂಜಿಸುತ್ತ ಲೋಕಕ್ಕೆ ಸುಂದರಿಯ ರೂಪತೋರಿತು. ಲೋಕಮಾತೆ ಮತ್ತು ಶಿವ ಒಮ್ಮೊಮ್ಮೆ ಪ್ರೀತಿಯಿಂದ ನಾಟ್ಯವಾಡಲು ಬ್ರಹ್ಮ ವಿಷ್ಣು ಮೊದಲಾದ ದೇವತೆಗಳು ಸ್ತುತಿಸುತ್ತಿದ್ದರು. ಅದನ್ನು ಕಂಡ ಮುನಿಗಳು ಅಜ್ಞಾನದಿಂದ ತಾವು ಮಾಡಿದ ಅಕಾರ್ಯಕ್ಕೆ ಮರುಗಿ ರಕ್ಷಿಸಬೇಕೆಂದು ನಮಸ್ಕರಿಸಿದರು. ಪರಶಿವನನ್ನು ಪರಿಪರಿಯಾಗಿ ಸ್ತುತಿಸಿ ಪ್ರಾರ್ಥಿಸಲು ಅವನು ವಟಮೂಲದಲ್ಲಿ ಕುಳಿತು ಸನಕಾದಿ ಮುನಿಗಳಿಗೆ ವೇದಾಂತಾರ್ಥವನ್ನು ಬೋಧಿಸಿ ಅವರ ಸತಿಯರನ್ನು ಸಲಹಿದನು.

## ಶಿವಲೀಲೆ

ಪರಶಿವನ ರಜೋಗುಣದಿಂದ ಪರಮ ಪಂಚಸನಕಾದಿಗಳು ಹುಟ್ಟಿದರು. ಅವರಿಗೆ ಜಗತ್ತನ್ನು ಸೃಷ್ಟಿಸುವಂತೆ ಹೇಳಲು ಅವರು ಅರತಿಯಿಂದ ಬಯಲಾದರು. ಆಗ ಬ್ರಹ್ಮನು ಸರಸ್ವತಿಯಿಂದ ನವಬ್ರಹ್ಮರನ್ನು ಹುಟ್ಟಿಸಿದನು. ಆ ನವಬ್ರಹ್ಮರು ನಾನಾ ಪ್ರಪಂಚವನ್ನು ಸೃಷ್ಟಿಸಿದರು. ಒಂದುದಿನ ಬ್ರಹ್ಮನು ರತ್ನಸಿಂಹಾಸನದಲ್ಲಿ ಮಂಡಿಸಿದ್ದನು. ಅವನ ಪುತ್ರಪೌತ್ರರೂ ಮುನಿಗಳೂ ವಿಬುಧರೂ ರಾಕ್ಷಸರೂ ಓಲಗದಲ್ಲಿ ''ಜಗತ್ತಿನ ಸೃಷ್ಟಿ ನಿನ್ನಿಂದಾಯಿತು. ನೀನೇ ಜಗತ್ತಿಗೆ ಒಡೆಯ ರಕ್ಷಕ'' ಎಂದು ಕೊಂಡಾಡುತ್ತಿದ್ದರು. ಸಭಾಜನರು ''ಕೂಡ ನಿನ್ನನ್ನು ಬಿಟ್ಟು ಇನ್ನಾರು ದೇವರಿದ್ದಾರೆ; ನೀನೇ ಜಗತ್ತಿಗೆ ಜೀವನಾಧಾರ, ಜೀವಾತ್ಮ'' ಎಂದು ಹೊಗಳುತ್ತಿದ್ದರು. ಈ ಹೊಗಳಿಕೆಯಿಂದ ಬ್ರಹ್ಮನು ಉಬ್ಬಿಹೋಗಿ ತನಗಿಂತ ಮಿಗಿಲಾದವರು ಯಾರೂ ಇಲ್ಲವೆಂದು ಅಹಂಕರಿಸಿದನು. ಲೋಕಸ್ಥಿತಿ ಲಯವನ್ನೈದುವಂತಾಗಲು ವಿಷ್ಣು ಬ್ರಹ್ಮನ ಬಳಿಗೆ ಬರಲು ಬ್ರಹ್ಮನು ''ನೀನು ಯಾರು'' ಎಂದು ವಿಷ್ಣುವನ್ನು ಕೇಳಿದನು. ಅದನ್ನು ಕೇಳಿದ ವಿಷ್ಣು ''ನೀನು ಯಾರ ನಾಭೀಕಮಲದಿಂದ ಹುಟ್ಟಿದೆ ಎಂಬುದನ್ನು ಮರೆತೆಯಾ'' ಎಂದು ಎಚ್ಚರಿಸಿದನು. ಅವರಿಬ್ಬರೂ ಕೋಪಗೊಂಡು ಸೈನ್ಯವನ್ನು ಸೃಷ್ಟಿಸಿ ಯುದ್ಧಕ್ಕೆ ತೊಡಗಿದರು. ಅವರ ಯುದ್ಧದಿಂದ ತಲ್ಲಣಿಸಿದ ದೇವತೆಗಳು ಸೃಷ್ಟಿಕರ್ತ ಸ್ಥಿತಿಕರ್ತರ ಯುದ್ಧವನ್ನು ನಿಲ್ಲಿಸಲು ಶಿವನಲ್ಲದೆ ಮತ್ತಾರಿಂದಲೂ ಸಾಧ್ಯವಿಲ್ಲವೆಂದು ಮೊರೆಯಿಟ್ಟರು. ಬ್ರಹ್ಮ ವಿಷ್ಣು ಒಬ್ಬರನ್ನೊಬ್ಬರು ಮೂದಲಿಸುತ್ತ ವಿವಿಧಾಸ್ತ್ರಶಸ್ತ್ರಗಳಿಂದ ಹೊಡೆದಾಡುತ್ತಿದ್ದರು. ಇವರಿಬ್ಬರ ಯುದ್ಧವನ್ನು ನಿಲ್ಲಿಸಲು ಶಿವನು ಅವರಿಬ್ಬರ ಮಧ್ಯದಲ್ಲಿ ಬೃಹದಾಕಾರದ ಲಿಂಗರೂಪವನ್ನು ಧರಿಸಿನಿಂತನು. ಆ ಶಿವಲಿಂಗವನ್ನು ಕಂಡು ಅವರಿಬ್ಬರೂ ಭಕ್ತಿಭಾವದಿಂದ ಕೂಡಿದರು. ವಿಷ್ಣು ಬ್ರಹ್ಮನನ್ನು ಕುರಿತು ''ಅಜ ನೀನು ಮಂಡೆಯ ಕಾಣ್ಬೆಯೊ'' ಎಂದು ಕೇಳಲು ''ನಾನೇನು ಬಡವನೆ ಪುಂಡರೀಕಾಕ್ಷನ ಘನಮಸ್ತಕವನ್ನು ನೋಡುತ್ತೇನೆ'' ಎಂದನು. ವಿಷ್ಣು ಪಾದವನ್ನು ನೋಡುವುದಾಗಿ ತಿಳಿಸಿದನು. ವಿಷ್ಣು ವರಾಹರೂಪದಿಂದ ಅಧೋಲೋಕವನ್ನೆಲ್ಲ ಸುತ್ತಿ ಪಾದವನ್ನು ಕಾಣದೆ ಹಿಂತಿರುಗಿದನು. ಬ್ರಹ್ಮನು ಗೃಧ್ರರೂಪದಿಂದ ಊರ್ಧ್ವಲೋಕಗಳನ್ನೆಲ್ಲ ಸುತ್ತಿಹೋಗುತ್ತಿದ್ದಾಗ ದಾರಿಯಲ್ಲಿ ಶಿವನ ಮಕುಟದಲ್ಲಿದ್ದ ಕೇತಕಿಯನ್ನು ಕಂಡು ತಾನು ಶಿವನ ಮಕುಟವನ್ನು ಕಂಡೆನೆಂದು ವಿಷ್ಣುವಿನೊಡನೆ ನುಡಿಯಬೇಕೆಂದು ಕರೆತಂದನು. ಕೇತಕಿ ಅಪಸಾಕ್ಷ್ಯವನ್ನು ನುಡಿದದ್ದರಿಂದ ''ಶಿವನಿಗೆ ನೀನು ಸಲ್ಲಬೇಡ'' ಎಂದು ವಿಷ್ಣು ಶಾಪವನ್ನಿತ್ತನು. ಪರಶಿವನನ್ನು ವಿಷ್ಣು ಸ್ತುತಿಸಲು ''ನೀನು ಸುಳ್ಳಾಡಲಿಲ್ಲ. ಆದುದರಿಂದ ನನ್ನ ಸಮ ಪೂಜೆ ನಿನಗಾಗಲಿ. ಬ್ರಹ್ಮನು ಸುಳ್ಳಾಡಿದಂದರಿಂದ ಕೆರೆಯ ಏರಿಯ ಮೇಲೆ ಹಾದಿಬೀದಿ ತೋಟ ಬಾವಿಗಳಲ್ಲಿ ನೆಲಸಿ ಗುಡಿಗೋಪುರಗಳಿಲ್ಲದೆ ಪೂಜೆಯಿಲ್ಲದೆ ದರಿದ್ರತೆಯಿಂದ ಕೂಡಿರಲಿ'' ಎಂದು ಬ್ರಹ್ಮನಿಗೆ

ಶಾಪವನ್ನು ಕೊಟ್ಟನು. ವಿಷ್ಣುವಿಗೆ ವರವನ್ನೂ ಬ್ರಹ್ಮನಿಗೆ ಶಾಪವನ್ನೂ ಕೊಟ್ಟು ಶಿವ ಭಯಂಕರರೂಪವನ್ನು ತೋರಲು ಅವರಿಬ್ಬರೂ ಕಾಪಾಡಬೇಕೆಂದು ಪ್ರಾರ್ಥಿಸಿ ಪರಿಪರಿಯಾಗಿ ಸ್ತುತಿಸಲು ಅವರಿಬ್ಬರನ್ನೂ ಸಮಾಧಾನಪಡಿಸಿ ಎಂದಿನಂತೆ ಸೃಷ್ಟಿಸ್ಥಿತಿ ಕಾರ್ಯಗಳನ್ನು ಮಾಡಿಕೊಂಡಿರುವಂತೆ ಹೇಳಿಕಳಿಸಿದನು.

## ಪಂಚಮಕಾಂಡ

ಲಲಿತ ಭೈರವವೇ ಮುಖ್ಯವಾದ ದಿವ್ಯಾಗಮಂಗಳಲ್ಲಿ ನಿರೂಪಿತವಾದ ಭುವನ ಕೋಶವನ್ನು ದೇವಲಮುನಿಗೆ ಹೇಳಿದನು.

ಸ್ವಾಯಂಭುವಿನ ಮಗ ಪ್ರಿಯವ್ರತ ಭೂವಲಯಕ್ಕೆ ರಾಜನಾಗಿದ್ದನು. ಆತನು ಏಳು ದ್ವೀಪಗಳಿಗೆ ತನ್ನ ಏಳು ಮಕ್ಕಳನ್ನು ನಾಯಕರನ್ನಾಗಿ ಮಾಡಿದನು. ಅವರಲ್ಲಿ ಹಿರಿಯನಾದ ಅಗ್ನೀಧ್ರನಿಗೆ ತನ್ನ ಏಳು ಮಕ್ಕಳನ್ನು ನಾಯಕರನ್ನಾಗಿ ಮಾಡಿದನು. ಅವರಲ್ಲಿ ಹಿರಿಯನಾದ ಅಗ್ನೀಧ್ರನಿಗೆ ಒಂಬತ್ತು ಮಂದಿ ದಾಯಾದ್ಯರು. ಅವನು ಈ ಒಂಬತ್ತು ಮಂದಿಗೆ ಭೂಮಿಯನ್ನು ಒಂಬತ್ತುಭಾಗ ಮಾಡಿಕೊಟ್ಟನು. ಅವು ಭರತ ಕಿಂಪುರುಷ ಇಳಾವೃತ ರಮ್ಯಕ ಹರಿ ಹಿರಣ್ಮಕ ಕೇತುಮಾಲ ಭದ್ರಾಶ್ವ ಉತ್ತರಕುರು ಎಂಬ ಹೆಸರುಗಳಿಂದ ಕೂಡಿದ್ದುವು. ನೀಲ ಶ್ವೇತಶೃಂಗಗಳು ಉತ್ತರದಲ್ಲೂ ನಿಷಧ ಹೇಮಾದ್ರಿ ಹೇಮಕೂಟ ಪರ್ವತಗಳು ದಕ್ಷಿಣದಲ್ಲೂ ಮಾಲ್ಯವಂತ ಪೂರ್ವದಲ್ಲೂ ಗಂಧಮಾದನ ಪಶ್ಚಿಮದಲ್ಲೂ ಇದ್ದವು. ಮೇರುವಿನ ಉಪಪರ್ವತಗಳಲ್ಲಿ ಹಿಮವಂತ ಪರ್ವತದ ಕಡೆಯಿಂದ ಹತ್ತುಸಾವಿರ ಗಾವುದದ ಅಳತೆಯಲ್ಲಿ ಭಾರತದ ಎತ್ತರವಾದ ಖಂಡವು ಮೇರುವಿಗೆ ದಕ್ಷಿಣಮುಖವಾಗಿ ನಾನಾವಿಧ ವರ್ಣಭೂಮಿಗಳಿಂದ ಶೋಭಾಯಮಾನವಾಗಿತ್ತು. ಅದು ಕರ್ಮಭೂಮಿ ಎನಿಸಿತು.

ಹಿಮಗಿರಿ ಸಾವಿರಗಾವುದ ಅಳತೆಯುಳ್ಳದ್ದಾಗಿತ್ತು. ಅಲ್ಲಿ ದೇವತೆಗಳು ಸದ್ಭಕ್ತಿಯಿಂದ ಪಾರ್ವತೀ ಪರಮೇಶ್ವರರನ್ನು ಭಜಿಸಿ ಸುಖಸಂತೋಷದಿಂದಿದ್ದರು. ಹಿಮ ಪರ್ವತದಲ್ಲಿ ಭಾಗೀರಥಿನಾಮದಿಂದ ಗಂಗೆ ಹುಟ್ಟಿ ಸಾಗರವನ್ನು ಸೇರುತ್ತದೆ. ತ್ರಿಯಬಂಕ ಗೋತ್ರದಿಂದ ಹುಟ್ಟಿದ ಆ ದೇವನದಿ ಗೋದಾವರಿ ಕೃಷ್ಣವೇಣಿ ತುಂಗೆ ನೇತ್ರಾವತಿ ಕಾವೇರಿ ಮೊದಲಾದ ಹೆಸರುಗಳಿಂದ ಭರತಖಂಡದ ನಾನಾ ಭಾಗಗಳಲ್ಲಿ ಹರಿಯುತ್ತಿವೆ.

ಏಕೋರಾಮ ದೇವಲನಿಗೆ ಕನಕಾಚಲಪ್ರಾಂತದ ನಗರಗಳನ್ನೂ ಅಭ್ರಗಳ ಅನುವನ್ನು ಆಗಸದ ಇರವನ್ನು ಹೇಳಿದನು. ವಿಷ್ಕಂಭನಗಳೆರಡರ ಮಧ್ಯದ ಮೇರುಗಿರಿಯ ಅಳತೆಯಲ್ಲಿ ಭೂಮಿ ಹದಿನಾರುಸಾವಿರ ಎಂಬತ್ತುನಾಲ್ಕುಸಾವಿರ ಉದ್ದಳತೆಗಳುಳ್ಳದಾಗಿತ್ತು. ಅದರ ಅಗ್ರವಿಸ್ತಾರ ಬತ್ತೀಸ ಸಹಸ್ರಯೋಜನ. ಎಂಟು ದೆಸೆಯಲ್ಲೂ ಎಂಟು ಶೃಂಗಗಳು ನವಸಾಹಸ್ರಯಾನದಿಂದ ಮೆರೆದಿದ್ದುವು. ಈ ಎಂಟು

ಶೃಂಗಗಳ ತುದಿಯಲ್ಲಿ ಪಟ್ಟಣಗಳು ನವಸಹಸ್ರಾಯತದಿಂದ ರಂಜಿಸಿದ್ದವು. ಅಮರಾವತಿ ಎಂಬ ಹೆಸರಿನ ಕೋಟೆ ನೀಲಗಳ ತೆನೆಗಳಿಂದೊಪ್ಪುತ್ತಿತ್ತು. ತೇಜೋವತಿಗೆ ಕಬ್ಬಿನದ ಕೋಟೆ. ಯಮಧರ್ಮರಾಯ ಶಿವಲಿಂಗವನ್ನು ಭಯಭಕ್ತಿಯಿಂದ ಭಜಿಸುತ್ತಿದ್ದನು.

ಮೇರುಗಿರಿಯಂ ಕೊನೆಯಲ್ಲಿ ಈಶಪುರವು ದಶಸಾಹಸ್ರ ಸೋಮಸೂರ್ಯರ ಪ್ರಭೆಯನ್ನು ತಿರಸ್ಕರಿಸುವಂತಿತ್ತು. ಅದು ರತ್ನದ ಕೋಟೆ ಮುತ್ತಿನ ತೆನೆ ಕಂದಕದಿಂದ ವಿರಾಜಮಾನವಾಗಿತ್ತು. ಅದರಲ್ಲಿನ ಪುರುಷಸಿಂಹಾಸನವನ್ನು ಸುರಗುಣ ಕಾದುಕೊಂಡಿತ್ತು. ಆ ಪಟ್ಟಣ ಖಂಗ್ಯಜಂಸ್ನಾಮಾದಿಗಳಿಗೆ ಆವಾಸಸ್ಥಾನವಾಗಿತ್ತು. ಆ ಮೇರುಪರ್ವತದ ಅಗ್ರದಲ್ಲಿರುವ ಅಮಳನಿಧಿ ಎಂಬ ಧಾಮ ಹದಿನಾಲ್ಕುಸಾವಿರ ಯೋಜನ ವಿಸ್ತಾರವುಳ್ಳದ್ದಾಗಿತ್ತು. ನೈಋತ್ಯದಿಂದ ಈಶಾನ್ಯದವರೆಗೆ ಕೂಡಿತ್ತು. ಆ ಮಹಾಮಂದಿರದ ನಡುವೆ ಮಹಿಮೆಯ ಪೀಠದ ಮೇಲೆ ಮಹಾದೇವ ಮಂಡಿಸಿದ್ದರು. ಆತನನ್ನು ಗಣನಿಕರ ಬಳಸಿತ್ತು.

ಪಾರ್ವತಿಯು ಪರಮೇಶ್ವರನ ಕಣ್ಣುಗಳನ್ನು ಮುಚ್ಚಲು ಹತ್ತುಬೆರಳುಗಳಿಂದ ಹರಿದ ಕಣ್ಣೀರು ಹತ್ತು ನದಿಗಳಾದುವು. ಅವುಗಳಲ್ಲಿ ಮೂರನ್ನು ಬ್ರಹ್ಮ ವಿಷ್ಣು ಇಂದ್ರರಿಗೆ ಕೊಡಲು ಉಳಿದ ಗಂಗೆಗಳಿಂದ ಲೋಕಕ್ಕೆ ಉಪಟಳವಾಗಲು ಅವನ್ನು ಶಿರದಲ್ಲಿ ಶಿವನು ಧರಿಸಿದನು. ಭಗೀರಥನ ಪ್ರಾರ್ಥನೆಯಿಂದ ಆ ಗಂಗೆ ಲೋಕದಲ್ಲಿ ಹರಿದು ಪಾವನವನ್ನಾಗಿ ಮಾಡಿ ಮೇರುವಿನ ಮಧ್ಯಕ್ಕೆ ಹರಿದು ಅಲ್ಲಿಂದ ನಾಲ್ಕು ಮುಖವಾಗಿ ಹರಿಯಿತು. ಪೂರ್ವಕ್ಕೆ ಪಾವನಿ ಪಶ್ಚಿಮಕ್ಕೆ ನಂದೆ ಉತ್ತರಕ್ಕೆ ಸುಪಕ್ಷಿ ದಕ್ಷಿಣಕ್ಕೆ ಭದ್ರೆ ಎಂಬ ಹೆಸರಿನಿಂದ ನಾಲ್ಕು ದಿಕ್ಕುಗಳಲ್ಲಿಯೂ ಹರಿದು ಎಲ್ಲರನ್ನೂ ಪಾವನಗೊಳಿಸಿ ಸಮುದ್ರವನ್ನು ಸೇರಿದವು.

ಭುವರ್ಲೋಕ, ಮುಖ್ಯವಾದ ಊರ್ಧ್ವಲೋಕಗಳು—ಅವುಗಳ ಇರವು ಅವರೊಳಗಿರುವ ಮಂಡಲಗಳು, ಅಜಾಂಡಗಳು— ಇವನ್ನು ರಕ್ಷಿಸುವ ರುದ್ರರ ವರ್ಣನೆಗಳನ್ನು ಮುನಿಪೋತ್ತಮನು ನಿರೂಪಿಸಿದನು.

ಬ್ರಹ್ಮಾಂಡದ ಬಹಿರ್ಭಾಗವನ್ನು ರಕ್ಷಿಸುವ ಶತರುದ್ರಗಳ ನಾಮವನ್ನು ವಿವರಿಸಲಾಗಿದೆ. ಸೃಷ್ಟಿ ಪಾರಂಪರೆಯ ವಿವರಣೆಯನ್ನು ಮಾಡಲಾಗಿದೆ.

ಶಂಕುಕರ್ಣನು ಮುದ್ರಾಪುರಿಗೆ ಬಂದು ರಾಮೇಶ್ವರ ದೇವಾಲಯದ ಮಂಟಪವನ್ನು ಪ್ರವೇಶಿಸಲು ಅದನ್ನು ತಿಳಿದ ವಿಕೋರಾಮನು ಇದಿರ್ಗೊಂಡು ನಮಸ್ಕರಿಸಿ ಬಂದ ಕಾರ್ಯವನ್ನು ತಿಳಿಸಬೇಕೆಂದು ಕೇಳಿಕೊಂಡನು. ಅದಕ್ಕೆ ಎಲೈ ಘಂಟಾಕರ್ಣ ಗಣಪನೆ, ಹರನ ಆಜ್ಞೆಯಿಂದ ಸಜ್ಜನರನ್ನು ಪಾಲಿಸಲು ಭೂಮಿಗೆ ಬಂದು ವೀರಶೈವವನ್ನು ಮರೆತು ಶುದ್ಧಶೈವವನ್ನು ಪಡೆದದ್ದರಿಂದ ನಾನು ಬಂದೆ. ರಾಮನಾಥನಿಂದ ದೀಕ್ಷೆಯನ್ನು ಪಡೆದು ವೀರಶೈವೋದ್ಧಾರವನ್ನು ಮಾಡಲು ಅಚಲಪದವಿ ಪ್ರಾಪ್ತ

ವಾಗುವುದು. ಇದನ್ನು ಕೇಳಿದ ಏಕೋರಾಮ ಭೂಮಿಯಲ್ಲಿ ಕುಸಿದು ಕಂಬನಿ ತುಂಬಿಕೊಂಡು ಹಂಬಲಿಸಲು ಆತನನ್ನು ಸಮಾಧಾನಪಡಿಸಿ ಆತನು ಭೂಲೋಕಕ್ಕೆ ಬಂದ ಕಾರ್ಯವನ್ನು ನೆನಪಿಸುವನು. ಆಗ ಏಕೋರಾಮನು ರಾಮೇಶನಾಲಯದ ಬಾಗಿಲಂ ಮುಚ್ಚಿರಲು, ಅವನು ಬಾಗಿಲನ್ನು ತೆರೆಯುವಂತೆ ನಾನಾ ವಿಧವಾಗಿ ಪ್ರಾರ್ಥಿಸುವನು. ಆತನ ಪ್ರಾರ್ಥನೆಯಂತೆ ದೇವಾಲಯದ ಕದ ಕಳಚಿ ಬೀಳಲು ಪರಶಿವನು ಪ್ರತ್ಯಕ್ಷನಾದನು. ಏಕೋರಾಮನು ನಮಸ್ಕರಿಸಲು ಶಿವನು ಅವನ ಶಿರವನ್ನು ಹಿಡಿದು ಮೇಲಕ್ಕೆತ್ತಿ ಸಪ್ತೋಪದೇಶವನ್ನು ಮಾಡಿ ವೀರಶೈವ ಧರ್ಮ ವನ್ನು ಉದ್ಧರಿಸುವಂತೆ ಹೇಳಿ ಅಂತರ್ಧಾನನಾದನು. ಏಕೋರಾಮನು ಮುದ್ರಾ ಪುರದ ವಿಪ್ರರನ್ನೆಲ್ಲ ಜರೆದು ವೀರಶೈವಕ್ಕೆ ಯಾವ ಧರ್ಮವೂ ಸಾಟಿಯಿಲ್ಲವೆಂದು ಡಂಗುರಹೊಯ್ಸಿದನು ಆ ವಿಪ್ರರೆಲ್ಲರೂ ಆ ಊರಿನ ರಾಜನಿಗೆ ದೂರನ್ನಿತ್ತು ವಿಚಾರಿಸುವಂತೆ ಕೇಳಿಕೊಂಡರು. ವೀರಭಾಸ್ಕರರಾಜನು ಮಂತ್ರಿಗಳನ್ನು ಏಕೋ ರಾಮನ ಬಳಿಗೆ ಕಳಿಸಲು ಅವರು ಬಂದು ವಿಚಾರಿಸಲು "ರಾಮನಾಥನೆ ಸಾಕ್ಷಿಯುಳಿದ ಶಾಸ್ತ್ರವದೇನು ಭೂಮಿಾಶಗುಸುರಂ'' ಎಂದು ಹೇಳಲು ಮಂತ್ರಿಗಳು ರಾಜನ ಬಳಿಗೆ ಬಂದು "ಶ್ರೀ ಮಹಾರಾಜ ಕೇಳಯ್ಯ ಶಿವನೇ ದೈವ ವೀರಶೈವಕ್ಕೆ ಸಮವು ಭೂಮಿ ಯೊಳಗಿಲ್ಲ ಶಾಸ್ತ್ರವ ಕೇಳು ಪೇಳುವೆಂ ಈ ಮಹಿಮೆಯೊಳಲ್ಲದೊಡೆ ಲಿಂಗವ ನುಡಿಸುವೆಂ ಎಂದು ಹೇಳಿದನು ಎಂದರು. ಇದಕ್ಕೆ ಸ್ಪಷ್ಟವನ್ನು ಕಾಣಬೇಕು ಎನ್ನಲು ಎಲ್ಲರೂ ಒಪ್ಪಿದರು. ರಾಜನು ಸಮಸ್ತ ಪರಿವಾರದೊಡನೆಯೂ ವಿದ್ವಾಂಸರೊಡ ನೆಯೂ ಸಭೆಗೆ ಹೋದನು. ಏಕೋರಾಮನು ವೇದಾಗಮಪುರಾಣವಾಕ್ಯಗಳಿಂದ ಅಲ್ಲಿ ನೆರೆದಿದ್ದ ವಿದ್ವಾಂಸರನ್ನೆಲ್ಲಾ ವಾದದಲ್ಲಿ ಸೋಲಿಸಿದನು. ಅವರ ವಾದಗಳನ್ನೆಲ್ಲ ನಿರಸನಮಾಡಿ ವೀರಶೈವಧರ್ಮವನ್ನು ಎತ್ತಿಹಿಡಿದನು. ಅದನ್ನು ಕೇಳಿದ ರಾಜನೇ ಮೊದಲಾದವರೆಲ್ಲರೂ ಏಕೋರಾಮನ ಶಿಷ್ಯರಾದರು. ಅವರೆಲ್ಲರನ್ನು ಕರೆದುಕೊಂಡು ರಾಮೇಶ್ವರ ದೇವಾಲಯಕ್ಕೆ ಬಂದು ಎಲ್ಲರೂ ನೋಡುತ್ತಿರುವಂತೆ ಶಂಕರನನ್ನು ನಾನಾರೀತಿಯಲ್ಲಿ ಸ್ತುತಿಸಿ "ರಾಮೇಶಲಿಂಗವೆ ಕೃಪಾನಂದದಿಂದಿಷ್ಟಲಿಂಗವನಿತ್ತುದಂಟೆ ನೀಂ ಕುಂದದೇಕೋರುದ್ರನೆನಿಸುತಿರುತಿರ್ಪೆಯಾ ವೀರಶೈವಕ್ಕೆ ಸದೃಶಂ ಸಂದ ಮತವುಂಟೆ ನಿರವಿಸು ಸರ್ವರುಂ ಕೇಳುವಂದದಿಂ'' ಎಂದನು. ಆಗ ಮೇಘಗರ್ಜನೆಯಂತೆ ಚೆನ್ನಾದವು ಹೊರಬಿದ್ದಿತು. ಅದನ್ನು ಕೇಳಿದ ಸರ್ವರೂ ಬೆರಗಾದರು. ರಾಜನೇ ಮೊದಲಾದ ಮುಖ್ಯಮತದವರು ಏಕೋರಾಮನಿಗೆ ನಮಸ್ಕರಿಸಿ ಶರಣಾಗತರಾದರು.

ವ್ಯಾಸನೆಂಬ ಬ್ರಾಹ್ಮಣನು ಏಕೋರಾಮನನ್ನು ಗೆಲ್ಲುವೆನೆಂದು ಮುದ್ರಾಪುರಕ್ಕೆ ಬಂದು ನಿಜಶಿಷ್ಯರ ಸಮೇತ ಹರನೀದಧಿಕ ಹರಿಯೆ ಸರ್ವೋತ್ಕೃಷ್ಟವೆಂದು ಸಾರಿಸಿ ವ್ಯಾಸ ಪತ್ರಿಕೆಯಲ್ಲಿ ಬರೆಸಿ ಬಾಗಿಲಲ್ಲಿ ಕಟ್ಟಿಸಿದನು ಈ ವಾರ್ತೆಯನ್ನು ವಿದ್ವಾಂಸರು ರಾಜನಿಗೆ ತಿಳಿಸಲು ರಾಜನು ಏಕೋರಾಮನಿಗೆ ಒಂದು ಬಿನ್ನವತ್ತಳೆಯನ್ನು ಬರೆದು

ಕಳಿಸಿದನು. ವ್ಯಾಸ ಏಕೋರಾಮರಂ ವಾದಕ್ಕೆ ಬಂದುನಿಂತನು. ವೀರಭಾಸ್ಕರ ರಾಜನು ಮಂತ್ರಿ ಪ್ರಧಾನ ವಿದ್ವಜ್ಜನರೊಡಗೂಡಿ ಬಂದನು. ಅವರಿಬ್ಬರಿಗೂ ವಾದ ಪ್ರಾರಂಭವಾಯಿತು. ಆಗ ವ್ಯಾಸ "ನಾರಾಯಣಾತ್ಪರಂ ನಾಸ್ತಿ ನಾರಾಯಣಾ ದ್ರುದ್ರಸ್ತ್ವಜಾಯತಯಂನೆ" ಎಂದಂ ಮತ್ತೆ ಉಪನಿಷತ್ತಿನಲ್ಲಿ ಹೇಳಿರುವುದನ್ನು ಉದ್ಧರಿಸಿದನಂ. ಏಕೋರಾಮನಂ ಅಖಿಳ ವೇದಪೌರಾಣಶಾಸ್ತ್ರಂಗಳೊಳ್ ಕಂತುಪಿತನಮಿತ ಭಂಗಂಗಳನ್ನು ಪೇಳಲು ವ್ಯಾಸನು ಸೋತು ಶರಣಾಗತನಾಗಲು ಅವನಿಗೆ ದೀಕ್ಷೆಯನ್ನು ಕೊಟ್ಟು ಶಿವಮಹಿಮೆಯನ್ನು ತಿಳುಹಿ ಶೈವ ವೀರಶೈವವನ್ನು ಉಸುರಿ ನಿಶ್ಚಿಂತನನ್ನಾಗಿ ಮಾಡಿದನಂ.

ಶಿವಲೆಂಕ ಮಂಚಣ್ಣನಂ ವೀರಶೈವೋಪದೇಶವನ್ನು ವೀಶ್ವೇಶಲಿಂಗದಿಂದ ಪಡೆದು ವೀರಶೈವಾಚಾರವನ್ನು ಧರಿಸಿ ಶಿವಗಣದೊಡನೆಯೂ ಅಖಿಳವಿನಿಯೋಗದವರಿಂದಲೂ ಕೂಡಿದ್ದನು. ಕಾಶಿಯಲ್ಲಿನ ತನ್ನ ಮನೆಯ ಮೇಲೆ "ಅನ್ಯಸಮಯಿಗಳ ಮೂಗನ್ನು ಕತ್ತರಿಸುವವನು" ಎಂಬ ಬಿರುದಿನ ಬಾವುಟವನ್ನು ಹಾರಿಸಿಕೊಂಡಿದ್ದನು. ಪರವಾದಿ ಗಿರಿವಜ್ರದಂಡ ಪಂಡಿತ ಎಂದು ಡಂಗುರವನ್ನು ಹೊಯಿಸಿಕೊಂಡಿದ್ದನು. ಕಾಶಿಯಲ್ಲಿದ್ದ ಅನ್ಯಸಮಯಿಗಳು ಏಕದಂಡಿ ತ್ರಿದಂಡಿ ಮೊದಲಾದ ವೈಷ್ಣವ ಮುಖಂಡರು ಒಟ್ಟಾಗಿ ಸೇರಿ ವಿಷ್ಣುವಿಗೆ ಶಿವನೆಲ್ಲಾದರೂ ಸಾಟಿಯೆ ಎಂದು ಗಳಹುತ್ತಿದ್ದರು. ಅವರೆಲ್ಲರೂ ಗದಾಧರನ ಗುಡಿಯಲ್ಲಿ ಸೇರಿದ್ದರು. ಆ ವೇಳೆಗೆ ಸರಿಯಾಗಿ ಮಂಚಣ್ಣನು ವಾದಿಗಳ ಎದೆ ಬಿರಿಯುವಂತೆ ಬಿರುದುಗಳನ್ನು ಹೊಗಳಿಸಿಕೊಂಡು ಬರುತ್ತಿರಲು ಆ ವೈಷ್ಣವರು ಮಂಚಣ್ಣನನ್ನು ಅಡ್ಡಗಟ್ಟಿದರು. ಆಗ ಮಂಚಣ್ಣ ತನ್ನನ್ನು ಅಡ್ಡಗಟ್ಟಿದ್ದಕ್ಕೆ ಕಾರಣವೇನು ಎಂದು ಕೇಳಲು "ನಮ್ಮ ದೇವರ ಇದಿರು ನಿಮ್ಮ ದೇವರೆ ? ನಮ್ಮನ್ನು ಸೋಲಿಸಿ ಹೋಗಿ" ಎಂದರು. ಆ ವೈಷ್ಣವರು "ಅಂಬಂಜಾಂಬಿಕನಾದ ವಿಶ್ವಂಭರೆಯ ಪೊರೆವ ಕುಂಭಿನೀಧರಾಪತ್ರನಾರಾಯಣನೆ ಜಗಕಂ ಬಿಡದೆ ತಾನೆ ಕರ್ತ" ಎಂದು ವಾದಿಸಿದರು. ವಿಷ್ಣುವಿನ ಕೂರ್ಚದಲ್ಲಿ ಈಶ್ವರನುದಿಸಿದ. ಈ ಕ್ಷೇತ್ರದಲ್ಲಿ ಮುಕ್ತಿ ಶ್ರೀರಾಮಮಂತ್ರದಿಂದಲ್ಲದೆ ಶಿವಮಂತ್ರದಿಂದಲ್ಲ. ಆದುದರಿಂದ ವಿಷ್ಣುವೇ ಅಧಿಕ ಎಂದರು. ಅದಕ್ಕೆ ಮಂಚಣ್ಣ ಪಂಡಿತರು ಹರಿಯಜರು ತಮ್ಮೊಳಗೆ ತಾವೇ ಕಾದಾಡಿದ್ದನ್ನು ಬ್ರಹ್ಮನು ವಿಷ್ಣುವಿನ ನಾಭೀಕಮಲದಲ್ಲಿ ಹುಟ್ಟಿದ್ದನ್ನು ವಿಷ್ಣು ಶಿವನ ಅಧೋದ್ವಾರದಿಂದ ಹೊರಬಂದುದನ್ನು ಇವರಿಬ್ಬರೂ ಶಿವನನ್ನು ಕುರಿತು ತಪಸ್ಸು ಮಾಡಿದ್ದನ್ನು ಸಕಾರಣವಾಗಿ ವಿವರಿಸಿ ಅನೇಕ ದೃಷ್ಟಾಂತಗಳನ್ನು ಕೊಟ್ಟು ಅವರನ್ನೆಲ್ಲಾ ವಾದದಲ್ಲಿ ಜಯಿಸಿದನು. ವಿಷ್ಣುವನ್ನು ಶಿವನಿಗೆ ಅಡ್ಡಗೆಡವಿ ಅವರನ್ನು ಸೋಲಿಸಿದನು. ವಿಷ್ಣು ಶಿವಪ್ರತಿಮೆಯಿಂದ ಹೊರಟು ವಿಶ್ವನಾಥನ ಬಳಿಗೆ ಬಂದು ನಮಸ್ಕರಿಸಿದನು. ಆಮೇಲೆ ಶಿವಲೆಂಕಮಂಚಣ್ಣ ಕಲ್ಯಾಣಕ್ಕೆ ಬಂದು ಬಸವೇಶ್ವರನೇ ಮೊದಲಾದ ಪ್ರಮುಖ ಶರಣರನ್ನು ಕಂಡು ಶಿವನಲ್ಲಿಯೂ ಶಿವಲಿಂಗದಲ್ಲಿಯೂ ನಿಷ್ಠೆಬಲಿದು

ಭವದ ಚಿಂತೆಯನ್ನು ಮರೆತು ವೀರಶೈವಧರ್ಮವನ್ನು ಹೊಂದಿ ತ್ರಿಕಾಲದಲ್ಲೂ ಶಿರವನ್ನು ಕತ್ತರಿಸಿ ಕೊಂಡು ಆರತಿಯನ್ನು ಬೆಳಗಿ ಮತ್ತೆ ಶಿರವನ್ನು ಪಡೆದುಕೊಳ್ಳುತ್ತಿದ್ದನು. ಇದೇರೀತಿ ಶಿವನಿಗೆ ಶಿರಗಳನ್ನು ಅರ್ಪಿಸಿ ಮರಳಿ ಪಡೆದುಕೊಳ್ಳುತ್ತಿದ್ದ ಶರಣರನ್ನು ಅಂತರಂಗದಲ್ಲಿ ಸ್ಮರಿಸುತ್ತಿದ್ದ ಮಂಚಣ್ಣ ತನ್ನ ಪ್ರತ್ಯಂಗಗಳನ್ನು ಮಹಾಲಿಂಗಕ್ಕೆ ದಿನಂ ಪ್ರತಿ ಅರ್ಪಿಸುತ್ತ ಉತ್ತಮಾಂಗದ ಕುರುಳ್ಗಳನ್ನು ಕೊಯ್ದು ಅದರಿಂದ ಚವರಿಯನ್ನು ಮಾಡಿ ಗಾಳಿಯನ್ನು ಬೀಸುತ್ತ ಕೈಬೆರಳುಗಳಿಗೆ ಬತ್ತಿಯನ್ನು ಸುತ್ತಿ ಆರತಿಯನ್ನು ಬೆಳಗಿ ಅವನ್ನು ಕತ್ತರಿಸಿಟ್ಟನು. ಶಿರವನ್ನು ಕೊಯ್ದು ಅದರೊಳಗೆ ತುಪ್ಪದ ಬತ್ತಿ ಯನ್ನು ಹಚ್ಚಿ ನೀರಾಜನವನ್ನು ಬೆಳಗುತ್ತಿದ್ದ. ಈರೀತಿ ಪ್ರತಿನಿತ್ಯವೂ ಮಾಡುತ್ತ ಶಿವಯೋಗಾನುಭಾವಶರಧಿಯಲ್ಲಿ ಮುಳುಗಿದ್ದನು.

ವಾಮನ ಮುನೀಶ್ವರನು ಜ್ವಾಲಾಮುಖಿಗೆ ಬಂದು ಶಿವಲೆಂಕ ಪಂಡಿತಾರಾಧ್ಯರಿಗೆ ನಮಸ್ಕರಿಸಿ ದೇವ ನಿಮ್ಮ ದರ್ಶನಮಾತ್ರದಿಂದ ಕೃತಕೃತ್ಯನಾದೆನು. ನೀವು ಈ ಭೂಮಿ ಯಲ್ಲಿ ಏಕೆ ಅವತರಿಸಿದಿರಿ. ನಿಮ್ಮ ಪೂರ್ವಾಪರವನ್ನು ತಿಳಿಸಬೇಕು ಎಂದು ಕೇಳಿ ಕೊಂಡನು. ಅದಕ್ಕೆ ಶಿವನು ಗಿರಿಜೆಗೆ ಚತುರಾಚಾರ್ಯರ ಪೀಳಿಗೆಯನ್ನು ವೀರಶೈವ ಗುರುಮಠದ ಇರವನ್ನೂ ವಾತೂಳ ವೀರಾಗಮ ಪ್ರಮಾಣದಲ್ಲಿ ಹೇಳಿದುದನ್ನು ನಿನಗೆ ನಿರೂಪಿಸುತ್ತೇನೆ ಎಂದನು. ಎಲೈ ಮುನಿಯೆ ವೀರಶೈವದೀಕ್ಷೆಯಿಲ್ಲದ ಮಲದೇಹಿಯ ಅಮಳಲಿಂಗವನ್ನು ಮುಟ್ಟಬಾರದೆಂದು ಪರಶಿವನೆ ಗುರುವಾಗಿ ಅನುಗ್ರಹಿಸಲೆಂದು ಪಂಚಾಚಾರ್ಯರ ನೆಲೆಯನ್ನು ಧರಿಸಿ ಹುಟ್ಟಿದೆವು. ಈ ಗುರುಪಂಚಕಗಳು ಯಾವು ಯಾವುವೆಂದರೆ ಸಾದಾಖ್ಯ ಈಶ್ವರ ಮಹೇಶ್ವರ ರುದ್ರ ಈ ಮಹೋತ್ಕರ ತ್ರಯಕ್ಕೆ ಮೂರ್ತಿ ಪಂಚಕ ಆ ಭಾಗದ ಬಾವನ್ನತತ್ವಗಳ ರೀತಿ ಹೇಗೆಂದರೆ ಪರಶಿವಶಕ್ತಿಗಳ ತೇಜದ ಇರವೇ ಸದಾಶಿವ ಈಶ್ವರ ಉಮಾಮಹೇಶ್ವರ ರುದ್ರ ಈ ತ್ರಯಕ್ಕೆ ಮೂರ್ತಿ ಪಂಚಕ. ಇವರೇ ಪಂಚವಿಧದ ಆಚಾರ್ಯರು.

ಸದಾಶಿವನು ಪಂಚಮುಖ ದಶಭುಜ ದಶಪಂಚನೇತ್ರ ದಶಹೇತಿಯಿಂದಲೂ ಭಾಸುರಸ್ಫಟಿಕ ಸುಕಾಶದಿಂದಲೂ ಕೂಡಿದ್ದಾನೆ. ಈಶ್ವರನು ದ್ವಿಪಾದದಿಂದೆ ಶಿರಮೋದ ದಿಂದ ಚತುರ್ಭುಜಗಳಿಂದ ಕಾಂತಾಸುಕ್ತವಾದ ತ್ರಿನೇತ್ರಗಳಿಂದ ಭೂಷಣಗಳಿಂದ ಸಿಂಹ ಪೀಠದಲ್ಲಿ ವಿಭ್ರಾಜಮಾನನಾಗಿದ್ದನು. ಆ ಮಹೇಶ್ವರನು ಸಾಸಿರ ಶಿರಗಳಿಂದಲೂ ಸಹಸ್ರಾಕ್ಷಿಗಳಿಂದಲೂ ಪದಸಹಸ್ರಂಗಳಿಂದಲೂ ಸಹಸ್ರಭುಜಗಳಿಂದಲೂ ಶೋಭಾಯ ಮಾನವಾಗಿದ್ದನು. ಚಾತುರ್ಭುಜ ತ್ರಿನೇತ್ರ ಏಕಾಸ್ಯದಿಂದಲೂ ಕಾಂತಿಯುಕ್ತನಾಗಿ ಥಳಥಳಿಸುತ್ತ ರುದ್ರನು ವಿರಾಜಿಸುತ್ತಿದ್ದನು.

ನಾಲ್ಕುಮುಖಗಳಿಂದಲೂ ದ್ವಾದಶನೇತ್ರದಿಂದಲೂ ಅಷ್ಟಭುಜಗಳಿಂದಲೂ ಏಕದ್ವಿಪಾದಗಳಿಂದಲೂ ಅತಿಶಯ ಗುಣತ್ರಯಾತ್ಮಕನಾದ ಆ ಚತುರ್ಮೂರ್ತಿ ಒಪ್ಪು ತಿದ್ದನು. ಪ್ರಖ್ಯಾತವಾದ ಈ ಚತುರ್ವಿಧಮೂರ್ತಿಗಳ ವಿವರವೆಂತೆಂದರೆ. ಶಿವಾ

ಮೂರ್ತ್ಯಮೂರ್ತಿ ಕರ್ತೃಕರ್ಮಸಾದಾಖ್ಯಗಳು ಐದು. ರಸೆಗೆ ಭವ, ಜಲಕೆ ಶರ್ವ, ವಹ್ನಿಗೆ ರುದ್ರ, ಮಾರುತಂಗೆ ಮೋದ. ಭೀಮ ಅಂಬರಕ್ಕೆ, ಮಾದೇವನು ಆದಿತ್ಯ. ಚಂದ್ರ ಸೋಮಾತ್ಮರಿಗೆ ಪಶುಪತಿ—ಇವು ಈಶ್ವರನ ಕಲಾಷ್ಟಮೂರ್ತಿಗಳು.

ಶರ್ವ, ಶಿವ, ಮಹಾದೇವ, ನೀಲಕಂಠ, ವೃಷಧ್ವಜ, ಈಶಾನ, ಶಂಕರ, ಭೀಮ ಹರ, ಪಿನಾಕಿ, ಇಂದುಶೇಖರ, ವಿರೂಪಾಕ್ಷ, ಕಪರ್ದಿ, ಮೃಡ, ವಾಮದೇವ, ಭೂತೇಶ, ಶೂಲಿ, ಸರ್ವಜ್ಞ, ಸ್ಥಾಣು, ಪಾರ್ವತಿಪ್ರಿಯ, ಮಹಾಕಾಳ, ಕರಗೊರಲ, ತಾಂಡವೇಶ್ವರ, ಗಂಗಾಧರ, ಗಣೇಶ್ವರ, ಗಜದೈತ್ಯಹ—ಇವು ಶಿವನ ಇಪ್ಪತ್ತೈದು ಮೂರ್ತಿಗಳು. ಇವು ಮಹೇಶ್ವರನ ಸತ್ಕಲಾಮೂರ್ತಿಗಳು. ಶಿವ, ಮಹೇಶ್ವರ, ರುದ್ರ, ಶ್ರೀಕಂಠ, ಶಂಭು, ಈಶ್ವರ, ಬಲವಂತ, ಮಾದೇವ, ಪಶುಪತಿ, ನೀಲಕಂಠ, ವೃಷಧ್ವಜಹರ—ಇವರು ಏಕಾದಶರುದ್ರರು. ರುದ್ರನ ಕಲಾಮೂರ್ತಿಗಳು 12.

ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಹರನೇ ಕಾರಣಕರ್ತ. ಇವು ಹರನ ಮೂರ್ತಿ ತ್ರಯಗಳು. ಇವನ್ನು ವಿಚಾರಮಾಡಿನೋಡಿದರೆ ಅಗಣಿತ ಗುಣತ್ರಯಗಳು. ತ್ರಯಾ ವಯವ ತಿಳಿಯಲು ಅವೇ ಬಾವನ್ನ ವರಕಲಾಮೂರ್ತಿಗಳು. ಇವೇ ಜಗಕ್ಕೆ ಮೊದಲು.

ಕಲಾತ್ರಯದ ತತ್ವಗಳಲ್ಲಿ ಒಪ್ಪುವ ಪಂಚತತ್ವಗಳ ಶ್ರೇಣಿಯಲ್ಲಿ ಬಾವನ್ನ ಮೂರ್ತಿಯ ಕಲಾಭೇದಗಳಲ್ಲಿ ಉದ್ಭವಿಸಿದ ಬಾವನ್ನಾಕ್ಷರದ ಕೂಡ ಹುಟ್ಟಿದ ಪಂಚಾಚಾರ್ಯ ಗುರುಜಾಲವು ಈಶನಿಂದ ದೀಕ್ಷೆಯನ್ನು ತಾಳಿ ಶಿವಲಿಂಗವನ್ನು ಅಮಳೈಕ್ಯ, ಅಂಗ, ಕಕ್ಷ, ಶಿರ, ಕರದಲ್ಲಿ ಧರಿಸಿದರು. ಇವರಿಂದ ದೀಕ್ಷೆಯನ್ನು ಪಡೆದವರು ಯಾರೆಂದರೆ—ಸದಾಶಿವನಿಂದ ಭವಾನಿ ದೀಕ್ಷೆಯನ್ನು ಪಡೆದು ಮೌಕ್ತಿಕದ ಲಿಂಗವನ್ನು ಶಿರದಲ್ಲಿ ತಳೆದಳು. ಅಚ್ಯುತನು ಈಶ್ವರನ ಕೈಯಿಂದ ದೀಕ್ಷೆಯನ್ನು ಹೊಂದಿ ಇಂದ್ರ ನೀಲಲಿಂಗವನ್ನು ತನ್ನ ಎದೆಯಲ್ಲಿ ಧರಿಸಿದನು. ಕಮಲಸಂಭವನು ಮಹೇಶ್ವರನಿಂದ ಶಿಲಾಮಯಲಿಂಗವನ್ನು ಪಡೆದು ಕಕ್ಷೆಯಲ್ಲಿ ಧರಿಸಿದ. ಇಂದ್ರನು ವಜ್ರಮಯಲಿಂಗವನ್ನು ರುದ್ರನಿಂದ ಪಡೆದು ಕರದಲ್ಲಿ ಧರಿಸಿದ. ಅಖಿಳ ಸುರಗಣ ಮುನೀಶ್ವರರು ಮಹಲಿಂಗ ಮೂರ್ತಿಯಿಂದ ಇಷ್ಟಾರ್ಥಫಲಗಳನ್ನು ಕೊಡುವ ಪರಿಪರಿಯ ಲಿಂಗಗಳನ್ನು ಪಡೆದು ಧರಿಸಿಕೊಂಡರೆಂದು ನಿಗಮಾಗಮಗಳು ಹೇಳುತ್ತಿವೆ.

ನಂದಿ, ಮಾಕಾಳ, ದೂರ್ವಾಸ, ಕಳಶಜ, ಶತಾನಂದ, ದಧೀಚಿ, ಪಾಣಿನಿ, ಕಣಾದ, ಕಪಿಲ, ಸ್ಕಂದ, ಭೃಂಗಿರಿಟಿ, ವೀರಭದ್ರ, ಚಂಡಿಕೇಶ್ವರ, ಯಮ, ಪಾಶಹಸ್ತ, ಬಾಣಾ ಸುರ, ದಶಕಂಠ, ವಾಲ್ಮೀಕಿ, ವಸಿಷ್ಠ, ತೃಣಬಿಂದು, ಭಾರದ್ವಾಜ ಇವರೇ ಮೊದಲಾದ ವರು ಪರಮವೀರಶೈವರು.

ಸುರಾಸುರರೂ ಪ್ರಮಥಪುಂಗವರೂ ಪಂಚಾಧಿದೇವತೆಗಳೂ, ವೇದಾಳಿಯೂ,

ಹರಕಂಠಾದಿ ಮುನಿಮನುಗಳೂ ಲಿಂಗವನ್ನು ಧರಿಸಿ, ಸಂತತವೂ ಆದರ ಪ್ರಸಾದಸೇವನೆಯಿಂದ ಧ್ಯಾನದಿಂದ ತಿಳಿವಿನಿಂದ ಅರ್ಚಿಸುತ್ತ ಧಾರಣೆಯನಾಂತಿರ್ಪ ಭಾವದಿಂದ ದೀಕ್ಷ್ಯರಾಗಿ ಜಗವನ್ನು ಪಾವನಮಾಡುತ್ತಿದ್ದಾರೆ.

ಈ ರೀತಿಯಿಂದ ವಾತೂಳತಂತ್ರ, ದಿವ್ಯಾಗಮ,. ವೀರಾಗಮವೇ ಮುಖ್ಯ ಆಗಮಗಳೂ ನಿಗಮವ್ರಾತವೂ ಸಿದ್ಧ, ಗಂಧರ್ವ, ಕಿನ್ನರ, ಯಕ್ಷ, ರಾಕ್ಷಸ, ದಿಕ್ಪಾಲರು, ಭೂತಗಳು, ಮನುಮುನಿ ಗಣೇಶ್ವರರೂ, ಹರ್ಯಜರು ಸಾತಿಶಯಲಿಂಗವನ್ನು ಧರಿಸಿ ಭಜಿಸುವರು. ಇದೇ ಕೃತಯುಗಧರ್ಮ. ಇದಕ್ಕೆ ಆಧಾರವಾಗಿ ದಿವ್ಯಾಗಮಗಳಿಂದ ಅನೇಕ ಸಂಸ್ಕೃತಶ್ಲೋಕಗಳನ್ನು ಉದ್ಧರಿಸಲಾಗಿದೆ.

ಸದಾಶಿವೇಶ್ವರ ಮಹೇಶ್ವರ ರುದ್ರರು ಕೃತಯುಗದಲ್ಲಿ ಉಪದೇಶಿಸಲು ಎಲ್ಲರೂ ಶಿವಲಿಂಗಧಾರಣದಿಂದ ಪೂಜೆಯಿಂದ ಶೋಭಿಸುತ್ತಿದ್ದರು. ತ್ರೇತಾಯುಗದಲ್ಲಿ ಗಣೇಶ್ವರ ಸಂಪ್ರದಾಯದೊಳು ಮೊದಲು ಹುಟ್ಟಿದ ಚತುರಾಚಾರ್ಯರು ಯಾರು ಎನ್ನಲು ಏಕಾಕ್ಷರ, ದ್ವ್ಯಕ್ಷರ, ಪಂಚಾಕ್ಷರ, ಷಡಕ್ಷರ ಹೆಸರಿನವರು. ಇವರು ತ್ರೇತಾಯುಗದಲ್ಲಿ ಆಚಾರ್ಯರೆನಿಸಿಕೊಂಡು ಜಗಕ್ಕೆ ಯಾವಾಗಲೂ ಉಪದೇಶವನ್ನು ಮಾಡುವರು. ದ್ವಾಪರದಲ್ಲಿ ರೇಣುಕ, ದಾರುಕ, ಗೋಕರ್ಣ, ಶಂಖುಕರ್ಣರು ಗುರುಗಳೆನಿಸಿಕೊಂಡು ಲೋಕಕ್ಕೆ ದೀಕ್ಷೆಯನ್ನು ಮಾಡುತ್ತ ಚತುರಾಚಾರ್ಯರೆನಿಸಿಕೊಂಡರು.

ದ್ವಾಪರದ ರೇಣುಕ ಗಣೇಶನು ಕಲಿಯುಗದಲ್ಲಿ ರೇವಣೇಶ್ವರನೆಂದಾದ. ದಾರುಕ ಗಣೇಶ್ವರನು ಮರುಳೇಶನಾದ. ಶಂಖುಕರ್ಣಾಚಾರ್ಯನು ಏಕೋರಾಮನಾದ. ಗೋಕರ್ಣನು ಪಂಡಿತಾರಾಧ್ಯನೆಂದು ಭೂಮಿಯಲ್ಲಿ ಅವತರಿಸಿದನು. ಕೃತಯುಗದ ನಾಲ್ವರು ಆಚಾರ್ಯರೊಳಗೆ ಈಶ್ವರನೆ ಮತಿವಂತ. ರೇವಣೇಶ್ವರನೆ ಸದಾಶಿವ. ಮರುಳುಸಿದ್ಧನೆ ಈಶ್ವರ. ಮಹೇಶ್ವರನೆ ಏಕೋರಾಮ. ರುದ್ರತತ್ವಚತುರನೇ ಪಂಡಿತಾರಾಧ್ಯರಾಗಿ ಹುಟ್ಟಿ ಕ್ಷಿತಿಯನ್ನು ಉದ್ಧರಿಸುವುದಕ್ಕೆ ಬಂದರು. ಇವರೇ ಆರಾಧ್ಯರು. ಆಗಮಪ್ರಮಾಣದಿಂದ ಶಿವನು ಶಿವೆಗೆ ಹೇಳಿದ ರೀತಿಯಲ್ಲಿ ಹೇಳಿದೆವು.

ನೀವು ಹೇಳಿದ ಚತುರಾಚಾರ್ಯರ ಆದಿಯನ್ನು ಅತ್ಯಂತ ಹರ್ಷದಿಂದ ಕೇಳಿ ಧನ್ಯನಾದೆನು. ಇನ್ನುಮುಂದೆ ಗುರುಶಿಷ್ಯರ ಸುಲಕ್ಷಣವನ್ನು ಹೇಳಿ ಮುಕ್ತನನ್ನಾಗಿ ಮಾಡುವುದೆನ್ನಲು, ಶಿವಲೆಂಕಮಂಚಣಾರಾಧ್ಯ ನಿರೂಪಿಸಿದರು. ಶಿವರೂಪವನಂತ. ಗುರು ಶಿವನ ಭಕ್ತಿತತ್ಪರವಾಗಲು ಗುರುಲಲಾಮನೆನಿಸಿಕೊಳ್ಳುವನು. ಈರೀತಿ ನಿತ್ಯಾನಿತ್ಯದ ವಿವೇಕವನ್ನು ಪಡೆದು ಇಹಪರಾಪೇಕ್ಷೆಯಿಲ್ಲದವನೆ ಗುರು. ಶಮಮುಖ ಷಟ್ ಸುಗುಣ ಉಳ್ಳವನೇ ಸಚ್ಚಾರಿತ್ರಸಂಪನ್ನ. ಮೋಕ್ಷಾಪೇಕ್ಷೆಯಲ್ಲಿ ಆಸಕ್ತಿಯುಳ್ಳವನೇ ಗುರು. ಸಚ್ಚಿದಾನಂದಸ್ವರೂಪವನ್ನು ಸದಮಳಪ್ರಕಾಶಮಾಡುವ ಪರಿಪೂರ್ಣ ಬೋಧಾಮಯನೇ ಗುರುವಲ್ಲಭ. ವಿಧಿನಿಷೇಧದ ವಿವರಗಳನ್ನು ಬಲ್ಲವನೆ ಗುರು.

ಮಂದನಾಗಮುವ ನೋಡದೆ ಆಗಮಾಮ್ನಾಯ ಶ್ರುತ್ಯರ್ಥ ಷಡಂಗಗಳನ್ನು ವಿಧಿಸಬಲ್ಲವನೆ ಗುರು. ಗುರುಸಂಪ್ರದಾಯದಲ್ಲಿ ಜನಿಸಿ ದೀಕ್ಷಾತ್ರಯ ಸುಸಂಪನ್ನನಾದವನೆ ಗುರು. ಶಿವಪೂಜಾಪರಾಯಣನೂ ಭಸ್ಮರುದ್ರಾಕ್ಷಧಾರಣೆಮಾಡಿದವನೇ ಗುರುಶ್ರೇಷ್ಠ.

ಜಟಾಮುಕುಟ ಮುದ್ರೆ ಪಂಚಭೂಷಣಗಳಿಂದ ಕೂಡಿ ಹರನ ಅವತಾರನಾದವನೇ ಗುರು. ವೀರಶೈವಾಚಾರಸತ್ಕಲಾಸಂಪನ್ನನೂ ಶುದ್ಧಾಂಗನೂ ಪೌರಾಣಜ್ಞನೂ ವಾಗ್ಮಿಯೂ ಶಾಂತಿಕೋವಿದನೂ ಸದ್ಗುಣಭರಿತನೂ ಶೈವಾನುಭವಸಂಪನ್ನನೂ ರಾಗಾದಿ ದುರ್ಗುಣ ವಿಹೀನನೂ ಆದವನೇ ಗುರು.

ವಿನಯ ವಿತರಣ ವಿದ್ಯೆ ವೈರಾಗ್ಯ ಐಶ್ವರ್ಯ ಘನತೆ ತ್ರಿಕರಣಶುದ್ಧಿ ಇವು ಉಳ್ಳವನೆ ಗುರು. ಕರಣೇಂದ್ರಿಯಗಳು ಕ್ಷುಲ್ಲಕವೆಂದು ತಿರಸ್ಕರಿಸಿ ಯಾವಾಗಲೂ ಸದ್ಧರ್ಮ ನಿರತನಾದವನೇ ಗುರು. ಇಂತಹ ಗುರುವನ್ನು ಭಕ್ತಿಯಿಂದ ಸೇವೆಮಾಡುವವನೇ ಶಿಷ್ಯ.

ಸ್ವಾನುಭವದಿಂದ ಈ ಲೋಕ ಅನಿತ್ಯವೆಂದು ಭಾವಿಸಿ ಆತ್ಮಸ್ವರೂಪವನ್ನು ತಿಳಿದು ಜ್ಞಾನವೆಂಬ ದರ್ಶನವನ್ನು ಹೊಂದಿ ಪರಮಾತ್ಮನೆಂತಿರುವನೆಂದು ಮಾನಸಟ ತಿಳಿದು ಶ್ರೀಗುರುವಿನ ಪಾದಸೇವೆಯಲ್ಲಿ ನಿರತನಾದವನೇ ಶಿಷ್ಯ.

ಪಿಂಡವನ್ನು ಹೊಂದಿದ ಜೀವನೇ ಪಿಂಡ. ಆತ್ಮಾನಾತ್ಮ ತತ್ವವಿಜ್ಞಾನದಿಂದ ಪಿಂಡದಜ್ಞಾನಿ ಸಂಸ್ಕಾರಕ್ಕೆ ಅಲಸಿ ಶ್ರೀಗುರುವಿನ ಪಾದಕಮಲಗಳನ್ನು ಅರಸುತ್ತ, ಪತ್ರೆ ಫಲಪುಷ್ಪಗಳಿಂದ ಗುರುವಿಗೆ ನಮಸ್ಕರಿಸುತ್ತ ಗುರುವೇ ಪರಶಿವನೆಂದು ಭಾವಿಸು ವವನೇ ಶಿಷ್ಯ.

ಸಂಸಾರಕ್ಕೆ ಜುಗುಪ್ಸೆಪಟ್ಟು ವೈರಾಗ್ಯವನ್ನೂ ದೋಷವನ್ನೂ ಬಯಸಿ ಸಂಸಾರ ಬಂಧ ಹೇಗೆ ದೊರಕೊಂಡಿತು ಯಾರಿಂದ ದೊರಕೊಂಡಿತು ಯಾರಿಂದ ಪರಿಹಾರ ವಾಗುವುದು ಎಂದು ಸದಾ ಶಿವಧ್ಯಾನ ಗುರುಧ್ಯಾನ ಮಾಡುವವನೇ ಶಿಷ್ಯ.

## ಷಷ್ಠಮಕಾಂಡ

ದೀಕ್ಷಾಕಾಲ ಮಂಟಪೋಪಕರಣಗಳನ್ನು ಮುಂದೆ ನಿರವಿಸಲಾಗಿದೆ. ಶರತ್ಕಾಲ ವೈಶಾಖ ಇವು ಶುಭಕರವಾದ ಮಾಸಗಳು. ಮಾರ್ಗಶಿರ ಫಾಲ್ಗುಣ ಜ್ಯೇಷ್ಠಮಾಸಗಳು ಮಧ್ಯಮ. ಮಾಘ ಆಷಾಢ ಕನಿಷ್ಠ. ಚೈತ್ರ ಶ್ರಾವಣ ಭಾದ್ರಪದ ಪುಷ್ಯ ಇವು ನಾಲ್ಕು ನಿಂದ್ಯಮಾಸಗಳು.

ವಿಧು ರವಿಗ್ರಹಣ ದಿನಗಳಲ್ಲಿ ಮೇಷ ತುಲಾ ಮೊದಲಲ್ಲಿ ಎರಡು ಅಯನಗಳಲ್ಲಿ ಹೋಳಿ, ನೂಲಹುಣ್ಣಿಮೆಗಳಲ್ಲಿ ಗುರುಪರ್ವ ಸಿತಪಕ್ಷ ದೀಕ್ಷೆಗೆ ಒಳ್ಳೆಯದು. ಬುಧ ಚೌತಿ ನವಮಿ ಷಷ್ಠಿ ಅಷ್ಟಮಿ ಹದಿನಾಲ್ಕನೆಯದಿನ ಹುಣ್ಣಿಮೆ ಬಿಟ್ಟು ಮಿಕ್ಕ ತಿಥಿಗಳು ದೀಕ್ಷೆಗೆ ಅನುಕೂಲ.

ಭೋಗಿಗಳಿಗೆ ಶುಕ್ಲಪಕ್ಷ ಉತ್ತಮ. ವಿರಾಗಿಗಳಿಗೆ ಕೃಷ್ಣಪಕ್ಷ ಉತ್ತಮ. ಮುಮುಕ್ಷುಗಳಿಗೆ ಈ ಎರಡು ಪಕ್ಷಗಳಲ್ಲೂ ಯೋಗ ಅಳವಡುವುದಿಲ್ಲ. ರವಿವಾರ

ಮಂಗಳವಾರ ಶನಿವಾರಗಳನ್ನು ಬಿಟ್ಟು ಉಳಿದ ವಾರಗಳು ದೀಕ್ಷಾಕಾಲಕ್ಕೆ ಯೋಗ್ಯವಾದುವು ಎಂದು ಶಂಕರಸಂಹಿತೆಯಲ್ಲಿ ಹೇಳಿದೆ.

ರೋಹಿಣಿ ಶ್ರವಣ ರೇವತಿ ಪುನರ್ವಸು ಪುಷ್ಯ ಮೂಲ ಮೃಗಶಿರೆ ಮಘೆ ಅನುರಾಧೆ, ಉತ್ತರ, ಹಸ್ತ–ಈ ಹದಿನಾಲ್ಕು ನಕ್ಷತ್ರಗಳು ದೀಕ್ಷೆಮಾಡಲು ಶುಭ. ಉಳಿದವು ಅಶುಭ. ಹರಿ ವೃಶ್ಚಿಕ ಕುಂಭ ಮಿಥುನ ಕನ್ಯಾ ಮೀನ ನಕ್ಷತ್ರಗಳು ಶುಭಪ್ರದ. ಮೇಷಾದಿ ನಾಲ್ಕುರಾಶಿಗಳು ಅಶುಭಗಳು.

ಜೀವ ಕವಿ ಬುಧರ ಉದಯದಲ್ಲಿ ದೀಕ್ಷೆ ಉತ್ತಮ. ಮಘೆಯೇ ಮೊದಲಾದ ಶ್ರುತಾರೆಗಳಲ್ಲಿ ಸಲ್ಲದು. ಅಷ್ಟಮ ದ್ವಾದಶಸ್ಥಾನಗಳಲ್ಲಿ ಯಾವ ಗ್ರಹವಿದ್ದರೂ ಅಯೋಗ್ಯ. ಕೇಂದ್ರಸ್ಥಲಗಳಲ್ಲಿ ಜೀವನಿದ್ದರೂ ಲಗ್ನದಲ್ಲಿ ಕವಿಯಿದ್ದರೂ ಅಖಿಳದೋಷಗಳೂ ತಾವೇ ಪರಿಹಾರವಾಗುತ್ತವೆ.

ಹಿಂದೆ ಹೇಳಿದ ಉಪದೇಶ ಕಾಲ ಲಕ್ಷಣಗಳು ಪುರಾಣಪ್ರಮಾಣಗಳುಳ್ಳವಾಗಿವೆ. ವೀರಾಗಮೋತ್ತರದ ವೀರಮಾಹೇಶ್ವರ ತಂತ್ರದಲ್ಲಿ ಇಂದುಧರನು ಪಾರ್ವತಿಗೆ ಹೇಳಿದ ರೀತಿ ಹೇಗೆಂದರೆ—ರವಿಯು ಉತ್ತರಾಯಣವನ್ನು ಸೇರಲು ಗಣವೃಂದಕ್ಕೂ ಶಿಷ್ಯರಿಗೂ ದೀಕ್ಷಾಕಾಲ. ಇದಕ್ಕೆ ಶುಭಲಗ್ನತಿಥಿಯನ್ನೂ ಬಯಸುತ್ತಾರೆ.

ಶಶಿತಾರೆಗಳು ಕೂಡಿದರೆ ತಿಥಿ ವಾರ ತಾರಾಯೋಗ ಕರಣ ಪಂಚಕಮಿಶ್ರ. ಗುರು ಶುಕ್ರರು ವಿಷಮವಿಲ್ಲದೆ ಬೆರೆದ ಪಂಚಾಂಗಶುದ್ಧಿಯೂ ಅವರ ಉದಯದ ಸಮಯವೂ ಮಹಾಲಗ್ನ. ಸುರಗುರು ಕಾವ್ಯಬುಧ ವಿಧುದೃಷ್ಟಿಯಿಂದ ಕೂಡಿದರೆ ಶುಭ. ದೋಷ ಅಲ್ಪ. ಅಧಿಕಗುಣ. ಗುರುಗಳು ಇವನ್ನು ಶೋಧಿಸಿ ನೋಡಬೇಕು. ಅಶ್ವಿನಿ ತಾರೆ ವಹ್ನಿ ಇವು ಸುಖವನ್ನೂ ರೋಹಿಣಿ ಮೃಗಶಿರೆ ಸಂತುಷ್ಟವನ್ನು ಪೂರ್ಣಶಶಿಯೋಗದಿಂದ ಆಚಾರನಿಷ್ಠೆಯನ್ನೂ ರುದ್ರನಕ್ಷತ್ರ ಸಾಯುಜ್ಯವನ್ನೂ ಅದಿತಿನಕ್ಷತ್ರ ತತ್ವಜ್ಞಾನವನ್ನೂ ಉಂಟುಮಾಡುತ್ತವೆ.

ಪುಷ್ಯನಕ್ಷತ್ರ ಗುರುಭಕ್ತಿಯನ್ನುಂಟುಮಾಡುತ್ತದೆ. ಉರಗನಕ್ಷತ್ರ ತಮೋಜ್ಞಾನವನ್ನೂ, ಪಿತೃತಾರೆ ಆಯುಃಕ್ಷೀಣವನ್ನೂ ಮಾಡುತ್ತದೆ. ಫಲ್ಗುಣಿಯು ಜ್ಞಾನ ವೈರಾಗ್ಯ ಭಕ್ತಿಗಳನ್ನು ಕೆಡಿಸುತ್ತದೆ. ಉತ್ತರೆ ಶಿವಚಿಂತೆಯನ್ನೂ ಭಗರ್ಷ ತೈಜಸ ಬುದ್ಧಿಯನ್ನೂ ಚಿತ್ತೆ ಚೇತನವಿಕಾರವನ್ನೂ ಉಂಟುಮಾಡುತ್ತದೆ.

ಪವನ ನಕ್ಷತ್ರದಲ್ಲಿ ದೀಕ್ಷೆಯನ್ನು ಮಾಡಿದರೆ ಬಾಂಧವವಿಯೋಗವಾಗುತ್ತದೆ. ಇಂದ್ರವಹ್ನಿತಾರೆಗಳು ಪುತ್ರಮಿತ್ರಾದಿ ಪರಿಭವವನ್ನೂ, ಶಿವಲಿಂಗದ್ರೋಹವನ್ನೂ ಮಾಡುತ್ತವೆ. ಶಿವಜ್ಞಾನಕರವಾದುದು ಮೈತ್ರನಕ್ಷತ್ರ. ಇಂದ್ರನಕ್ಷತ್ರ ಶಿವಭಕ್ತಿಯನ್ನು ತೋರುತ್ತದೆ. ಮೂಲ ತನ್ನ ಭಾವವನ್ನು ಕೆಡಿಸುವ ಜ್ಞಾನವನ್ನು ಕಾಣಿಸುತ್ತದೆ.

ಉತ್ತರಾಷಾಢ ಜಲತಾರೆ ಶುಭವನ್ನು ಕೆಡಿಸುತ್ತದೆ. ಶ್ರವಣ ಫಲಸಿದ್ಧಿಯನ್ನುಂಟುಮಾಡುತ್ತದೆ. ಧನಿಷ್ಠ ದೀಕ್ಷೆಗೆ ಅಳವಡುವುದಿಲ್ಲ, ಕೇಡನ್ನುಂಟುಮಾಡು

ತ್ತದೆ. ಪೂರ್ವಾಭಾದ್ರ ಸುಜ್ಞಾನಬೋಧೆಯನ್ನು ಮಾಡುತ್ತದೆ. ಉತ್ತರಾಭಾದ್ರ ಶಿವಾದ್ವೈತಜ್ಞಾನವನ್ನು ಕೆಡಿಸುತ್ತದೆ.

ರೇವತಿಯು ಷಟ್ಸ್ಥಲಬ್ರಹ್ಮಸೂಚನೆಗೆ ಕಾರಣ. ಶಿವಕಲಾಸಿದ್ಧಿಯನ್ನೂ ಜ್ಞಾನಮುಕ್ತಿಯನ್ನೂ ಸಪ್ತವಿಂಶತಿ ನಕ್ಷತ್ರಗಳುಂಟುಮಾಡುತ್ತವೆ. ರವಿವಾರ ಶಾಶ್ವತ ವಾದ ಫಲಗಳನ್ನೀವುದು. ಸೋಮವಾರ ವ್ಯಾಧಿಯನ್ನುಂಟುಮಾಡುವುದು. ಹರನ ಸಂಸ್ಕಾರಯುತ ಲಿಂಗಾಂಗಸಂಗ ಸುಜ್ಞಾನಫಲವನ್ನು ಪಾಲಿಸುತ್ತದೆ.

ನಕ್ಷತ್ರ, ವಾರ, ತಿಥಿಗಳ ಫಲಾಫಲಗಳನ್ನೂ ಯೋಗ, ಲಗ್ನ, ಕರಣ— ಇವು ಗಳಿಂದಾಗುವ ಪರಿಪರಿಯ ಕರ್ಮಫಲಗಳನ್ನೂ ನಿರೂಪಿಸಲಾಗಿದೆ. ರಾಶಿಗಳಿಂದಾಗುವ ಫಲ, ಮಾಸಗಳಿಂದಾಗುವ ಫಲಾಫಲ–ದೀಕ್ಷೆಗೆ ಶುದ್ಧವಾದ ದಿನವನ್ನು ಸೂಚಿಸಲಾಗಿದೆ.

ವೀರಶೈವ ಸಂಪನ್ನರಾದ ಗುರುಗಳು ಲೋಕದ ಇರವುಳ್ಳ ಶಿಷ್ಯರನ್ನು ಕುರಿತು ಪಂಚಾಂಗ ವಸ್ತುಗಳನ್ನು ಚೆನ್ನಾಗಿ ಶೋಧಿಸಿಕೊಳ್ಳಬೇಕು. ಇವರು ಕಾಲಾತೀತರು, ನಿತ್ಯರು. ಕಾಲಾದಿ ತತ್ವಗ್ರಹಗಳು ಭಂಟರು. ಇವರನ್ನು ಅರಿಯದೆ ಕಾಲಗ್ರಹರಾಶಿಗಳು ವಕ್ರಿಸಲು ಒಗಸಿ ಧೂಳೀಪಟಮಾಡುವರು. ಇದಕ್ಕೆ ಕಲ್ಪಾಂತಭೈರವ ಮನೋ ಹರರೇ ಸಾಕ್ಷಿ.

ಸಮುದ್ರದ ದಂಡೆ, ಪುಣ್ಯಾರಣ್ಯ, ಪುಣ್ಯತೀರ್ಥ, ಶಿವಾಲಯ, ಶಿವಕ್ಷೇತ್ರ, ಶಿವಾ ರಾಮ, ಶುಭಗೇಹ, ಪರ್ವತದತುದಿ. ಗಿರಿಯತಪ್ಪಲು, ನದಿ, ನದೀತೀರ, ಅಧಿಕವಾದ ದೇಶಿಕಾಶ್ರಮ, ಗುರುಮನೆಯ ಈಶಾನ್ಯದಿಕ್ಕಿನಲ್ಲಿ ಭೂಶೋಧನೆಯನ್ನು ಮಾಡಬೇಕು.

ನೀಚಾಲಯ ಆಶೌಚಭೂಮಿ ಶ್ವಪಚರ ಕೇರಿ ಶ್ಮಶಾನ— ಇವು ಖನನಕ್ಕೆ ನೀಚ ಸ್ಥಾನಗಳು. ಭೂಖನನ ಮಾಡಿದಮೇಲೆ ಅದನ್ನು ಶುಚಿಯಾಗುವಂತೆ ಪರಿಶೋಧಿಸಿ ಆ ಮಣ್ಣನ್ನು ಸುಟ್ಟು ಅದಕ್ಕೆ ನೀರನ್ನು ಚಿಮುಕಿಸಿ ಸಮಮಾಡಿ ಕನ್ನಡಿಯಂತೆ ಮಿನುಗುವ ಹಾಗೆ ಷಟ್ಕರ್ಮಗಳಿಂದ ನಿಬದ್ಧಗೊಳಿಸಿ ಗೋಮಯದಿಂದ ಶುದ್ಧಿಮಾಡಿ ಗೋಕ್ಷೀರ ಗೋರೋಚನ ಗೋಮೂತ್ರ ಗೋಘೃತ ಗೋದಧಿಯಿಂದ ಶುಚಿಮಾಡಬೇಕು.

ಭೂಮಿಯನ್ನು ಷಟ್ಕರ್ಮದಿಂದ ಪರಿಶುದ್ಧಿಮಾಡಿದ ಮೇಲೆ ವಾಸ್ತುಲಕ್ಷಣದಿಂದ ಮಂಟಪ ರಚನೆಯನ್ನು ಮಾಡುವ ಕ್ರಮವೆಂತೆಂದರೆ: ದೀಕ್ಷಾಮಂಟಪದ ಪ್ರಮಾಣ ಬತ್ತೀಸವಿಂಶತಿಹಸ್ತವಾದರೂ ಪಂಚಕ ಸಪ್ತನವಹಸ್ತಮಾನಗಳಿಂದ ರಚಿಸುವುದು ಉತ್ತಮ.

ಮಂಟಪದ ಕಂಬಗಳ ಆಳತೆ ವಿವರಣೆ—ನಾಲ್ಕು ದ್ವಾರಗಳಲ್ಲಿ ಮಾವು ಆಲ ಅತ್ತಿ ದೋಣೆಯ ತೋರಣಗಳನ್ನು ಕಟ್ಟಬೇಕು. ಕಂಬಗಳ ದಪ್ಪದ ವಿವರ-12, 8 ಅಥವಾ 5 ಕೈ ಉದ್ದವಾದ ಹುಳುಕಿಲ್ಲದ, ಡೊಂಕಿಲ್ಲದ, ಎಳೆ ನೇರವಾದ ಕಂಬಗಳನ್ನು ಭೂಮಿಯಲ್ಲಿ 5 ಗೇಣುದ್ದದ ಆಳತೆಗೆದು ನೆಡಬೇಕು. ಅವಕ್ಕೆ ತೆಂಗು, ಅಡಕೆ,

ಬಿದಿರು, ದರ್ಭೆಗಳ ಸೋಗೆಯನ್ನು ಹೊದಿಸಬೇಕು. ಆ ಕಂಬಗಳ ದಪ್ಪ 50 ಅಂಗುಲವಿರಬೇಕು. ತೋರಣದ ಎರಡುಕಡೆ ತ್ರಿಶೂಲ ರಚಿಸಿ ದಶದಿಕ್ಕುಗಳಲ್ಲಿಯೂ ಕರಿಗಳ ಮೇಲೆ ದಶವಿಧ ಶಕ್ತಿಯರನ್ನುಕೂಡಿಕೊಂಡು ದಶವಿಧ ರುದ್ರರ ಶಕ್ತಿಯರ ವಾಹನವನ್ನು ದಶಪಟಗಳಲ್ಲಿ ಬರೆದು ಆ ಚಿತ್ರಪಟಗಳನ್ನು ದಶದಿಕ್ಕುಗಳಲ್ಲಿಯೂ ಬಂಧಿಸಬೇಕು.

ನಂದಿಧ್ವಜಗಳಿಂದಲೂ ಸುತ್ತಲೂ ಹತ್ತಿಸಿರುವ ದೀಪಗಳಿಂದಲೂ ಚತುಸ್ತಂಭ ಮಧ್ಯದಲ್ಲಿ ಅರತ್ನಿಮಾತ್ರದ ಉನ್ನತವಾದ ಜಗಲಿಯಲ್ಲಿ ವಿಸ್ತಾರವಾದ ಪಂಚಕಾರತ್ನಿ ನಿಯತದಲ್ಲಿ ಯಾಗವೇದಿಕೆಯನ್ನು ಮಂಡಲಕ್ಕೋಸುಗ ಆಗಮಸಿದ್ಧರಾದವರು ಮಾಡುವುದು. ಪಟ್ಟುಪಟ್ಟಾವಳಿಗಳನ್ನೂ ಚಿತ್ರತರವಾದ ದುಕೂಲಗಳನ್ನೂ ಮೇಲೆ ಕಟ್ಟಬೇಕು. ಸಿಂಧ ಸೀಗುರಿ ಚಾಮರಗಳನ್ನು ಕಟ್ಟಿ ಚಿಗುರಿನಿಂದ ಅಲಂಕರಿಸಿ ತಳಿರುತೋರಣಗಳನ್ನು ಕಟ್ಟಿ ಮುತ್ತುಗಳಿಂದಲೂ ನವರತ್ನಗಳಿಂದಲೂ ಸಿಂಗರಿಸಬೇಕು. ಜವಾದಿ ಪನ್ನೀರು ಗಂಧಲೇಪನಗಳಿಂದಲೂ ಗಂಟೆ ಕನ್ನಡಿ ಚಾಮರಗಳಿಂದಲೂ ಮಂಟಪವನ್ನು ಅಲಂಕರಿಸಬೇಕು. ಮುತ್ತಿನತೋರಣ ರನ್ನತೋರಣ ಕನಕತೋರಣ ರೌಪ್ಯತೋರಣ ಕಾಂಸ್ಯತೋರಣ ಹಸಿರುತೋರಣ ತಳಿರ್ದೋರಣ ಮಕರತೋರಣ ಮುಕುರತೋರಣಗಳಿಂದಲೂ ಕಂಬ್ಮಲದ ತೋರಣಗಳನ್ನು ರಚಿಸಿ ಶೃಂಗರಿಸಬೇಕು. ಪರಿಪರಿಯ ಪುಷ್ಪಮಾಲೆಗಳಿಂದಲೂ ತಳಿರ್ಮಾಲೆ ದುರ್ವಾಂಕುರಮಾಲೆ ಕುಶಮಾಲೆ ಮೌಕ್ತಿಕಮಾಲೆ ಪವಳದ ಮಾಲೆ ರನ್ನಮಾಲೆಗಳಿಂದಲೂ ಹೊಂಬಾಳೆಯಕಂಬ ಚಂದನಕಂಬ ವಜ್ರಕಂಬ ಗೋಮೇಧಿಕಕಂಬ ಹೊನ್ನು ರನ್ನ ನೀಲ ವಿದ್ರುಮಕಂಬಗಳಿಂದ ಪ್ರಕಾಶಮಾನವಾಗುವಂತಿರಬೇಕು. ನಾನಾವಿಧವಾದ ವಾದ್ಯಗಳಿಂದಲೂ ವೇದನಾದದಿಂದಲೂ ಕಸ್ತೂರಿ ಕುಂಕುಮದ ಸಾರಣೆ ಕಾರಣೆಗಳಿಂದಲೂ ವೀಣಾನಾದದಿಂದಲೂ ಭಕ್ತಸಮೂಹದಿಂದಲೂ ವೇದಮಂತ್ರಗಳ ಘೋಷಣೆಯಿಂದಲೂ ನಾನಾವಿಧವಾದ ವಾದ್ಯಧ್ವನಿಗಳಿಂದಲೂ ದೀಕ್ಷಾಮಂಟಪ ಮೆರೆಯುತ್ತಿತ್ತು.

ಚಿನ್ನದ ಕಂಬಗಳಿಂದಲೂ ಮಘಮಘಿಸುವ ಧೂಪದೀಪಗಳಿಂದಲೂ ದುಂದುಭಿ ಧ್ವಾನವೇ ಮೊದಲಾದ ಪಾಠಕನಾಟಕ ಮಹೇಶ್ವರರ ಸಮೂಹಗಳಿಂದಲೂ ಮಂಟಪ ಕಂಗೊಳಿಸುತ್ತಿತ್ತು. ಹಸೆಜಗಲಿಗಳಿಂದಲೂ ವಿವಿಧ ಅಲಂಕಾರಗಳಿಂದಲೂ ರಾಜಾನ್ನವೇ ಮೊದಲಾದ ಪಿಷ್ಟದ ರಂಗವಲ್ಲಿಗಳಿಂದಲೂ ಶೋಭಾಕರವಾಗಿತ್ತು.

ಸಿತಕುಂಕುಮ ಕಸ್ತೂರಿರಜದ ಚಿತ್ರತರ ಪದ್ಮಕಳಶಬಂಧದ ರಂಗವಲ್ಲಿಯನ್ನು ಮಾಡಬೇಕು. ಪಂಚಕಲಶಸ್ಥಾಪನೆಯಾದಮೇಲೆ ವೀರಶೈವಾಚಾರ ಪಂಚಾಧ್ಯರಾದ ಸುಜ್ಞಾನಸಂಪನ್ನರೆನಿಸಿದ ಚತುರಾಚಾರ್ಯರಿಗೆ ವಂದನೆಯನ್ನು ಮಾಡಿ ಪಂಚಮಹ ವಾದ್ಯಘೋಷದಿಂದ ಕರೆತಂದು ಅಷ್ಟವಿಧಪೂಜೆಯನ್ನು ಮಾಡಿ ಸ್ವರ್ಣಾಂಬರವನ್ನು ಹೊದಿಸಬೇಕು. ಕಳಸ್ಯಂಬ ಮಂತ್ರ ಪೂರ್ವಕ ಪದ್ಮಗಳ ಮೇಲೆ ಕಳಶವನ್ನಿಡಬೇಕು.

ಆ ಪೋವಾ ಇದಂ ಎನ್ನುವ ಮಂತ್ರಹೇಳುತ್ತ ನೀರನ್ನು ತುಂಬಬೇಕು. ಊರ್ಣನಾಭಿ ಎನ್ನುವ ಮಂತ್ರವನ್ನು ಪಠಿಸುತ್ತ ಇಪ್ಪತ್ತೇಳುಎಳೆ ನೂಲನ್ನು ಸುತ್ತಬೇಕು. ಸಹಿರಣ್ಯಾನಿ ಎನ್ನುವ ಮಂತ್ರಪೂರ್ವಕವಾಗಿ ಚಿನ್ನವನ್ನು ಕಳಶದೊಳಗಿಡಬೇಕು. ಸರ್ವವರ್ಣೇ ಮಹಾದೇವಿ ಎನ್ನುವ ಮಂತ್ರದಿಂದ ಸುವರ್ಣಪುಷ್ಪ ಎಂದರೆ ಹಣವನ್ನಿಡ ಬೇಕು. ಏಷರುದ್ರೇ ಎಂಬ ಮಂತ್ರದಿಂದ ಪಲ್ಲವಗಳನ್ನು ಕಳಸದಲ್ಲಿಟ್ಟು ಇವಂ ವಸ್ತ್ರಾಣಿ ಎಂಬ ಮಂತ್ರದಿಂದ ಕೂಡಿ ವಸ್ತ್ರಗಳನ್ನು ಹೊದಿಸಬೇಕು. ಅನಂತರ ನಾನಾವಿಧಮಂತ್ರ ಗಳಿಂದ ಕಲಶಪೂಜೆಯನ್ನು ಮಾಡಬೇಕು.

ಋತ್ವಿಜರ ಕಲಶದ ಲಕ್ಷಣವನ್ನು ವಿವರಿಸಲಾಗಿದೆ. ಅಷ್ಟದಳ ಪದ್ಮದ ಮಧ್ಯ ದಲ್ಲಿ ಹೇಮಕಳಶ ಸುರಗಂಗೆ ಮೇರುಗಿರಿ ಕಲ್ಪತರುತತ್ವ, ನಭಸುಮವೇ ಧೇನು ಸಂತತವೂ ಸಮಾನವಾದ ಪರಮಾತ್ಮಶಕ್ತಿ, ಶಿವನ ಸಾದಾಖ್ಯ. ಆ ಲಿಂಗವು ಈಶಾನನಂತೆ ಮುಖಪ್ರಣವಾರ್ಣವು. ಯಕಾರಾಕ್ಷರ ಮೂಲಪಂಚಾರ್ಣಮಂತ್ರ. ಈ ಕಳಶದ ಒಡೆಯ ವಿಶ್ವೇಶ್ವರಾಚಾರ್ಯ. ಕಾಯಕಾಂತಿ ತಪ್ತಕಾಂಚನವರ್ಣ ಕಪಟರಹಿತಮನ, ಉನ್ಮನಿಶಕ್ತಿ, ಧ್ವಜಹಂಸವಿಸ್ತಾರ, ಆಕಾಶಕೇಶ, ಆತ್ಮಾಶ್ರಯ, ನವರತ್ನಕೋಟೀರ, ತತ್ವದಂಡ, ಬೆಳಗುವ ಕರ್ಪರ, ಗಗನಮುದ್ರೆ, ಶಾಂತಿಭಸಿತದ ಉದ್ಧೂಳನ, ದಿಗ್ವಸನವೇ ಭೂಷಣ, ಸಚ್ಚಿದಾನಂದಮಯವೇ ಪ್ರಾಣಲಿಂಗ, ರವಿಸಂಕಾಶ, ನಿರ್ಭಾವ ಸೆಜ್ಜೆಯೊಳಗೆ ಅಜರಂಧ್ರದಲ್ಲಿ ಧರಿಸುತ್ತ ಸಾಸಿರದಳದಿಂದ ಭಜಿಸುತ್ತ ಶಶಿಕಾಂತತಳದ ವೈರಾಗ್ಯ ಪೀಠದಲ್ಲಿ ಭದ್ರಾಸೀನನಾಗಿರುವನು. ಪ್ರಮಥಮುನಿಗಣರೆಲ್ಲರೂ ಯಾವಾಗಲೂ ಪೂಜಿಸುತ್ತಿರುವರು. ಇದೇ ಪರತತ್ವ ಶ್ರೀಗುರುಕಳಶ. ಅವರ ಶಾಖೆಗಳು ಈಶಾನ್ಯದಲ್ಲಿ ಲೋಹಘಟ, ಪಾತಾಳಗಂಗೆ, ನಕ್ಷತ್ರ ಗೋತ್ರ. ಮಂದಾರಕುಜ ಕಪಿಲೆ ಗೋ, ವಾಯು ಭೂತ ಅನಾದಿಯ ಶಕ್ತ್ಯಮೂರ್ತಿಸಾದಾಖ್ಯ, ತತ್ಪುರುಷಮುಖ, ಸುಪ್ರಸಾದಲಿಂಗ ಸಾಮವೇದದ ಶಾಖೆ. ವಕಾರವೇ ಬೀಜ. ಸ್ಥೂಲಪಂಚಾಕ್ಷರ ಚಿರಮಂತ್ರ. ಆಚಾರ್ಯ ರೇವಣೇಶ್ವರನ ಅಂಗವು ಮಿರುಗುವ ಮಾಣಿಕ್ಯವರ್ಣ. ವೃಷಕೇತು, ವಾಹನಸಿಂಹ, ಯತಿಯ ಆಶ್ರಮ ಅಷ್ಟಶಿಖಿಯೋಗದಂಡ, ಅವಧೂತಮಾರ್ಗ, ಆಚಾರ ಖಪ್ಪರವು ಬಲಮುರಿಮುದ್ರೆ, ಕ್ಷಮೆ, ಭಸ್ಮ, ರುದ್ರಾಕ್ಷ, ಹಾರ, ಕೇಯೂರ ಮುಖ್ಯಾಭರಣಗಳು. ಕಾರ್ಪಾಸದ ಕಂಥೆ ಅವರ ಪ್ರಾಣಲಿಂಗ. ಶಾಂತಮಲ್ಲಿಕಾರ್ಜುನಲಿಂಗ, ಸುಜ್ಞಾನದ ಕಾಂತಿ, ಸುಮನಸದ ಸೆಜ್ಜೆ, ಭೂಮಧ್ಯದಲ್ಲಿ ಅಷ್ಟದಳವನು ಸಮರ್ಪಿಸಿ ಆರಾಧಿಸುತ್ತ ವಜ್ರದ ಶಿಲಾತಳದಲ್ಲಿ ಮಾರ್ಪೊಳೆಯುವ ಪೀಠದಲ್ಲಿ ಪದ್ಮಾಸನನಾಗಿ ಮೆರೆಯುತ್ತಿರುವ ಗುರುವಿನ ಪಾದಪದ್ಮಗಳನ್ನು ಹರಿವಿರಿಂಚಿಗಳು ವಿದ್ಯಾಧರರು ಸಿದ್ಧರು ಕೋಟಿಸಂಖ್ಯೆ ಯಲ್ಲಿ ಭಜಿಸುತ್ತಿರುವರು. ಗುರುಕಳಸಕ್ಕೆ ಅಗ್ನಿಯ ದಿಕ್ಕಿನಲ್ಲಿ ತಾಮ್ರದ ಕಳಸ. ಗಂಗಾವತಿ ಗಂಗೆ ತ್ರಿಕೂಟಪರ್ವತ, ಸುರಭಿಧೇನು, ಪಾರಿಜಾತ. ಅಗ್ನಿ, ಭೂತ, ವ್ಯಾನ, ವಾಯು, ಇಚ್ಛಾಶಕ್ತಿ, ಮೂರ್ತಿಸಾದಾಖ್ಯ, ಚರಲಿಂಗ, ಘೋರಮುಖ, ಅಥರ್ವಣಶಾಖೆ

ಬೀಜ, ಶಿಕಾರರಿದೆನಿಪಸೂಕ್ಷ್ಮಕ, ಚೂರ್ಣ, ಅಲ್ಲಿಯ ಗುರುಗಳು ಮರುಳಸಿದ್ಧೇಶ್ವರರು. ಅವರ ಶರೀರವೇ ನೀಲರತ್ನದ ಕಾಂತಿ. ವ್ಯಾಘ್ರವೇ ವರೂಥ, ಶಿಖಿ ಅನಂತ, ವಾನಪ್ರಸ್ಥಾಶ್ರಮ, ಅವಧೂತ ಮಾರ್ಗ, ಧೂಮಧ್ವಜ, ಕಃಠಾರವೆ ದಂಡ, ಅವಿಚಾರ ಖರ್ಪರ ಎಡಮುರಿ ಮುದ್ರೆ ದಯೆಧರ್ಮ ಅವಿರಳದಯಾಭಸ್ಮ ಶಿವಯೋಗ ಮಣಿ ಭೂಷಣ ಜಜ್ಜುಗಂಥೆ ಪ್ರಾಣಲಿಂಗ ಕಪಿಲಸಿದ್ಧಮಲ್ಲೇಶ, ಪವನಸಖಕಾಂತಿ, ಶಿಂಶುಮಾರ ಶಿಷ್ಯ ಅವಿರತದ ನಿರಹಂಕರಣದ ಸೆಜ್ಜೆಯೊಳಗೆ ಅವಿಗತ ವಿಶುದ್ಧಿ ಚಕ್ರದ ಮೇಲೆ ಧರಿಸಿ ಷೋಡಶದಳದಿಂದ ಪೂಜಿಸುತ್ತ ಇಂದ್ರನೀಲದ ಶಿಲಾತಳದ ಅನುಪಮದ ಪೀಠಾಗ್ರದಲಿ ಸಿದ್ಧಾಸನದಲ್ಲಿ ಯಾವಾಗಲೂ ರಾಜಿಸುತ್ತಿರುವ ಗುರುವರನನ್ನು ಯಕ್ಷ, ರಾಕ್ಷಸ, ಮುನೀಶ್ವರರು ಭಜಿಸುತ್ತಿರುವರು. ಇದು ಅಗ್ನಿದೆಸೆಯ ಕಳಸ. ಇನ್ನು ನೈಋತ್ಯದಿಕ್ಕಿನಲ್ಲಿ ಮಿನುಗುತ್ತಿರುವ ರತ್ನ ಕಳಸ. ಸಿಂಧು, ಗಂಗೆ, ಕೌಮಾರ ಪರ್ವತ, ಸಂತಾನ ವೃಕ್ಷ, ಧೇನು, ಭೂತ ಜಲ, ಪಾನ, ಅನಿಲ, ಜ್ಞಾನಶಕ್ತಿ, ಲಿಂಗಕರ್ಮ, ಸಾದಾಖ್ಯದೇವ, ಯಾಜಂಷಶಾಖೆ, ಮಾ ಅಕ್ಷರವೇ ಬೀಜ, ಪಂಚಾಕ್ಷರೀ ಮಂತ್ರ, ಭವತಿ ಭಿಕ್ಷಾಂದೇಹಿ ಚಿಹ್ನೆಯಿಂದ ಕೂಡಿದವರೇ ಪಂಡಿತಾರಾಧ್ಯರು. ಅವರ ಅಂಗ ಅರುಣ, ಶಿಲಾಪಾದ ಶಿಷ್ಯ. ಕರಿಯೇ ವಾಹನ, ವ್ಯಾಸಪಾಳಿಯಾಶ್ರಮವೆ ಗೃಹಸ್ಥ, ಭಾವ, ಶಿಖಿಯೆ ಮೇಚಕ, ಪಾಶುಪತ ಮಕುಟ, ವೇಣುದಂಡ, ಸುವಿಚಾರ ಕರ್ಪರ, ತಾಮ್ರದ ಮುರಿ, ಚಿದ್ಭಸಿತ ಅಕ್ಷಮಾಲೆ ಆಭರಣ ಅಂಬರಗೈರಿಕಾಶ್ರಯ, ಚೈತನ್ಯಮಯ ಚನ್ನಮಲ್ಲಿಕಾರ್ಜುನ ಲಿಂಗ ಸ್ಫಟಿಕ ಸಂಕಾಶದಿಂವ ಮೆರೆಯುವುದು. ಸುಬುದ್ಧಿಯೆ ಸೆಜ್ಜೆ, ಅನಾಹತಚಕ್ರ ಹೃದಯ ಕರ್ಣಿಕೆಯ ಮೇಲೆ ಹನ್ನೆರಡುದಳದಿಂದ ಆರಾಧಿಸುತ್ತ ವೈಡೂರ್ಯತಳದ ತ್ಯಾಗಪೀಠದಲ್ಲಿ ಮಂಡಿಸಿರುವ ಗಂರುವನ್ನು ಖಗ, ಗಂಧರ್ವರು ಪೂಜಿಸುವರು. ಪವನದಿಕ್ಕಿನಲಿ ರಾಜಿಸುವ ಕಳಶ, ಭಾಗೀರಥಿ ಗಂಗೆ, ಹಿಮಂವಂತ ಪರ್ವತ ಹರಿಚಂದನ ಕುಜ, ಧೇನುನಂದೆ ಭೂತಮಂಗಚೈತನ್ಯ ಮರುಂತ ಪ್ರಾಣಶಕ್ತಿ ಕ್ರಿಯೆಯೇ ಕರ್ಮಸಾದಾಖ್ಯ ಗುರುಲಿಂಗ ಮುಖವೆ ಸದ್ಯೋಜಾತ ನಕಾರ ಬೀಜಾಕ್ಷರ ಮಾಯಾಖ್ಯ ಪಂಚಾರ್ಣ ಆಚಾರ್ಯರು ಏಕೋರಾಮ. ಅವರ ಲಿಂಗ ಶ್ಯಾಮಳ ಸುವರ್ಣ. ಋಕ್‌ಶಾಖೆಯ ಆರೀಕ್ಷಪಾದ ಶಿಷ್ಯ ಪ್ರಾಣಲಿಂಗ ಭೋಗಮಲ್ಲೇಶ ರಮ್ಯಸೌಚಿತ್ತ ಸೆಜ್ಜೆ ಮಣಿಪೂರದಲ್ಲಿ ಧರಿಸಿ ದಶದಳದಿಂದ ಯಜಿಸುವನು. ತುರಂಗ. ವಾಹನ ಪ್ರಣಮ ಪಾಳಿ ಬ್ರಹ್ಮಚರ್ಯಾಶ್ರಮ ಏಕಮುಖವಾದ ಶಿಖಿಯೇ ಚಕ್ರಮಕುಟ ಮುತ್ತುಗದಕೋಲು ಸ್ವಯಂಪಾಕ ಬೆಳ್ಳಿಯ ಮುರಿ ಭಸ್ಮ ರುದ್ರಾಕ್ಷಿ ಶುಭ್ರಾಂಬರ ಗೋಮೇಧಿಕ ಶಿಲಾಗ್ರದ ಮುಂಭಾಗದ ಪೀಠದಲ್ಲಿ ರಾಜಿಸುವ ಗುರುಪಾದ ಪದ್ಮವನ್ನು ಭಕ್ತಿಯಿಂದ ಕಿನ್ನರ ಕಿಂಪುರುಷ ನರನಾಗರು ಅರ್ಚಿಸುವರು. ಋತ್ವಿಜರ ಪಂಚಕಳಸ ಸ್ಥಾಪನೆಯಾದಮೇಲೆ ಗುರುಮೂರ್ತಿ ಪಂಚಕಳಶಗಳನ್ನು, ಕಳಸಮಂತ್ರದಿಂದ ಸ್ಥಾಪಿಸಿ ಕಳಶಾಚಾರ್ಯರಾದ ರೇವಣಸಿದ್ಧ, ಏಕೋರಾಮ

ಮರುಳಸಿದ್ಧ, ಪಂಡಿತರಾಧ್ಯರನ್ನು ಆವಾಹನೆಮಾಡಬೇಕು. ಆಚಾರ್ಯಪೀಠದವರಲ್ಲಿ ಪಾದಪೂಜೆಗೆ ಯೋಗ್ಯರಾದವರನ್ನು ಬಿಟ್ಟು ಬೇರೆಯವರಿಂದ ದೀಕ್ಷೆ ಸಂಧಿಕರಣವಮಾಡು ವುದು ಸಲ್ಲದು. ಮಾಹೇಶ್ವರರು ಗುರುಶಿಷ್ಯರನ್ನು ಅವರವರ ವರ್ಗದವರನೆ ಹುಡುಕಿ ಕರೆಯಬೇಕು. ಅಲ್ಲದಿದ್ದರೆ ಜಂಗಮರನ್ನೇ ಗುರುಗಳೆಂದು ಭಾವಿಸಬೇಕು.

ನಿರಧಿಕರಣದ ದೀಕ್ಷೆಗೆ ನಿರಧಿಕರಣೋಪದೇಶವೇ ಯೋಗ್ಯವಾದುದು. ಅದು ಹೇಗೆಂದರೆ ಪ್ರಭು ಪಟ್ಟಸ್ಥಲಬ್ರಹ್ಮಿ ಬಸವೇಶ ಉರಿಲಿಂಗಪೆದ್ದಿಗಳೇ ಮುಖ್ಯರಾದ ಶರಣರ ಸಾಧುಚರ್ಯೆಯೇ ನಿರಧಿಕರಣದ ಇರವು ಇದೇ ಸಾಧಿಕರಣ. ಸದಾಶಿವ ಈಶಪರಮೇಶ ರುದ್ರತ್ರಯಾವಯ ಎಂಬ ಸಂಪ್ರದಾಯದೊಳು ಹುಟ್ಟಿದ ಋತ್ವಿಜರೆ ಮಠಸ್ಥಲದ ಗುರುಗಳು. ಭೂಲೋಕದ ಆ ಮಠಗಳು ಯಾವುವೆಂದರೆ ಚಂಪಾರಾಮ, ಕಾಶಿ, ಉಜ್ಜಯಿನಿ, ಕೊಲ್ಲಿಪಾಕಿ ಎಂಬುವು. ಈ ಮಠದವರೇ ಭಿಕ್ಷೆಗೆ ಯೋಗ್ಯರು. ಅವರೇ ಕಳಶಕ್ಕೆ ಅಧಿಕಾರಿಗಳು. ಅವರು ಲಿಂಗಾತೀತರು, ವಿರಕ್ತರು, ಮಹಂತರು, ಅಲ್ಲಿಯ ಚರಲಿಂಗಮೂರ್ತಿಗಳು ಭಕ್ತಿಯಿಂದ ಅರ್ಘ್ಯಾಚಮನಗಳನ್ನಿತ್ತು ಮೂರ್ತಗೊಳಿಸಿ ಅರ್ಚನೆಗೆ ಯೋಗ್ಯರಾದ ಋತ್ವಿಜರಿಗೆ ಗುರುಭಕ್ತಿಯಿಂದ ಅಡ್ಡಬಿದ್ದು ಕೈಗಳನ್ನು ಹಿಡಿದುಕೊಂಡು ಕಳಶದ ಸಮೀಪದಲ್ಲಿ ಮೂರ್ತಗೊಳಿಸಬೇಕು. ಆ ವಂಶ ದವರು ಇಲ್ಲದಿದ್ದರೆ ಏನುಮಾಡಬೇಕು ಗುರುವೆ ಎನ್ನಲು, ಜಂಗಮರನ್ನೇ ಪೂರ್ವಾ ಚಾರ್ಯರೆಂದು ಬಗೆದು ನೆಲೆಗೊಳಿಸಬೇಕು. ಮರುತದಿಕ್ಕಿನಲ್ಲಿ ರಜತಕಲಶಸ್ಥಾಪನಗೈದು ಅದರ ಪಡುವಣ ಬಿಳಿಯ ಗದ್ದುಗೆಯಲ್ಲಿ ಏಕೋರಾಮದೇವರನ್ನು ಸದ್ಯೋಜಾತದಿಂದ ಸ್ಥಾಪಿಸಬೇಕು. ಈಶಾನ್ಯದಿಕ್ಕಿನಲ್ಲಿ ಉತ್ತರದಲ್ಲಿ ಕೃಷ್ಣಕಂಬಳ ಪೀಠದ ಸ್ಥಾನದಲ್ಲಿ ರೇಣುಕರ ಜ್ಯೋತಿಸ್ತಂಭ ವಾಮದೇವಾಯ ಎಂಬ ಮಂತ್ರಗಳನ್ನು ಓದುತ್ತ ಕೈಯನ್ನು ಹಿಡಿದುಕೊಂಡು ಉತ್ತರದಿಕ್ಕಿನಲ್ಲಿ ಪ್ರಖ್ಯಾತಗುರುಸಾರ್ವಭೌಮನಾದ ಭೀಮನನ್ನು ಮೂರ್ತಗೊಳಿಸಬೇಕು.

ಬಳಿಕ ಅಗ್ನಿದಿಕ್ಕಿನ ತಾಮ್ರದ ಕಳಶದ ಸಮೀಪದಲ್ಲಿ ಸೂರ್ಯದಿಕ್ಕಿನಲ್ಲಿ ನಿರ್ಮಲ ರಾದ ಶೋಣವಸ್ತ್ರದ ಗದ್ದಿಗೆಯಲ್ಲಿ ಆ ಕಳಶಕ್ಕೆ ಅಧಿನಾಥನಾದ ಮರುಳೇಶನ ಹಸ್ತವ ಪಿಡಿದು ಕರೆದುತಂದು ಅಘೋರೇಭ್ಯೋ ಎಂಬ ಮಂತ್ರಗಳಿಂದ ಮಾಯಾಕರ್ಮ ನಾದ ಗುರುವನ್ನು ಮೂರ್ತಗೊಳಿಸಬೇಕು.

ನೈರುತ್ಯದಿಕ್ಕಿನಲ್ಲಿ ಶೋಭಿಸುವ ರತ್ನಕಳಶದ ಒತ್ತಿನಲ್ಲಿ ಯಮನದಿಕ್ಕಿನಲ್ಲಿ ಸುಂದರವಾದ ಪೀಠಾಗ್ರದಲ್ಲಿ ಪಂಡಿತಾಚಾರ್ಯರನ್ನು ವಂದಿಸಿ ಕರಪಿಡಿದು ತತ್ಪುರುಷ ಪರವಾದ ಮಂತ್ರಗಳನ್ನು ಓದುತ್ತ ಮಹೇಶ್ವರರು ಅವರನ್ನು ಮೂರ್ತಗೊಳಿಸಬೇಕು.

ಈರೀತಿ ಆಯಾ ಋತ್ವಿಜರನ್ನು ಮೂರ್ತಗೊಳಿಸಿ ಪಾದ್ಯ ಆಚಮನ ಗಂಧ ಅಕ್ಷತೆ ಧೂಪದೀಪಾರತಿಗಳಿಂದ ಪೂಜಿಸಿ ಕೇಯೂರ ಪವಿತ್ರಾಂಗುಲಿಯೇ ಮೊದಲಾದ ವಸ್ತ್ರಗಳನ್ನು ಕೊಟ್ಟು ಶಿಷ್ಯ ಎಡೆಮಾಡಬೇಕು. ಈರೀತಿ ಗುರುನಾಥಋತ್ವಿಜರ

ಕುಳ್ಳಿರಿಸಿ ಈಶಾನಮುಖನಾದ ಅಜಾತ ಗುರುವಿಗೆ ಅಡ್ಡಬೀಳಲು ಶರಣಾಳಿ ಅದನ್ನು ಪರಾಂಬರಿಸಿ ಜಯಕಾರಮಾಡಿ ಹೈಮೋ ಎಂಬ ಪದದಾದಿಯ ಗೋತ್ರಮಂತ್ರಗಳನ್ನು ಓದುತ್ತ ಆ ಗುರುವಿನ ಕೈಹಿಡಿದು ಪೂರ್ವಮುಖವಾಗಿ ಕೂಡಿಸಬೇಕು. ಅವರು ಶಿವಧ್ಯಾನಾಸಕ್ತರಾಗುವರು.

ಕಕಾರವೇ ಭೂಮಿ. ಳಕಾರಾಂಬರಾಂತರ ಸಲಿಲವೆ ಶಕಾರ. ಮೂರುತತ್ವದಿಂದ ಕೂಡಿದುದೆ ಕಳಶಾಭಿಧಾನ. ಪಂಚಕಳಶಗಳಿಗೆ ರತ್ನಗಳು ದೊರೆಯದಿದ್ದರೆ ಗುರು ಕಳಶಕ್ಕಾದರೂ ರತ್ನವನ್ನಿಟ್ಟು ಉಳಿದ ಕಳಶಗಳಿಗೆ ಸ್ವರ್ಣವನ್ನು ಮಡಗಿ ಮೇಲೆ ದೂರ್ವೆ ಉತ್ತರಣೆ ಚೂತ ಆಲ ಬಿಲ್ವ ಪಲ್ಲವಗಳನ್ನಿಟ್ಟು ಕುಂಭಾವಗಹನ ತೀರ್ಥಾವಗಹನ ಮಂತ್ರಾವಗಹನ ಲಿಂಗಾವಗಹನ ವಕ್ತ್ರಾವಗಹನವನ್ನು ರಚಿಸಬೇಕು. ಕುಂಭಿಭಯ ವಹ್ನಿಭಯ ಶೀತಭಯ ಮುಂತಾದ ಹಂಬಲವನ್ನು ಕೆಡಿಸುವ ಷಡಕ್ಷರಿಮಂತ್ರದಿಂದ ಸ್ವಯಂಭು ಗುರುಕಳಶವನ್ನು ಅಭಿಮಂತ್ರಿಸಿ ಅತಿಪ್ರಕಾಶಮಾಡಬೇಕು.

ಆಮೇಲೆ ಶಿವಲಿಂಗದ ಸಾಹಿತ್ಯವನ್ನು ರಾಜವಶ್ಯ ವಶೀಕರಣ ಅದೃಶ್ಯಾಭ್ರುಗತಿ ಸಿದ್ಧಿ ಸಂದೋಹಗಳನ್ನು ಕೊಡುವ ನವಮಾಕ್ಷರದೊಳಗೆ ಈಶಾನಕಳಶವನ್ನು ಮಂತ್ರಿಸಿ ಮೋಹ ಕಪಟ ಮೊದಲಾದ ದುರ್ಗುಣಗಳನ್ನು ಬಿಟ್ಟು ನಿಷ್ಠೆಯಿಂದ ನೆನೆಯುವವರಿಗೆ ಸೂಕ್ಷ್ಮ ಪಂಚಾಕ್ಷರಿಯ ಮಂತ್ರದಿಂದ ಅಘೋರಕಳಸವು ಬಹುಫಲಪ್ರಾಪ್ತಿಯುಂಟು ಮಾಡುತ್ತದೆ.

ದಶದಿಕ್ಕುಗಳನ್ನು ಕಟ್ಟಿ ಎಲ್ಲ ಪಾಪಗಳನ್ನು ಕುಜನವಿಸರವನ್ನು ಪರಿಹರಿಸಿ ಕ್ರೂರರಾಜರ ಸಮೂಹವನ್ನು ವಶವಾಗಿ ಮಾಡುವ ಪ್ರಸಾದವನ್ನು ಅನುವಿನಿಂದ ನಿರುತಿಕಳಶಕ್ಕೆ ಅಭಿಮಂತ್ರಿಸಬೇಕು. ಅಣಿಮಾದಿಸಿದ್ಧಿಗಳ ಷಟ್ಸ್ಥಲಫಲವನ್ನು ಒಸಗೆಯಿಂದ ಕೊಡುವ ಮಾಯಾಖ್ಯಮಂತ್ರದಿಂದ ಮರುತದೆಶೆಯ ಕಳಸವನ್ನು ಅಭಿಮಂತ್ರಿಸಿ ತೀರ್ಥೋದಕವನ್ನು ತುಂಬಬೇಕು.

ಹಿಂದೆ ಹೇಳಿದ ವೇದಮಂತ್ರದಿಂದಾಗಲಿ ಅಥವಾ ಷಡಕ್ಷರಮಂತ್ರ ಮೊದಲಾಗಿ ಮಾಯಾಖ್ಯಮಂತ್ರವೇ ಕಡೆಯಾದ ಮಂತ್ರಂಗಳಿಂದಾಗಲಿ ಪಂಚಕಳಶಂಗಳಲ್ಲಿ ನೀರನ್ನು ತುಂಬಬೇಕು. ಓಂನಮಶ್ಶಿವಾಯ ಎಂಬ ಮಂತ್ರವನ್ನು ಹೇಳಬೇಕು.

ಓಂ ಹ್ರಾಂ ಹ್ರೀಂ ಎನ್ನುತ್ತ ಹ್ರೂ ಎನ್ನುವ ಪದವನ್ನು ಪಂಚಾಕ್ಷರಿಗೆ ಕೂಡಿಸಲು ಸ್ಥೂಲವಾಗುತ್ತದೆ. ಸೂಕ್ಷ್ಮ ಪಂಚಾಕ್ಷರಿಯ ರೀತಿಯ ಭಾವಿಸಿದರೆ ಅದು ಓಂ ಹ್ರೀಂ ನಮಶ್ಶಿವಾಯ ಎನಿಸುವುದು. ಆಮೇಲೆ ಓಂ ಹ್ರಾಂ ಹ್ರೀಂ ಎನಿಸುತ್ತಿರುವ ಪದವಾದಿಗೊಂಡ ಪಂಚಾಕ್ಷರವೆ ಮಾಯಾಖ್ಯ ಪಂಚಾಕ್ಷರವೆನಿಸುವುದು.

ಪ್ರಣಮವೆ ಮೊದಲಾದ ಹ್ರಾಂ ಹ್ರೀಂ ಎನುತ್ತ ಇರಿಸಿ ಗುಣಶಾಲಿ ಹ್ರೂಂಹ್ರಾಂ ಎನುತ್ತ ಇರಿಸಿ ಗಣಿಸಲು ಪಂಚಾಕ್ಷರ. ಅದೇ ಪ್ರಸಾದ ಪಂಚಾಕ್ಷರ. ಸೂಕ್ಷ್ಮ ಸ್ಥೂಲ, ಮಾಯೆ ಪ್ರಸಾದ ಎಂಬ ಹೆಸರಿಂದಿರುವ ಪಂಚವರ್ಣವೆ ಗಿರಿನಾಗರತ್ನದಶವರ್ಣಗಳು ವುವು.

ಶಿಲೆ, ಸ್ವರ್ಣ, ಸ್ಫಟಿಕ, ರತ್ನ—ಈ ಲಿಂಗಶ್ರೇಣಿಗಳಲ್ಲಿ ಶೈಲವೇ ಅತ್ಯಧಿಕ. ಗುರುವಾದವನು ಶಿಲೆಯ ಲಕ್ಷಣವನ್ನು ನೋಡಿ ಶಿಲ್ಪಿಯಿಂದ ಶಿವಲಿಂಗವನ್ನು ಮಾಡಿಸಿ ಅದಕ್ಕೆ ಶಿವಶಕ್ತಿಗಳು ಸರಿಯಾಗಿರಲು ಮೃತ್ಯು ದಾರಿದ್ರ್ಯನಾಶವಾಗುತ್ತದೆ. ಲಿಂಗವೇನಾದರೂ ಅಧಿಕವಾದರೆ ಮರಣ. ಶಿವಲಿಂಗದ ಪಂಚಲಕ್ಷಣಗಳನ್ನು ವಿವರಿಸಿ ಅಷ್ಟವಿಧ ಷೋಡಶಾರ್ಚನೆಗಳನ್ನು ಮಾಡಿದ ಬಳಿಕ ಶಿಷ್ಯನಿಗೆ ದೀಕ್ಷೆಯನ್ನು ಮಾಡಬೇಕು. ದೀಕ್ಷಾವಿಧಾನಪೂರ್ವಕ ಶಿಷ್ಯನಿಗೆ ಅನೇಕಸಂಸ್ಕಾರಗಳನ್ನು ಕೊಡಬೇಕು. ಶುದ್ಧಾಂಗನಾದ ಶಿಷ್ಯನು ಗುರುವಿಗೆ ದಂಡಪ್ರಣಾಮವನ್ನು ಮಾಡಿ ನುತಿಸಬೇಕು. ಅಷ್ಟಾಂಗಪ್ರಣುತನಾದ ಶಿಷ್ಯನನ್ನು ಗುರು ಕೈಹಿಡಿದು ತಂದು ಮಂತ್ರೋಪ್ತವಾದ ಸ್ವಸ್ತಿಕೆಯಲ್ಲಿ ಉತ್ತರಮುಖವಾಗಿ ಕುಳ್ಳಿರಿಸಬೇಕು. ಶಿಷ್ಯನ ಬಲದ ಕೈಗೆ ದರ್ಭೆ ಕಂಕಣವನ್ನು ಕಟ್ಟಬೇಕು. ಶಿವಧ್ಯಾನಯುತನಾದ ಶಿಷ್ಯ ಮುಕುಳಿತಕರನಾಗಿರುವುದನ್ನು ನೋಡಿ ಗುರುವೂ ಮಹೇಶ್ವರರೂ ಆತನನ್ನು ಹರಸಬೇಕು. ಶಿವಭಕ್ತರ ಅಂಗನೆಯರು ಆರತಿಗಳನ್ನು ಬೆಳಗಿ ಶೋಭನಗಳನ್ನು ಹಾಡಬೇಕು. ಪ್ರಮಥಗಣ ರುದ್ರಗಣ ವೃಷಭ ಯೋಗಾಚಾರ್ಯ ಅರುವತ್ತುಮೂವರು ಷೋಡಶಗಣ ತೇರಸಗಣ ದಶಗಣ ಬಸವ, ಪ್ರಭುದೇವ, ಮಡಿವಾಳ, ಚೆನ್ನಬಸವ, ಸಿದ್ಧರಾಮ, ಶರಣಋತ್ವಿಕ್ಕು ಗುರುಶಿಷ್ಯರಿಗೆ ಮಂಗಳವನ್ನು ಹಾಡಬೇಕು.

ಬಡಗಮುಖವಾಗಿ ಕುಳಿತಿದ್ದ ಗುರು ಶಿಷ್ಯನಿಗೆ ತನ್ನ ಮತ್ತು ಋತ್ವಿಕ್ಕುಗಳ ಕಳಶದಿಂದ ಓಂ ಶಿವ ಎಂಬ ಮಂತ್ರದಿಂದ ಮೂರಾವರ್ತಿ ತಳೆವುದೇ ಕಳಸೋದಕಸ್ನಾನ. ತರುವಾಯ ಭಸ್ಮಕ್ಕೆ ಮಂತ್ರಪೂರ್ವಕ ನಮಸ್ಕಾರಮಾಡಿ ಅಭಿಮಂತ್ರಿಸಿ ಜಲದಿಂದ ಪೂಜಿಸಿ ಆಮೇಲೆ ಆ ಭಸ್ಮವನ್ನು ಬೆರಲಿಂದೆತ್ತಿ ಹಣೆ ಕೈಕಂಠ ಭುಜ ಹೃದಯ ನಾಭಿಯೇ ಮೊದಲಾದ ಮೂವತ್ತೆರಡು ಸ್ಥಾನಗಳಲ್ಲಿ ಧರಿಸಿಕೊಳ್ಳಬೇಕು.

ರುದ್ರಾಕ್ಷಿಯ ಉತ್ಪತ್ತಿ ಮತ್ತು ಧಾರಣವಿಧಾನ: ತ್ರಿಪುರಸಂಹಾರಕಾಲದಲ್ಲಿ ರುದ್ರನು ಕಣ್ಣುಗಳನ್ನು ತೆರೆಯಲು ಧರೆಗೆ ಉದಿರಿದ ಜಲಕಣಗಳೇ ರುದ್ರಾಕ್ಷಿಯಾಗಿ ಹುಟ್ಟಿದುವು. ಇಂದ್ರ ಅಗ್ನಿ ರವಿಯ ನೇತ್ರಜಲಕಣದಿಂದ ಶ್ವೇತವರ್ಣ ಕೃಷ್ಣವರ್ಣದ ಸುಂದರವಾದ ರುದ್ರಾಕ್ಷಿಗಳು ದಶದ್ವಾದಶಷೋಡಶ ಕಲೆಗಳಿಂದ ಉದಿಸಿದವು. ರುದ್ರ ಬ್ರಹ್ಮ ವಿಷ್ಣು ಇಂದ್ರರೇ ಮೊದಲಾದವರು ಧರಿಸಿದರು. ಗೋ ಸ್ತ್ರೀ ದ್ವಿಜವಧಾದಿ ದೋಷಗಳನ್ನು ಈ ರುದ್ರಾಕ್ಷಿ ನಿವಾರಿಸಿ ಯಾಗಫಲವನ್ನು ನೀಡುತ್ತದೆ.

ರುದ್ರಾಕ್ಷಿ ವೃಕ್ಷ ನಾಮೋಚ್ಚಾರಣೆಯಿಂದ ಸಹಸ್ರ ಗೋದಾನಫಲ ಲಭಿಸುತ್ತದೆ. ದರ್ಶನ ಸ್ಪರ್ಶನಗಳಿಂದ ದ್ವಿಗುಣ ತ್ರಿಗುಣ ಸತ್ಫಲಗಳಾಗುವುವು. ಇನ್ನು ಧಾರಣ ಜಪಗಳಿಂದ ಲಭಿಸುವ ಫಲವನ್ನು ಹೇಳುವುದಕ್ಕೇ ಸಾಧ್ಯವಿಲ್ಲ.

ಶಿಷ್ಯನ ಶಿಖೆಯೊಳು ಏಕಮುಖದ ಅಕ್ಷಿಯನ್ನು ಧರಿಸಬೇಕು. ದ್ವಿತ್ರಿದ್ವಾದಶ ಮುಖಗಳ ಮೂರುಮಣಿಗಳನ್ನೂ ಶಿರದಲ್ಲಿ ಧರಿಸಬೇಕು. ಏಕಾದಶ ಮುಖದ

ರುದ್ರಾಕ್ಷಿಯನ್ನು ಊರ್ಧ್ವದಲ್ಲಿ ಧರಿಸಬೇಕು. ಕೊರಲಲ್ಲಿ ಐದು ಏಳು ದಶಮುಖ ದ್ವಾತ್ರಿಂಶದಕ್ಷವನ್ನು ಧರಿಸಬೇಕು. ನಾಲ್ಕು ಮುಖದ ಐವತ್ತು ಮಣಿಗಳನ್ನು ಉದರದಲ್ಲಿಯೂ ತೋಳುಗಳಲ್ಲಿ ಹತ್ತು ಮೂರು ವಕ್ತ್ರದ ಹದಿನಾರನ್ನು ಧರಿಸಬೇಕು. ಷೋಡಶಘನ ಮೂರ್ತ್ಯಾತ್ಮಕಾಯ ಎಂಬ ಮಂತ್ರದಿಂದ ಎಡಗಡೆ ತೋಳಿನಲ್ಲಿ ಧರಿಸಬೇಕು. ಶ್ರೀಶಶಿಕಲಾತ್ಮನೇ ನಮೋ ಎಂಬ ಮಂತ್ರದಿಂದ ಬಲದ ತೋಳಿನೊಳಗೆ ಒಂಬತ್ತು ಮುಖದ ಮಣಿಗಳನ್ನು ಎರಡು ಮುಂಗೈಗಳಲ್ಲೂ ದ್ವಾದಶಾದಿತ್ಯಾತ್ಮನೇ ಎಂಬ ಮಂತ್ರ ದಿಂದ ಬಲದಲ್ಲಿ ಬಿಗಿಯಬೇಕು. ಎಡದಲ್ಲಿ ಕೇಶವಾದ್ಯಮಲ ಮೂರ್ತ್ಯಾತ್ಮಕಾಯ ನಮ ಎಂಬ ಮಂತ್ರದಿಂದ ಧರಿಸಬೇಕು. ಆಮೇಲೆ ಹದಿನಾಲ್ಕು ಮುಖದ ಮಣಿ ನೂರೆಂಟನ್ನು ಮಂತ್ರಪೂರ್ವಕವಾಗಿ ಉಪವೀತಕ್ಕೆ ಬಿಗಿಯಬೇಕು. ಅರವತ್ತು ನಾಲ್ಕು ಮಣಿಗಳನ್ನು ಮಂತ್ರಸಮೇತ ಧರಿಸಬೇಕು. ರುದ್ರಾಕ್ಷಿಗಳನ್ನು ವಸ್ತ್ರದೊಳಗಿರಿಸಿ ಮಂತ್ರಪೂರ್ವಕವಾಗಿ ಹದಿನಾಲ್ಕು ಬೀಜವನ್ನು ಇರಿಸಬೇಕು. ಹದಿನಾಲ್ಕು ಮುಖದ ಮಣಿಗಳನ್ನು ಕ್ರಮವಾಗಿ ಆಯಾ ಮುಖಗಳಲ್ಲಿ ಧರಿಸಬೇಕು. ರುದ್ರಾಕ್ಷಿಯೇ ಶಿವ.

ರುದ್ರಾಕ್ಷಿಯನ್ನು ಶಿರದಲ್ಲಿ ಧರಿಸಿದರೆ ಕೋಟಿಫಲ, ಕಿವಿಯೊಳಗೆ ಧರಿಸಿದರೆ ದಶಕೋಟಿಫಲ, ಕಂಠದಲ್ಲಿ ಧರಿಸಿದರೆ ಶತಕೋಟಿಫಲ, ಬಾಹುಗಳಲ್ಲಿ ಧರಿಸಿದರೆ ಸಾಹಸ್ರ ಕೋಟಿಫಲ, ಎರಡು ಮುಂಗೈಗಳಲ್ಲಿ ಧರಿಸಿದರೆ ಅನಂತಫಲ. ಆದುದರಿಂದ ರುದ್ರಾಕ್ಷಿ ಮೋಕ್ಷಕಾರಣವಾದುದು. ಈರೀತಿ ನಾನಾ ಮಂತ್ರಪೂರ್ವಕವಾಗಿ ರುದ್ರಾಕ್ಷಿಯನ್ನು ಧರಿಸಿ ಶಿಷ್ಯನ ತಲೆಯ ಮೇಲೆ ಮಂತ್ರಪೂರ್ವಕವಾಗಿ ಇರಿಸಬೇಕು. ಜಪವನ್ನು ಮಾಡುತ್ತ ವಿನ್ಯಾಸಮಾಡಬೇಕು. ಅಂಗುಲಿನ್ಯಾಸ, ಅಂಗನ್ಯಾಸ ಇವುಗಳ ವಿವರಣೆಗಳೊಡನೆ ಬ್ರಹ್ಮನ್ಯಾಸದ ರೀತಿಯಿಂದ ಮಂತ್ರಕಾಯಮಾಡುವ ವಿವರಣೆ: ಚಿದ್ಗುರುವಿನ ಕೃಪಾಮೃತದಿಂದ ಮಿಂದು ಶುಚಿಯಾಗುವ ವಿಧಾನ; ಗುರುಶಿಷ್ಯನ ಮಸ್ತಕದ ಮೇಲೆ ಹಸ್ತವನ್ನಿಟ್ಟು ಮಂತ್ರಪೂರ್ವಕವಾಗಿ ಹರಸಿ ಷಡಕ್ಷರಿ ಮಂತ್ರವನ್ನು ಶಿಷ್ಯನ ಬಲಕಿವಿಯೊಳಗೆ ಏಳುಬಾರಿ ಹೇಳಿ ಅದನ್ನು ಯಾವಾಗಲೂ ಮರೆಯದೆ ಇರುವಂತೆ ತಿಳುಹುವುದು; ಶಿಷ್ಯನಿಗೆ ನಾನಾವಿಧವಾದ ಮಂತ್ರೋಪದೇಶಮಾಡುವುದು; ಮುಂತಾದ ವಿವರಗಳನ್ನು ನೀಡಲಾಗಿದೆ. ತೀರ್ಥಪ್ರಸಾದವನ್ನು ಶಿವಲಿಂಗಕ್ಕೂ ಶಿಷ್ಯನಿಗೂ ಕೊಟ್ಟು ಈ ವಾಮಕರದ ಲಿಂಗವು ಅಂತರಂಗದ ಜ್ಯೋತಿಯು ಮಹಾಲಿಂಗ, ಅನಂತ ಬ್ರಹ್ಮಾಂಡಗಳನ್ನು ಒಳಕೊಂಡ ಅಖಂಡಪರಿಪೂರ್ಣ ಪರಶಿವಲಿಂಗ, ಇದೇ ನಿನ್ನ ಆತ್ಮಲಿಂಗ. ಈ ಲಿಂಗಕ್ಕೂ ನಿನ್ನ ಪ್ರಾಣಕ್ಕೂ ತತ್ತುಗೊತ್ತು. ಈ ಲಿಂಗಮುಖದಿಂದ ಅಂಗಕ್ರಿಯೆಗಳನೆಲ್ಲ ಮಾಡಬೇಕು. ಈ ಲಿಂಗವೇ ಪತಿ ನೀನೇ ಸತಿ. ಈ ಲಿಂಗವನ್ನು ಬಿಟ್ಟು ಬೇರೆ ದೈವಗಳನ್ನು ಪೂಜಿಸಿದೊಡೆ ಅದು ನಿಷ್ಫಲ, ನಿರಯ, ಅಭಿಚಾರ.

ಯಾವಾಗಲೂ ಈ ಲಿಂಗವನ್ನು ಅಗಲಿರಕೂಡದು. ಸದಾ ಲಿಂಗಪೂಜೆಯನ್ನು

ಮಾಡಬೇಕು. ದೇಹದಿಂದ ಈ ಲಿಂಗವನ್ನು ಬೇರ್ಪಡಿಸಕೂಡದು. ಜಾಗ್ರತ್ ಸ್ವಪ್ನ ಗಳಲ್ಲಿ ನಡೆವಾಗ ಕುಳಿತಿರುವಾಗ ಈ ಲಿಂಗವನ್ನು ವಿಯೋಗಮಾಡಬಾರದು.

ಈ ಲಿಂಗವು ಸಚ್ಚಿದಾನಂದ ಪರಿಪೂರ್ಣಮಯವಾದುದು, ಚಿನ್ನಾದ ಚಿದ್ಬಿಂದು ಚಿತ್ಕಳೆಯುಳ್ಳುದು. ಈ ಲಿಂಗ ತತ್ವತತ್ವಾತೀತವಾದುದು. ಹರಿಬ್ರಹ್ಮರು ಈ ಲಿಂಗದ ಅಡಿಮುಡಿಯನ್ನು ಕಾಣರು. ಇದು ಅಣುವಿಂಗೆ ಅಣುವು, ಮಹತ್ತಿಗೆ ಮಹತ್ತು ಎಂದು ಪರಿಭಾವಿಸಬೇಕು. ಈ ಲಿಂಗ ಅನಿಷ್ಟವನ್ನು ಪರಿಹರಿಸಿ ಇಷ್ಟಾರ್ಥಸಿದ್ಧಿಯನ್ನು ಕೊಡುತ್ತದೆ. ಈ ಲಿಂಗ ಕೈಸಾರಿದಾಕ್ಷಣ ಭೋಗ ಮೋಕ್ಷಗಳಾಗುತ್ತವೆ. ಈ ಲಿಂಗದಲ್ಲಿ ಅಖಿಲ ತೀರ್ಥಕ್ಷೇತ್ರಗಳಿವೆ. ಇದರಲ್ಲಿ ಅಮಿತವಾದ ತತ್ವಮೂರ್ತಿಗಳಿವೆ. ಇದರಿಂದ ದುಃಖ ದೂರವಾಗಿ ನಿತ್ಯಸುಖ ಲಭಿಸುತ್ತದೆ. ಈರೀತಿ ಲಿಂಗದ ಆದ್ಯಂತವನ್ನು ವಿವರಿಸಿ 'ಬ್ರಾಹ್ಮಣೇ ನಮೋ' ಎಂಬ ಮಂತ್ರವನ್ನು ಓದಿ ಅದನ್ನು ವಸ್ತ್ರದೊಳಗಿಟ್ಟು ಶಿಷ್ಯನ ಕಂಠದಲ್ಲಿ ಕಟ್ಟಬೇಕು.

ಲಿಂಗವನ್ನು ಧರಿಸಬೇಕೆಂದು ಅಖಿಳವೇದಗಳೂ ಪೌರಾಣಾಗಮಗಳೂ ಉಲಿಯು ತ್ತಿವೆ. ಲಿಂಗಧಾರಣದಿಂದ ಸೂತಕಗಳೂ ಪಾಪಗಳೂ ನಾಶವಾಗುತ್ತವೆ. ಲಿಂಗ ಧಾರಣದಿಂದ ಅಖಿಲ ಶುದ್ಧಿಸಿದ್ಧಿಗಳಾಗುತ್ತವೆ. ಲಿಂಗದೇಹಿ ಸದಾಶುದ್ಧನಾಗಿರು ತ್ತಾನೆ. ಅವನಿಗೆ ಜನನ ಜರಾಮರಣಭೀತಿಯಾಗಲಿ ನರಕಭೀತಿಯಾಗಲಿ ಇರುವುದಿಲ್ಲ. ಅಷ್ಟವಸುಗಳು, ಇಂದ್ರ, ಅಗ್ನಿ, ದೇವತೆಗಳು, ದ್ವಾದಶಾದಿತ್ಯರು, ಹರ್ಯಜರು, ವಿಶ್ವೇ ದೇವತೆಗಳು ಲಿಂಗವನ್ನು ಸದಾಧರಿಸಿ ತಮ್ಮ ಮನದ ಅಭೀಷ್ಟಗಳನ್ನು ಪಡೆದರೆಂದು ಅಥರ್ವಣವೇದ ಸಾರುತ್ತಿದೆ. ಆದುದರಿಂದ ಲಿಂಗಧಾರಣ ಸರ್ವರಿಗೂ ಮೋಕ್ಷಕಾರಣ, ಭವತಾರಣ. ಕರದಲ್ಲಿ ಶಿವಲಿಂಗವನ್ನು ಯಾವಾಗಲೂ ಧರಿಸಿದವರಿಗೆ ಸರ್ವಸಂಪದ ಪ್ರಾಪ್ತವಾಗುತ್ತದೆ. ಯಜುರ್ವೇದವು ಕೂಡ ಇದನ್ನೇ ಹೇಳುತ್ತಿದೆ. ಲಿಂಗವನ್ನು ಧರಿಸಿದ ಎಡದ ಕೈ, ಪೂಜೆಮಾಡುವ ಕರ, ಅಭಿಮರ್ಶನವ ಮಾಡುವಕರ, ಲಿಂಗಾಭಿ ಮರ್ಶನಮಾಡುವಕರ ಭವರೋಗವೈದ್ಯ.

ಸ್ಥಿರಪರಬ್ರಹ್ಮವೇ ಸೂತ್ರ. ಅದನ್ನು ಧರಿಸಬೇಕು. ಅದು ಸೂತ್ರಲಿಂಗವನ್ನು ಸೂಚಿಸುವುದು. ಸೂತ್ರ ಎಂದರೆ ಪರಬ್ರಹ್ಮ. ಕುರುಹಿಲ್ಲದಿರುವ ಲಿಂಗವು ಏಕವೂ ಅವ್ಯಕ್ತವೂ ಆದುದು. ಅದೇ ಪರಮಲಿಂಗ, ಬ್ರಹ್ಮ ಅಕ್ಷರಂ ಪರಂಜ್ಯೋತಿ ತದ್ವಿಷ್ಣೋಃ ಪರಮಪದ ಎಂದು ಹೇಳುತ್ತದೆ.

ಕಾರಣಾಗಮದ ಉಪಬ್ರಹ್ಮಣದಲ್ಲಿ ರಮ್ಯವಾದಖಿಳವಸ್ತುಗಳಲ್ಲಿ ಯಾವಾಗಲೂ ನೀರನೇಯಧಿಕತರಮಾಗಿ ಮಣಿಗಣಸೂತ್ರದೊಲ್ ವ್ಯಾಪಿಸಿರ್ಪ ದೆಸೆಯಿಂ ಸಾರ ಪರಮೇಶ್ವರನನ್ನು ಸೂಚಿಸುತ್ತದೆ. ಆದುದರಿಂದ ಸೂತ್ರವೇ ಲಿಂಗವು. ಅದನ್ನು ಧರಿಸಿದರೆ ಯಾವ ದೋಷಗಳೂ ಇಲ್ಲ ಎಂದು ಉಗ್ಘಡಿಸುತ್ತದೆ.

ಭುಕ್ತಿ ಮುಕ್ತಿಯನ್ನು ಬಯಸುವ ಬ್ರಾಹ್ಮಣೋತ್ತಮನು ಮಹಾಲಿಂಗವನ್ನು

ನಿಮಿಂಷಾರ್ಥವೂ ಬಿಡದೆ ಆದರಲ್ಲಿ ಮನಬೆರಸಿರಬೇಕು. ಅದನ್ನು ಪಂಚಸ್ಥಾನಗಳಲ್ಲಿ ಧರಿಸಿ ಗುರು ಉಪದೇಶಿಸಿದ ಮಂತ್ರವನ್ನು ಸದಾ ಜಪಿಸಬೇಕು.

ಉತ್ತಮಾಂಗ ಗಳ ಕಕ್ಷೆ ವಕ್ಷಸ್ಥಳ ಕರಸ್ಥಳ ಅಮಳೈಕ್ಯ ಎಂಬ ಆರು ಸ್ಥಳಗಳಲ್ಲಿ ಪ್ರಾಣಲಿಂಗವನ್ನು ಧೀವಂತರು ಧರಿಸಬೇಕು. ಹರಿಬ್ರಹ್ಮಸುರಪನೇ ಮೊದಲಾದವರು ಯಾವಾಗಲೂ ಶಿರದಲ್ಲೇ ಶಿವಲಿಂಗವನ್ನು ಧರಿಸಿರುವರು ಎಂದು ವಾತೂಲತಂತ್ರ ಸಾರುತ್ತಿದೆ.

ಶಿವಲಿಂಗ ಅನಾದಿಸಂಸಿದ್ಧ ನಿತ್ಯತತ್ವವು. ಇದು ಊರ್ಜವನ್ನು ಕೊಡುತ್ತದೆ ಭಕ್ತರಿಗೆ ಇಷ್ಟಾರ್ಥವನ್ನು ಕೊಡುತ್ತದೆ. ಸ್ಕಾಂದಪುರಾಣ ಇದನ್ನು ಉದ್ಘೋಷಿಸುತ್ತದೆ. ಶಿವಲಿಂಗವನ್ನು ಧರಿಸಿದವನು ಮಾಡಿದ ಸಂಧ್ಯಾದಿ ಕರ್ಮ ಜಪಹೋಮ ಸ್ವಾಧ್ಯಾಯ. ಪಿತೃತರ್ಪಣವೇ ಮೊದಲಾದ ಸತ್ಕರ್ಮಗಳೆಲ್ಲ ಭಸ್ಮವಾಗುತ್ತವೆ. ಲಿಂಗಹೀನನು ಶಾಸ್ತ್ರ ಆಗಮ ಪುರಾಣಗಳನ್ನು ಬಲ್ಲವನಾದರೂ ಅವನನ್ನು ಶೂದ್ರನೆಂದೇ ಪರಿಗಣಿಸ ಬೇಕೆಂದು ವೇದಗಳು ಸಾರುತ್ತವೆ.

ಲಿಂಧಾರಣವಿಲ್ಲದವನು ಸಕಲ ದೈವಗಳ ಇಂಗಿತವನ್ನು ಬಲ್ಲವನಾದರೂ ಚಂಡಾಲ ನಿಗೆ ಸಮಾನ. ಲಿಂಗಾರ್ಚನೆಯನ್ನು ಮಾಡುವ ಚಾಂಡಾಲನಾದರೂ ಬ್ರಾಹ್ಮಣರಿ ಗಿಂತ ಕೋಟಿಪಾಲು ಮಿಗಿಲು. ನೀಚರ ಸಹವಾಸಮಾಡಿದವನಾಗಲಿ ಅಪರಾಧ ಅಭಿಚಾರಮಾಡಿದವನಾಗಲಿ ಅವನು ಲಿಂಗವನ್ನು ಧಾರಣಮಾಡಿದವನಾದರೆ ಅವನಿಗೆ ಯಮಲೋಕವಿಲ್ಲ ಎಂದು ಪುರಾಣ ಹೇಳುತ್ತದೆ.

ಚತುರ್ವೇದಗಳೂ ಶಾಸ್ತ್ರಪುರಾಣಗಳೂ ಕಾಮಿಕ ವಾತುಲ ಮೊದಲಾದ ಆಗಮ ಗಳೂ ಉಪನಿಷತ್ತು ಲಿಂಗಧಾರಣವಿಧಿಯನ್ನೇ ಹೇಳುತ್ತಿವೆ. ಆದ್ದರಿಂದಲೇ ಇದನ್ನು ನಿನಗೆ ವಿವರಿಸಿದ್ದಾಯಿತು. ವೀರಶೈವನಿಗೆ ಯಾವಾಗಲೂ ಲಿಂಗಧಾರಣವೇ ಕಾರಣ' ಇದು ಅನಾದಿಸಂಸಿದ್ಧ.

ಆಜ್ಞಾದೀಕ್ಷೆ, ಉಪಮಾದೀಕ್ಷೆ, ಸ್ವಸ್ತಿಕಾರೋಹಣಗಳ ವಿವರಣೆಯನ್ನು ಮಾಡಲಾಗಿದೆ.

ಗುರು ಶಿಷ್ಯನಿಗೆ ಕೊಟ್ಟಲಿಂಗವನ್ನು ಯಜಿಸಿ ಚಿರಲಿಂಗವನ್ನು ತೋರಿಸಿದರೆ ಲಿಂಗಾಯತ. ಆ ಲಿಂಗವನ್ನು ಕಂಠವೇ ಮೊದಲುದ ತಾಣಗಳಲ್ಲಿ ಧರಿಸಿದರೆ ಲಿಂಗ ಸ್ವಾಯಂತ.

ಹಿಂದೆ ಹೇಳಿದ ಏಳುದೀಕ್ಷೆಗಳನ್ನು ಅಳವಡಿಸಿಕೊಂಡು ಭಕ್ತರ ಕುಲಗಳನ್ನು ನೋಡದ ರೀತಿಯಲ್ಲಿ ವಂದಿಸುವುದೇ ಸಮಯ. ಸಂಸಾರವನ್ನು ತಿರಸ್ಕರಿಸಿದ ಗುರುವಿಗೆ ಲಿಂಗದ ಶುಶ್ರೂಷೆಯೇ ಸಂಸಾರ, ನಿತ್ಯಸಂಸಾರ. ತ್ರಿಮಲವನ್ನು ಹೊಂದದ ಮುದವೇ ನಿರ್ವಾಣ.

ಮುಂವತ್ತಾರು ತತ್ವಗಳು, ತತ್ತೋಪದೇಶ, ಅನುಗ್ರಹಗಳ ವಿವರಣೆ, ಸತ್ತು

ಚಿತ್ಪಾನಂದ ಶೀಲವ್ರತ ಆಚಾರನಿಯಮ; ಶರಣಸತಿ–ಲಿಂಗಪತಿ; ಪಂಚೇಂದ್ರಿಯ ತತ್ವಾರ್ಪಿತ, ಅಹಿಂಸೆ ಸದ್ಯೋಮೋಕ್ಷ—ಇವುಗಳ ನಿರೂಪಣೆಮಾಡಲಾಗಿದೆ.

ಏಳುದೀಕ್ಷೆಗಳನ್ನುಪದೇಶಿಸಿದ ಗುರುವು ತಟ್ಟೆಯಲ್ಲಿ ಅಕ್ಕಿಯನ್ನು ತುಂಬಿ ಅದರಲ್ಲಿ ತನ್ನ ಹೆಸರಿನ ಅಕ್ಷರಗಳನ್ನು ಬರೆದು ಅದನ್ನು ತಲೆಯ ಮೇಲಿಟ್ಟುಕೊಂಡು ನಾಮಕರಣವನ್ನು ಹೇಳಿ ಪರಮಶಿವಭಕ್ತಿಯಿಂದ ಹುಟ್ಟಿದವನೆಂದೂ ತಂದೆತಾಯಿಗಳು ಉಮಾಪತಿಗಳೆಂದೂ ಹೇಳುತ್ತ ಮಂತ್ರೋಚ್ಚಾರಣೆಗಳಿಂದ ಇಟ್ಟು ಕಳಸೋದಕವನ್ನು ದೂರ್ವೆಯಿಂದ ಪ್ರೋಕ್ಷಿಸಿ ಜಯಕಾರವನ್ನು ಮಾಡಿ ಹಾಡಿ ಕೈಯಲ್ಲಿ ಲಿಂಗವನ್ನು ಧರಿಸುವುದು. ಮಹೇಶ್ವರಕಾಂಕ್ಷೆಗೆರಗದೆ ಕಕ್ಷೆಯಲ್ಲಿ ಧರಿಸಬೇಕು. ಇತ್ಯಾದಿ ವಿವರಗಳೊಡನೆ ಲಿಂಗವನ್ನು ಧರಿಸುವ ವಿವಿಧತಾಣಗಳನ್ನು ಹೇಳಲಾಗಿದೆ. ನಾಭಿಯಿಂದ ಕೆಳಗೆ ಧರಿಸಬಾರದು, ಅದು ಅಯೋಗ್ಯವಾದುದು.

ಇಷ್ಟಲಿಂಗ ಉತ್ಪತ್ತಿ ಸ್ಥಿತಿಲಯಗಳನ್ನು ಕೆಡಿಸುತ್ತದೆ; ಅನಿಷ್ಟಪಂಚಕಗಳನ್ನು ನಾಶಮಾಡುತ್ತದೆ; ಭಕ್ತಜನಕ್ಕೆ ಮನದ ಅಭೀಷ್ಟವನ್ನೀಯುತ್ತದೆ. ಇದು ಎಲ್ಲರಲ್ಲಿ ಶ್ರೇಷ್ಠತೆಯನ್ನುಂಟುಮಾಡುತ್ತದೆ. ಇದು ಆನಂದ ಮೋಕ್ಷ ಸಂಪದವನ್ನು ಕೊಡುತ್ತದೆ. ಲಿಂಗವಿಲ್ಲದವನ ಅನ್ನ ನರಕದ ಬನ್ನ; ಕೂಟ ನಿರಯದ ಊಟ, ಲಿಂಗವಿಲ್ಲದವಳಸಂಗ ದುಸ್ಸಂಗ, ಭವಭಂಗ ದೀಪದ ಪತಂಗ. ಶಿವಲಿಂಗವೆ ಪ್ರಾಣವಾಗಿಹ ಭಕ್ತನ ಪರಿಯನ್ನೂ ವಿವರಿಸಲಾಗಿದೆ. ಲಿಂಗದೊಳಗೆ ಐಕ್ಯವನ್ನು ಸಾರಿದವನೇ ಶಿವಭಕ್ತ ಇಲ್ಲದಿದ್ದರೆ ಅನಾಚಾರಿ.

ಗುರು ಶಿಷ್ಯನಿಗೆ ದಂಡ ಚೋಟಿಕೆಯನ್ನು ಕೊಟ್ಟ ಮೇಲೆ ಶಿಷ್ಯ ಭಕ್ತಾಳಿಯಿಂದ ಧರ್ಮಭಿಕ್ಷೆ ತಂದು ಗುರುವಿಗೊಪ್ಪಿಸಬೇಕು. ಋತ್ವಿಕ್ಕುಗಳೇ ಮೊದಲಾದವರು ತಮ್ಮ ಕಳಶಗಳನ್ನು ಜಯಕಾರಪೂರ್ವಕವಾಗಿ ಮೇಲೆತ್ತಬೇಕು. ಆಮೇಲೆ ದೇವಾನ್ನ ದಿವ್ಯಾನ್ನವೇ ಮೊದಲಾದ ಭಕ್ಷ್ಯಭೋಜ್ಯಗಳನ್ನೂ ಮಹಾಗಣಂಗಳಿಗೆ ಊಟಮಾಡಿಸಿ ತಾಂಬೂಲಕಾಣಿಕೆಯನ್ನು ಋತ್ವಿಜರಿಗೆ ಕೊಟ್ಟು ತೃಪ್ತಿಪಡಿಸಿ ಕಳಿಸಿಕೊಟ್ಟು ಉಪದೇಶ ಮಂಟಪದಿಂದ ಬೀಳ್ಕೊಡಬೇಕು.

ಲಿಂಗಪೂಜಾವಿಧಿಯನ್ನು ನಿರವಿಸಬೇಕೆಂದು ಗುರುವನ್ನು ಕೇಳಿಕೊಳ್ಳಲು 'ಮುನ್ನ ಚತುರಾನನಂಗೊರೆದಾ ಕ್ರಿಯಾಸಾರಗ್ರಂಥದಲ್ಲಿ ನೆಲೆಯಾಗಿ ಪೇಳಿದುದನಂಸುರ್ವೆ' ಎಂದು ಹೇಳಿದನು. ಈಶಾನದಿಕ್ಕಿನಲ್ಲಿ ಬತ್ತೀಸಹಸ್ತಮಾನದಿಂದಲೂ ವಿಂಶತಿ ಹಸ್ತಮಾನದಿಂದಲು ಪೂಜಾಗಾರವನ್ನು ರಚಿಸಬೇಕು, ಪೂಜಾಗಾರವನ್ನು ಹೂವುಗಳ ಪಸರದಿಂದಲೂ ಸ್ವರ್ಣಮಯ ದೀಪದಿಂದಲೂ ಧೂಪದಿಂದಲೂ ಮೌಕ್ತಿಕದ ರನ್ನಗೊಂಡೆಗಳಿಂದಲೂ ಬಗೆಬಗೆಯ ಗಂಧ ಪನ್ನೀರುಗಳಿಂದಲೂ ಅಲಂಕರಿಸಬೇಕು. ಧ್ವಜಗಳಿಂದಲೂ ಕರ್ಪೂರ ಕುಂಕುಮ ಚಳಯದಿಂದಲೂ ಶೂಲಧರನ ಪೂಜಾಗೃಹ ನೋಟದಿಂದಲೇ ಭಕ್ತಿಮುಕ್ತಿಯನ್ನೀಯುವಂತಿತ್ತು. ಈ ಪೂಜಾಗೃಹದ ರಜವನ್ನು ಗುಡಿಸುವವನು ಪಾಪಗಳನ್ನು ಕಳೆದುಕೊಂಡು ಪುಣ್ಯಾತ್ಮನಾಗುವನು. ಒಂದು ತಿಂಗಳು ಗುಡಿ

ಸಿದರೆ ಚಾಂದ್ರಾಯಣ ಸಹಸ್ರಫಲ ಪ್ರಾಪ್ತಿಯಾಗುವುದು. ನರವ ರ್ಮರಾಜನಹಿರಿಯರಸಿ ಸುದೇವಿ ಎಂಬುವಳು ತನಗೆ ಜಾತಿಸ್ಮರತ್ವವುಂಟಾಗಲು ಪತಿಯ ಆದೇಶದಂತೆ ಪನ್ನ ಗಾಭರಣನಾಲಯುದ ರಜವಂ ಗುಡಿಸಂತುಂ ಉನ್ನತದಾಸ್ಯಭಾವವನ್ನೂ ಹೊಂದಿದಳು. ಅದನ್ನು ನೋಡಿದ ಗಾಲವನೆಂಬ ಪುರೋಹಿತ "ನೀನಾವಕಾರಣ ದೇಹಶೃಂಗಾರ ಕರಣ ದುರೆ ಭಾವವಿಲ್ಲದೆಯುಳಿದ ವ್ಯಾಪಾರಗಳ ಬಿಟ್ಟು ಹರನ ಮಂದಿರದ ರಜದಾ ಸೇವೆಯೋ ಪರವಾಗಿ ಯೇನುಕಾರಣಮಿಪ್ಪೆ" ಎಂದು ಸುದೇವಿಯನ್ನು ಪ್ರಶ್ನಿಸಿದನಂ. ಆದಕ್ಕೆ ಆಕೆ "ತಪೋಧನನೆ ಹರಭಜನೆ ಮುಖ್ಯ ಸೇವೆಗಳೆನಗೆ ಪ್ರಿಯವಿಲ್ಲ ನಿರುತಮೆಲ್ಲಾಗ ಶಿವ ಮಂದಿರಾಂಗಣದ ರಜವುಡುಂಗುವತಿಭಕ್ತಿಯೆನೆಗೆ ದೊರೆಕೊಂಡ ಪರಿಯಂನ್ನೂ" ವಿವರಿಸ ತೊಡಗಿದಳು. ಪೂರ್ವದಲ್ಲಿ ವ್ಯೋಮಚಾರಿಣಿ ಎಂಬ ಹೆಣ್ಣುಹಕ್ಕಿ ಆನಂದದಿಂದ ಸಂಚರಿಸುತ್ತ ಕಿಷ್ಕಿಂಧಗಿರಿಗೆ ಬರಲಂ ಅಲ್ಲಿದ್ದ ಶಿವನಿಳಯದಲ್ಲಿ ಶಿವಲಿಂಗದರ್ಶನದಿಂದ ಸುರಲೋಕವನ್ನು ಪಡೆದೆ. ಲಿಂಗಪೂಜೆಯನ್ನು ಭಕ್ತಿಯಿಂದ ಮಾಡಿ ನೈವೇದ್ಯದ ಅನ್ನವು ಲಿಂಗದ ಪಕ್ಕದಲ್ಲಿ ಬಿದ್ದಿರಲು ಹಸಿವಿನಿಂದ ನಾನು ರೆಪ್ಪೆಗಳನ್ನು ಬಡಿದು ಕೊಂಡು ಬಂದು ಅದನ್ನು ತಿನ್ನಲು ಅದನ್ನು ಕಂಡ ಪೂಜಾರಿ ಕೊಂದುಹಾಕಿದನು. ಲಿಂಗದ ಸುತ್ತಲೂ ಇದ್ದ ರಜವನ್ನು ನನ್ನ ರೆಕ್ಕೆಗಳ ಚಲನೆಯಿಂದ ತೆಗೆದುಹಾಕಿದ ಪುಣ್ಯದಿಂದ ನರವರ್ಮರಾಜನಿಗೆ ಪಟ್ಟದರಾಣಿಯಾದೆ. ವಂತ್ತೆ ಕೇಳು ಉತ್ತಮಸ್ಥಳದ ಗೋಮಯುವನ್ನು ತೆಗೆದುಕೊಂಡುಹೋಗಿ ಲೇಪನಮಾಡಿದರೆ ಅವರಿಗೆ ಚಾಂದ್ರಾಯಣ ಫಲ ದೊರೆಯುವುದು.

ಹರನಾಲಯುದಲ್ಲಿ ಶುದ್ಧವಾದ ವಸ್ತ್ರದಿಂದ ಶೋಧಿಸಿದ ಜಲದಿಂದ ಉಪಲೇಪನ ಮಾಡಬೇಕು. ಶಿವಲಿಂಗಕ್ಕೆ ಅಭಿಷೇಕವನ್ನು ಮಾಡುವ ಜಲದ ಲಕ್ಷಣವನ್ನು ಇತರ ವಿವರಗಳನ್ನು ವರ್ಣಿಸಲಾಗಿದೆ. ಪ್ರಾಣಿವಧೆಯಾಗುಂವ ಕಾರಣಗಳನ್ನು ಅವುಗಳಿಂದಾಗುಂವ ಪಾಪಗಳನ್ನು ಪ್ರಾಣಿವಧೆಮಾಡದವರಿಗೆ ಲಭಿಸುವ ಪುಣ್ಯಗಳನ್ನು ವಿವರಿಸಲಾಗಿದೆ. ಮಂದಿರದಲ್ಲಿ ಒಂದು ಪ್ರಾಣಿಯನ್ನು ಕೊಂದರೆ ಮೂರುಲೋಕಗಳಲ್ಲಿ ಸರ್ವಪ್ರಾಣಿ ಗಳನ್ನು ಸಂಹರಿಸಿದ ಪಾಪವುಂಟಾಗುತ್ತದೆ. ಗೋಮಯುಜಲದಿಂದ ಶಿವಲಿಂಗದಾಲಯು ವನ್ನು ಒಂದುದಿನ ಬಳಿದವನಿಗೆ ಒಂದುವರ್ಷ ಚಾಂದ್ರಾಯಣದ ಫಲಪ್ರಾಪ್ತಿ ಯಾಗುವುದು. ಹರಮಂದಿರವನ್ನು ಗುಡಿಸಿ ಸಾರಿಸಿ ರಂಗವಲ್ಲಿಗಳನ್ನು ಇಟ್ಟವರಿಗೆ ಲಭಿಸುಂವ ಫಲಗಳನ್ನು ತಿಳಿಸಿದೆ. ಚಿತ್ರರಥನೆಂಬ ರಾಜೇಂದ್ರ ಹರನ ಮಂದಿರದಲ್ಲಿ ರಂಗವಲ್ಲಿಯಂನ್ನಿಟ್ಟು ಸಾಯುಜ್ಯವನ್ನು ಪಡೆದನಂ.

ನೈಮಿಷಾರಣ್ಯದ ಮುನಿಗಳುಂ ವರ್ಣಕರಂಗವಲ್ಲಿಯ ಮಹಿಮೆಯನ್ನು ವಿವರಿಸು ವಂತೆ ನಂದೀಶನನ್ನು ಕೇಳಲು ಆತನು ಪಾರ್ವತಿ ಶಿವಲಿಂಗದಗ್ರದಲ್ಲಿ ರಂಗವಲ್ಲಿಯನ್ನು ಬರೆದುದನ್ನು ವಿವರಿಸಿದನು. ಪಂಚವಾದ್ಯಗಳನ್ನು ಶಿವನ ಸನ್ನಿಧಿಯಲ್ಲಿ ನುಡಿಸಿ ದವನಿಗೆ ನಾನಾವಿಧವಾದ ಫಲಗಳು ಪ್ರಾಪ್ತವಾಗುತ್ತವೆ.

ಚಂದನ ಅಗರು ಕುಂಕುಮ ಗಂಧ ಅಕ್ಷತೆ ಪುಷ್ಪಗಳನ್ನು ಶಿವನಿಗೆ ಅರ್ಪಿಸಿದವರಿಗೆ ಮಹತ್ತರ ಫಲಗಳಾಗುವುವು. ಬಿಳಿಯತಾವರೆ ಸುರಹೊನ್ನೆ ಶಂಖಪುಷ್ಪ ನಂದ್ಯಾವರ್ತ ಬಿಳಿಯೆಕ್ಕೆ ಮೊಲ್ಲೆ ನೈದಿಲು ಕಂಚಿ ಕುರವಕ ಜಾಜಿ ಬಕುಳ ಇವೇ ಮೊದಲಾದ ಪುಷ್ಪಗಳು ಶಂಭುವಿಗೆ ಅರ್ಪಿಸಲು ಯೋಗ್ಯವಾದುವು.

ಬಿಳಿಯ ಪುಷ್ಪಗಳನ್ನು ಅರ್ಪಿಸಿದರೆ ಶಾಂತಿಯಾಗುತ್ತದೆ. ಪಿಂಗಲಕುಸುಮದಿಂದ ಐಶ್ವರ್ಯಪ್ರಾಪ್ತಿ. ರಕ್ತಕುಸುಮದಿಂದ ದುರ್ದೋಷನಾಶ. ಹೀಗೆ ನಾನಾವಿಧವಾದ ಪುಷ್ಪಗಳನ್ನರ್ಪಿಸುವುದರಿಂದ ನಾನಾವಿಧವಾದ ಫಲಪ್ರಾಪ್ತಿಯಾಗುವುದೆಂದು ಶಿವ ರಹಸ್ಯದಲ್ಲಿ ಹೇಳಿದೆ.

ನೀಲೋತ್ಪಲ ಬೆಳ್ದಾವರೆ ಮೊದಲಾದ ಕುಸುಮಗಳು ನೀಲಲೋಹಿತನಿಗೆ ಆಗುವುದಿಲ್ಲ ಎಂದು ಆಗಮಗಳು ಹೇಳಿವೆ. ತತ್ವಸಾರದಲ್ಲೂ ಇದನ್ನೇ ಹೇಳಿದೆ. ಕಮಲವು ಮಾತ್ರ ಶಿವನಿಗೆ ಬಹಳ ಪ್ರಿಯವಾದುದು. ಪಲಾಶ, ಬಿಲ್ವ, ತೊಳಚಿ, ಹೇಮಪುಷ್ಪಗಳು ಹಳೆಯವಾದರೂ ಅವನ್ನು ಪ್ರತಿದಿನ ತೊಳೆದು ಶಂಭುವಿಗೆ ಅರ್ಪಿಸಬೇಕೆಂದು ಸ್ಕಾಂದಪುರಾಣದಲ್ಲಿ ಹೇಳಿದೆ. ಕುಸುಮಗಳನ್ನು ಅರ್ಪಿಸುವುದರಿಂದಾಗುವ ಫಲಗಳನ್ನು ಮಾರ್ಕಂಡೇಯ ಪುರಾಣದಲ್ಲಿ ವಿವರಿಸಲಾಗಿದೆ. ಕರವೀರಕ್ಕಿಂತ ಸೇವಂತಿಗೆ, ಅದಕ್ಕಿಂತ ಅರವಿಂದ, ಅದಕ್ಕಿಂತ ಶತಪತ್ರ, ಅದಕ್ಕಿಂತ ಕಮಲ, ಅದಕ್ಕಿಂತ ಜಾಜಿ, ಅದಕ್ಕಿಂತ ಬಕುಳ, ಅದಕ್ಕಿಂತ ಮಲ್ಲಿಗೆ, ಅದಕ್ಕಿಂತ ಬಿಲ್ವ, ಅದಕ್ಕಿಂತ ಬಿಳಿಯೆಕ್ಕೆ ಅದಕ್ಕಿಂತ ತುಂಬೆ, ಇವನ್ನು ಶಿವನಿಗೆ ಅರ್ಪಿಸಿದರೆ ಸಾವಿರಮಡಿ ಫಲವನ್ನುಕೊಡುತ್ತದೆ. ಅರವಿಂದಕ್ಕಿಂತ ಬಕಪುಷ್ಪ ಅಧಿಕ. ಅದಕ್ಕಿಂತ ಅಶೋಕಪುಷ್ಪ, ಅದಕ್ಕಿಂತ ಬೃಹತಿಮಂದಾರವು ಅಧಿಕ. ಅದಕ್ಕಿಂತ ತುಂಬೆಯೂ ಅದಕ್ಕಿಂತ ಉತ್ತರಣೆಯೂ ಅದಕ್ಕಿಂತ ಕುಶಪುಷ್ಪವೂ ಅದಕ್ಕಿಂತ ಶಮಿಯೂ ಅದಕ್ಕಿಂತ ವೈಯಾಘ್ರವೂ ಅದಕ್ಕಿಂತ ಶಂಖಕವೂ ಅದಕ್ಕಿಂತ ನಂದೀಶ್ವರಾವರ್ತವೂ ಅದಕ್ಕಿಂತ ಮೇಚಕದಳೇಂದ್ರಾಣಿಯೂ ಅದಕ್ಕಿಂತ ಸುವರ್ಣಪ್ರಸವವೂ ಅದಕ್ಕಿಂತ ನೀಲೋತ್ಪಲವೂ ಶ್ರೇಷ್ಠವಾದುದು. ವಿವಿಧ ಪುಷ್ಪಗಳಲ್ಲಿ ಶಿವನಿಗರ್ಪಿಸಲು ಯಾವುದು ಶ್ರೇಷ್ಠವಾದುವೆಂಬುದನ್ನು ವಿವರಿಸಲಾಗಿದೆ.

ಶಿವಧರ್ಮದಲ್ಲಿ ಹೀಗೆ ಹೇಳಿರುವುದನ್ನು ನಂದಿ ವಿವರಿಸಿದನು. ಲೈಂಗ್ಯದಲ್ಲಿ ಅಂಬಿಕೆಗೆ ಹರನು ಹೇಳಿದ ರೀತಿಯನ್ನು ಕೇಳುವುದು. ಕಟುವಾಸನೆಯಿಂದ ಕೂಡಿದುದು ಆಘ್ರಾತವಾದುದು ಭೂಮಿಯಲ್ಲಿ ಬಿದ್ದುದು ಉಪಯುಕ್ತಿಪಿತ ಯವನಸ್ಪೃಷ್ಟವಾದುದು ಶಿವಾರ್ಚನೆಗೆ ಅಯೋಗ್ಯವು

ಎಲ್ಲ ಹೂವುಗಳಿಗೂ ಕಾಲಭೇದಗಳುಂಟು ಆದರೆ ಕರವೀರಕ್ಕೆ ಮಾತ್ರ ಭೂಮಿಯಲ್ಲಿ ಕಾಲಭೇದಗಳಿಲ್ಲ. ಇದು ಸರ್ವಕಾಲದಲ್ಲೂ ಇರುತ್ತದೆ. ಇದು ನೀಲೋತ್ಪಲಕ್ಕೆ ಸರಿಯೆಂದು ಕೆಲವರು ಹೇಳುವರು. ಕರವೀರದಿಂದ ಒಂದುತಿಂಗಳು ಶಿವನ ಪೂಜೆಮಾಡಿದವರಿಗೆ ಭೋಗ ಮೋಕ್ಷಗಳಾಗುವುದು ನಿಶ್ಚಿತವಾದುದು.

ಕೆಂಗಣಿಗಿಲು ಹಯಮಾರಕ ಚಂಡಾತಕ ಕರವೀರ ಮೊದಲಾದ ಪುಷ್ಪಗಳಿಂದ ಅರ್ಚಿಸಿದರೆ ದೊರಕುವ ಫಲಾಫಲಗಳನ್ನು ವಿವರಿಸಲಾಗಿದೆ.

ಮಲ್ಲಿಗೆ ಜಾಜಿ ಮೊಲ್ಲೆ ಇರವಂತಿಗೆ ಸಂಪಿಗೆ ಹೂವುಗಳಿಂದ ಕೂಡಿದ ಹಾರವನ್ನು ಶಿವನಿಗೆ ಅರ್ಪಿಸಿದರೆ ಸಾಮ್ರಾಜ್ಯಫಲವೇ ಮೊದಲಾದುವು ದೊರಕುತ್ತವೆ.

ಶಿವನಿಗೆ ಬಿಲ್ವಪತ್ರೆ ಸರ್ವಶ್ರೇಷ್ಠವಾದುದು. ಅದರಂತೆಯೇ ಅಂಕೋಲೆ ತೊಳಲಿ ಮರುಗ ಬನ್ನಿ ದವನ ಉತ್ತರಣೆ ಗರಿಕೆ ಗೌರಿಯದರ್ಭೆ ಮಂಚಿಪತ್ರೆ ಸೇವಂತಿಗೆ ಗರುಗ ನೇರಿಲು ಅಶೋಕ ಧಾತಕಿ ಸದಾಭದ್ರ ತವಸಿ ಇಂದ್ರಾಣಿ ಅಪರಾಜಿತೆ ಮೊದಲಾದುವು ಪ್ರಿಯವಾದುವು. ಇವಲ್ಲದೆ ವನದಲ್ಲಿ ಬೆಳೆದಿರುವ ಕಟುವಾಸನೆ ಯಿಲ್ಲದಿರುವ ನವಪಲಾಶಗಳು ಯಾವುದರಿಂದಲಾದರೂ ಶಿವನನ್ನು ಪೂಜಿಸಬಹುದು.

ಕರಮರ್ದ ಶಂಖಿನಿ ಕಪಿತ್ಥ ನಿರ್ಗುಂಡಿ ಗಿರಿಚೂತ ಪಂಚಬಿಲ್ವ ಇವು ಹರನ ಅರ್ಚನೆಗೆ ಯೋಗ್ಯವಾದುವು. ಬೇರುಗಳೊಳಗೆ ಲಾಮಂಚ ಮುಡಿವಾಳ ಯೋಗ್ಯ ವಾದುವು. ಇವು ದೊರಕದಿದ್ದರೆ ಪುಣ್ಯಧಾನ್ಯನಾಳಗಳಿಂದ ಹರನ ಪೂಜಿಸಬೇಕು.

ಧೂಪಪಾತ್ರೆಯಲ್ಲಿ ಕಾಲಾಗುರು ಗಂಧಸಾರ ಗುಗ್ಗುಲ ಬಿಳಿಯಗಿಲು ಅರಗು ಬೆಲ್ಲವತ್ತ ಗೋಘೃತ ಸಜ್ಜರಸ ಜೇನು ಪ್ರಾಲೇಯವೆಂಬ ದಶದ್ರವ್ಯಗಳಿಂದ ಕೂಡಿದ ಪಿಷ್ಟಧೂಪದಿಂದ ಬಾಲೇಂದುಮೌಳಿ ಸಂತುಷ್ಟನಾಗುವನೆಂದು ಶಿವರಹಸ್ಯ ಹೇಳುತ್ತದೆ.

ಕೃಷ್ಣಾಷ್ಟಮಿಯ ಚತುರ್ದಶಿಯರಾತ್ರಿ ಜಟಾಮಾಂಸೆ ಗುಗ್ಗುಲ ಗಂಧಸಾರ ಕೃಷ್ಣಾಗರು ಶೈಲೇಯ ನಖಿಕೋಷ್ಠ ಮೊದಲಾದುವುಗಳಿಂದ ಮಾಡಿದ ದಶಾಂಗವನ್ನು ಧೂಪಹಾಕಿದರೆ ಪುರಾರಿ ಅತ್ಯಂತ ಸಂತೋಷಗೊಳ್ಳುವನು.

ಶಿವನಿಗೆ ಚಿನ್ನ ಬೆಳ್ಳಿ ಹಿತ್ತಾಳೆ ತಾಮ್ರದಿಂದ ದೀಪಾರತಿಯನ್ನು ಮಾಡಬೇಕು. ಇವು ದೊರಕದಿದ್ದರೆ ಧಾನ್ಯದ ಹಿಟ್ಟಿನಿಂದ ನಾನಾವಿಧದ ಆರತಿಗಳನ್ನು ಮಾಡಿದರೆ ಭವದಿಂದ ಮುಕ್ತನಾಗುವನೆಂದು ಲೈಂಗ್ಯಪುರಾಣದಲ್ಲಿ ಶಿವನೇ ನಿರೂಪಿಸಿದ್ದಾನೆ.

ಕರ್ಪೂರವನ್ನು ಚಿನ್ನದ ತಟ್ಟೆಯಲ್ಲಿ ಬೆಳಗಿದರೆ ಲಭಿಸುವ ಫಲವನ್ನೂ ವಿವಿಧ ಧಾನ್ಯಗಳಿಂದ ನೈವೇದ್ಯವನ್ನು ಮಾಡಿದರೆ ಪ್ರಾಪ್ತವಾಗುವ ಫಲವನ್ನೂ ವಿವರಿಸಲಾಗಿದೆ. ನವವಿಧಧಾನ್ಯಗಳಿಂದ ಮಾಡಿದ ಭಕ್ಷ್ಯದ ನೈವೇದ್ಯ ಮತ್ತು ಆರುವಿಧವಾದ ಅನ್ನದಿಂದ ಮಾಡಿದ ನೈವೇದ್ಯದಿಂದ ಶಾಶ್ವತಪದವಿಯನ್ನು ಪಡೆಯುತ್ತಾನೆ.

ಶಿವನಿಗೆ ಅರ್ಪಿಸಲು ಯೋಗ್ಯವಾದ ಭಕ್ಷ್ಯಗಳನ್ನು ಫಲಗಳನ್ನು ಕಂದಮೂಲ ಗಳನ್ನು ನಾನಾವಿಧವಾದ ನೈವೇದ್ಯಗಳನ್ನು ತಿಳಿಸಿ ಅರ್ಪಿಸುವ ತಾಂಬೂಲ ವಸ್ತುಗಳನ್ನು ವರ್ಣಿಸಲಾಗಿದೆ.

.ರಾಗವೇ ಮೊದಲಾದ ದೋಷಗಳು ನಾಶವಾಗಿ ಸಾಂಸಾರಿಕ ಭೋಗವನ್ನು ಹೊಂದದೆ ಕೈಲಾಸವನ್ನು ಸೇರಿ ಗಣಪದವನ್ನು ಪಡೆದು ಭಕ್ತರು ಸುಖದಿಂದಿರುತ್ತಾರೆ. ಗಂಧದಿಂದ ಆಯುಷ್ಯವೂ ಅಕ್ಷತೆಯಿಂದ ಶತ್ರುನಾಶವೂ ಧೂಪದಿಂದ ಪಾಪನಾಶವೂ

ದೀಪದಿಂದ ಮೃತ್ಯುಹರವೂ ನೈವೇದ್ಯದಿಂದ ಸಾಮ್ರಾಜ್ಯಪದವಿಯೂ ಪ್ರಾಪ್ತವಾಗುವುದು.

ತಾಂಬೂಲ ಸಮರ್ಪಣೆಯಿಂದ ಕೇಡಿಲ್ಲದ ಪದವಿ ಪ್ರಾಪ್ತವಾಗುತ್ತದೆ. ನಾನಾ ವಿಧವಾದ ಪಟ್ಟುಪಟ್ಟಾವಳಿಗಳನ್ನು ಪರಶಿವನಿಗೆ ಸಮರ್ಪಿಸಿದವರಿಗೆ ಲಭಿಸುವ ಪುಣ್ಯವನ್ನು ಬಣ್ಣಿಸುವುದು ಅಸದಳ. ಅಪರಂಜಿ, ಚೊಕ್ಕಬೆಳ್ಳಿ, ಕೃಷ್ಣಕಾರ್ಪಾಸದಿಂದ ಪವಿತ್ರವನ್ನು ಮಾಡಿ ಪರಶಿವನಿಗೆ ಸಮರ್ಪಿಸಿದವರಿಗೆ ಅನಂತ ಫಲಪ್ರಾಪ್ತವಾಗುತ್ತದೆ.

ಹೇಮಮಯದಂಡ ರತ್ನಮಯಕಳಸ ಪಟ್ಟಾಂಬರದ ಬಟ್ಟು ದಿವ್ಯಾತಪತ್ರ ಇವನ್ನು ಸೋಮಶೇಖರನಿಗೆ ಸಮರ್ಪಿಸಿದವನು ಸಾರ್ವಭೌಮನಾಗುತ್ತಾನೆ.

ಶಿವನಿಗೆ ಪೂಜಾಸಮಯದಲ್ಲಿ ಚಾಮರ ವ್ಯಜನಗಳನ್ನು ಅರ್ಪಿಸಬೇಕು. ಶಿವನ ಪರಿವಾರದ ನಾರಿಯರು ವ್ಯಜನವನ್ನು ಹಿಡಿದು ಬೀಸುತ್ತ ಪುಷ್ಪಗಳನ್ನು ಹಿಡಿದು ನಿರಂತರವಾಗಿ ನಮಸ್ಕರಿಸುತ್ತಿರುವರು. ಚೌಕಗಳ ಪಟ್ಟಿಯಿಂದ ಕೆತ್ತಿದ ದರ್ಪಣವನ್ನು ಈಶ್ವರನಿಗರ್ಪಿಸಬೇಕು. ಶಂಕರನ ಲೀಲಾಚರಿತ್ರೆಯನ್ನು ಉಚ್ಚರಿಸುವ ಶುಭತರ ಪುರಾಣಗಳನ್ನು ಲಯಮಾರ್ಗ ತಪ್ಪದಂತೆ ವಾಚಿಸಬೇಕು.

ಶಿವನ ಇದಿರಿನಲ್ಲಿ ಹಗಲು ರಾತ್ರಿ ವಿವಿಧರಾಗಗಳಿಂದ ಹಾಡಿ ಪೂಜಿಸಿದರೆ ಮಹತ್ತರವಾದ ಫಲ ಪ್ರಾಪ್ತವಾಗುತ್ತದೆ. ಪಾದುಕೆ ಕಿರೀಟ ಪೀತಾಂಬರಗಳನ್ನೂ ರತ್ನಖಚಿತವಾದ ವಾಹನಗಳನ್ನೂ ತಂಪಾದ ಇಂಪಾದ ಸುಗಂಧ ದ್ರವ್ಯಗಳನ್ನೂ ಪರಮೇಶ್ವರಾಂಘ್ರಿಗೆ ಸಮರ್ಪಿಸಬೇಕು.

ಕಾಲದೇಶಗಳನ್ನು ನೋಡದೆ ಧನ ಪ್ರಾಪ್ತವಾದಾಗಲೇ ಪರಮೇಶ್ವರನ ಲೀಲೆಗೆ ಯಾವ ಆಭರಣ ವಸ್ತುವಾಹನಗಳು ಬೇಕೋ ಅವನ್ನು ಸಾಧ್ಯವಿದ್ದಷ್ಟರಲ್ಲಿಯೇ ಮಾಡಬೇಕು.

ಪರಶಿವನು ಸರ್ವಾಂತರ್ಯಾಮಿಯೂ ಸರ್ವಜನಸಂರಕ್ಷಕನೂ ಎನಿಸಿ ಶಿವ ರುದ್ರ ಪಶುಪತಿ ಮಹದೇವ ಎಂಬ ಪರ್ಯಾಯ ನಾಮಗಳಿಂದ ಪ್ರಸಿದ್ಧನಾಗಿ ನಾಮಸ್ಮರಣೆ ಮಾತ್ರದಿಂದ ಜಂತುಗಳ ಭವವನ್ನು ಸಂಹರಿಸುವನಾಗಿದ್ದನು. ತನ್ನ ಅಂಗಕಾಂತಿಯಿಂದ ಮೆರೆಯುತ್ತ ಸಿಂಹಾಸನಾಸೀನನಾಗಿದ್ದನು. ಕೋಟಿಕಂದರ್ಪ ಲಾವಣ್ಯರಸಬಂಧುರನಾದ ಶಿವನು ಉಮೆಯೊಡನೆ ರತ್ನಕಿರೀಟ ಫಣಿಕುಂಡಲಾದಿಗಳಿಂದ ವಿರಾಜಮಾನನಾಗಿದ್ದನು.

ಶಂಭುವಿನ ಎರಡು ಪಕ್ಕಗಳಲ್ಲಿ ಷಣ್ಮುಖ ಮತ್ತು ವಿಘ್ನೇಶ್ವರರಿದ್ದರು. ಇಕ್ಕೆಲಗಳಲ್ಲಿ ಕೈವಾರಿಸುವ ವಂದಿಮಾಗಧರೂ ಮಹಾಮುನಿಗಳೂ ಹರಿಕಮಲಾಸನರೇ ಮೊದಲಾದವರೂ ಸರ್ವಸ್ವವನ್ನೂ ತೊರೆದ ಶರಣ ಸಮುದಾಯವೂ ಕೂಡಿತ್ತು.

ಚಂದ್ರಶೇಖರನ ಓಲಗದಲ್ಲಿ ಲಕ್ಷ್ಮಿ ಸರಸ್ವತಿ ಶಚಿ ಮೊದಲಾದವರು ಕಾಲಕಾಲದಲ್ಲಿ ಉಚಿತವಾದ ಪರಿಚರ್ಯೆಯನ್ನು ಮಾಡುತ್ತಿದ್ದರು. ನಾರದನೇ ಮೊದಲಾದ ವೈಣಿಕರು ಹಾಡುತ್ತಿದ್ದರು. ರಂಭಾದಿ ನರ್ತಕಿಯರು ನರ್ತಿಸುತ್ತಿದ್ದರು.

ತ್ರಿದಶಗಣ ರುದ್ರಗಣ ಭಕ್ತಗಣ ಪಾರಿಷದ ಗಣವೇ ಮೊದಲಾದ ಸುರರಿಂದ ಚಂದ್ರಶೇಖರನ ಓಲಗ ಶೋಭಾಯಮಾನವಾಗಿತ್ತು. ಪರಶಿವನು ಕಾಯಕಾಂತಿ ಯಿಂದಲೂ ಕಿರೀಟವೇ ಮೊದಲಾದ ಅಲಂಕಾರಗಳಿಂದಲೂ ರಾಜಿಸುತ್ತಿದ್ದನು

ಹರಿ ದಿಕ್ಪಾಲ ರುದ್ರರು ಆದಿತ್ಯರು ವಸುಗಳು ಆಷಾಡಿ ಡಿಂಡಿ ವಿಬುಧೇಶ ನೈವಿಂಷ ಇವರೇ ಮೊದಲಾದ ನಾನಾ ಸುರವಿಸರದಿಂದ ಸೇವೆಯನ್ನು ಕೈಕೊಳುತ್ತ ಪರಮೇಶ್ವರನು ದಿವ್ಯಭದ್ರಾಸನದಲ್ಲಿ ಒಪ್ಪಿದ್ದನು. ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಗನು ರಾಜಿಸುತ್ತಿರಲು ಆದರ ಮಧ್ಯದಲ್ಲಿ ಕಂತುಹರನ ಈಶಾನಮುಖವು ಆಕಾಶ ರೂಪವಾಗಿ ಒಪ್ಪುತ್ತಿತ್ತು.

ಶಿವನಿಂದಲೇ ಸಕಲರಿಗೆ ಇಷ್ಟಫಲಸಿದ್ಧಿ. ಸಕಲರ ಭವನಾಶ. ಸರ್ವಕ್ಕೆ ಈತನೇ ಅಧಿಷ್ಠಾನ ಚೈತನ್ಯ. ಈತನಿಗಿಂತ ಮೊದಲು ಬ್ರಹ್ಮಾಂಡದಲ್ಲಿ ಯಾರೂ ಉದಿಸಿರಲಿಲ್ಲ. ಈತನಿಂದ ಅರಿಯಲ್ಪಡದ ಕಾರ್ಯವಿಲ್ಲ ಎಂದು ವಿವರಿಸಲಾಗಿದೆ.

ಅಚೇತನವಾದ ಭೂಮಿ ಮಹಾಭೂತ ಜಾಲಕ್ಕಿಂತ ಚೇತನವಾದ ಜಂತುವರ್ಗವೇ ಮೇಲು. ಕರ್ಮದೇವತೆಗಳು ಅಧಿಕರು. ಅವರಿಗಿಂತ ವಿಬುಧರೇ ಮೇಲು. ಅವರಿಗಿಂತ ಇಂದ್ರ ಮೇಲು. ಆತನಿಗಿಂತ ಗುರು ವಿಶಾಲಮತಿ. ಆತನಿಗಿಂತ ಹಂಸವಾಹನ ಮೇಲು. ಆತನಿಗಿಂತ ವಿಷ್ಣು ಪರತರನೆನಿಸುವನು. ಆತನಿಗಿಂತ ರುದ್ರನೇ ಪರತರ. ಆತನಿಗಿಂತ ಉಮಾನಾಥನಾದ ಪರಮೇಶ್ವರನೆ ಮಹೋತ್ತಮ. ಆತನಿಗಿಂತ ಪರಮರು ಮತ್ತಾರೂ ಇಲ್ಲ.

ಶಿವನೊಬ್ಬನೇ ಧ್ಯೇಯನೆಂದೂ ಶಿವಶಂಕರನೆಂದೂ ಸಮಾರಾಧ್ಯನೆಂದೂ ನಿಗಮಾದಿಗಳು ಸಾರುತ್ತಿವೆ. ಶಿವನು ಲೋಕಹಿತಾರ್ಥವಾಗಿ ಎಡಭಾಗದಲ್ಲಿ ಪಾರ್ವತಿ ಯನ್ನು ಗಂಹಗಣೇಶಾದಿ ಗಣನಾಥರನ್ನು ಕೂಡಿಕೊಂಡು ಕೈಲಾಸದಲ್ಲಿ ವಿರಾಜಿಸುತ್ತಿರು ವನು. ಜಗತ್ತಿನ ಜೀವರಾಶಿಗಳ ದುಃಖನಿವಾರಣೆಯೇ ಮೊದಲಾದ ಲೋಕಹಿತಾರ್ಥ ಕಾರ್ಯಗಳನ್ನು ಮಾಡುವುದೇ ಮುಖ್ಯವಾದ ಕಾರ್ಯ. ನಿತ್ಯತೃಪ್ತನಾದವನಿಗೆ ಕಾರ್ಯಾಂತರಗಳು ಉಂಟೆ. ಆತನನ್ನು ಪೂಜಿಸುವುದರಿಂದ ಪರಮ ಫಲಗಳು ಪ್ರಾಪ್ತ ವಾಗುವುದೆಂದು ವಾತೂಲವೇ ಮೊದಲಾದ ಆಗಮಗಳು ಸಾರುತ್ತವೆ.

ಅಭಿನವ ನೀಲಕಂಠನಾಮಾಚಾರ್ಯರು ಶಿವನ ಪೂಜಿಸುವುದೇ ಸತ್ಕರ್ಮ ಸದ್ಯೋಗ ಸುಧ್ಯಾನ ವಂದನೆ ಸ್ವಾಧ್ಯಾಯ ಘೋರತಪ ವಿಜ್ಞಾನ ಎಂದು ಹೇಳಿರುವ.

ಎಳೆಯಹರೆಯದವನೂ ನಿಟ್ಟೆಸಳುಕಂಗಳುಳ್ಳವನೂ ಚಂದ್ರಾವತಂಸನೂ ಕನ್ನಡಿಯ ಹೊಳಪಿನ ಕಪೋಲಗಳುಳ್ಳವನೂ ವಿದ್ರುಮಗಳನ್ನು ಪಳಿವ ಅಧರವುಳ್ಳ ವನೂ ಮುತ್ತುಗಳನ್ನು ಹೀಯಾಳಿಸುವ ದಂತಪಂಕ್ತಿಯುಳ್ಳವನೂ ಆದ ಶಂಭುವನ್ನು ಚಿತ್ತದಲ್ಲಿ ನೆನೆಯಬೇಕು. ಪ್ರತಿಯೊಂದು ಅಂಗಕ್ಕೂ ಪುಷ್ಪಗಳನ್ನು ಸಮರ್ಪಿಸಿ ಪೂಜಿಸ ಬೇಕು.

ಗಣೇಶನನ್ನು ದೂರ್ವಾಂಕುರಗಳಿಂದಲೂ ಕುಮಾರನನ್ನು ರುದ್ರಜಟೆಯಿಂದಲೂ ಅಂಬಿಕೆಯನ್ನು ಹರಿಪ್ರಿಯ ಪ್ರಸವದಿಂದಲೂ ನಂದಿಯನ್ನು ನಂದಿವಟ್ಟಲ ಕುಸುಮ ದಿಂದಲೂ ಅಹರ್ನಿಶವೂ ಅರ್ಚಿಸಬೇಕು. ಶುಭಫಲಕುಸುಮರಾಜಿ ದೊರಕದಿದ್ದರೆ ಪೂಜೆಯನ್ನು ನಿಲ್ಲಿಸಬಾರದು. ದೊರಕಿದ ಪುಷ್ಪಗಳಿಂದಲೇ ಪೂಜೆಮಾಡಿದರೂ ಶಂಕರನು ತೃಪ್ತನಾಗುವನು.

ಮೂವತ್ತೆರಡು ಸದುಪಚಾರಗಳಿಂದ ಪೂಜಿಸಿದವನಿಗೆ ದೊರಕುವ ಫಲವೇ ಯಥಾಶಕ್ತಿಯಿಂದ ಶಿವನನ್ನು ಪೂಜೆಮಾಡಿದವರಿಗೂ ದೊರಕುತ್ತದೆ. ಆರಾಧಿಸಿ ದವರಿಗೆ ಒಂದೇ ಪ್ರಕಾರವಾಗಿ ಮುಕ್ತಿಯನ್ನು ಕೊಡುವುದರಿಂದ ದ್ರವ್ಯಾನು ಕೂಲವಾಗಲಿಲ್ಲವೆಂದು ಚಿಂತಿಸದೆ ಪೂಜೆಯನ್ನು ಮಾಡಬೇಕು. ಇದಕ್ಕೆ ದೃಷ್ಟಾಂತ ವಾಗಿ ಒಬ್ಬ ಶಬರನ ಕಥೆಯನ್ನು ನಿರೂಪಿಸಿದೆ. ಒಬ್ಬ ಶಬರ ಬೇಟೆಗಾಗಿ ಘೋರಾರಣ್ಯಕ್ಕೆ ಹೋಗಿ ಯಾವ ಮೃಗವಾಗಲಿ ಹಕ್ಕಿಯಾಗಲಿ ಸಿಕ್ಕದೆ ಚಿಂತಾಕ್ರಾಂತ ನಾಗಿದ್ದನು. ಕತ್ತಲೆಯಾಗುತ್ತಾ ಬರಲು ಘೋರಮೃಗಗಳು ಆಕ್ರಮಿಸಬಹುದೆಂಬ ಹೆದರಿಕೆಯಿಂದ ಬಿಲ್ವಪತ್ರೆಯ ಮರವನ್ನು ಏರಿ ಕುಳಿತುಕೊಂಡನು. ಘೋರವಾದ ಮಳೆಯಿಂದ ತೊಯ್ದು ಗಡಗಡನೆ ನಡುಗುತ್ತಿದ್ದನು. ಮಳೆ ನಿಂತ ಮೇಲೆ ಅಲ್ಲಿ ಅಡ್ಡಲಾಗಿದ್ದ ಪತ್ರಕಿತ್ತು ಎಸೆಯುತ್ತಿರುವಲ್ಲಿ ಬೆಳಗಾಗುತ್ತಾ ಬಂದಿತು. ಇನ್ನು ಮೃಗಗಳ ಬಾಧೆಯಿಲ್ಲವೆಂದು ಮರದಿಂದ ಇಳಿದು ಬಂದನು. ಅಲ್ಲೇ ಹುತ್ತದಲ್ಲಿದ್ದ ಹಾವು ಕಚ್ಚಲು ಶಬರನು ಸತ್ತುಹೋದನು. ಅವನನ್ನು ಕೊಂಡೊಯ್ಯಲು ಯಮ ದೂತರು ಬಂದರು. ಆ ವೇಳೆಗೆ ಕೈಲಾಸದಿಂದ ಗಣೇಶ್ವರನು ವಿಮಾನದಲ್ಲಿ ಬರಲು ಯಮ ಕಿಂಕರರು ಪಲಾಯನಮಾಡಿದರು. ಗಣೇಶ್ವರನು ಶಬರನನ್ನು ವಿಮಾನದಲ್ಲಿ ಕೈಲಾಸಕ್ಕೆ ಕೊಂಡೊಯ್ದು ಮೃಡನ ಸನ್ನಿಧಿಯಲ್ಲಿ ಗಣೇಶ್ವರಪದವಿಯನ್ನು ಕೊಟ್ಟನು. ಅಲ್ಲಿದ್ದ ವರೆಲ್ಲ ಆಶ್ಚರ್ಯದಿಂದ ನೋಡುತ್ತಿರಲು ಪಾರ್ವತಿ ಪರಶಿವನನ್ನು ಕೊಂಡಾಡಿದಳು. ಆತನ ಮಹಿಮೆಯನ್ನು ವಿಶೇಷವಾಗಿ ವರ್ಣಿಸಿದಳು. ಅದನ್ನು ಕೇಳಿದ ಮೃತ್ಯುಂಜ ಯನು ಪಾರ್ವತಿಗೆ ಶಿವರಾತ್ರಿಯಿಂದ ಅಧಿಕವಾದ ವ್ರತ ಮತ್ತೊಂದಿಲ್ಲವೆಂದೂ ಭವ ಸಮುದ್ರದೊಳಗಾಳುತ್ತಿರುವವರನ್ನು ಶಾಂಭವದ ತಡಿಗೆ ಸಾರ್ಚಲು ಈ ವ್ರತ ನಾವೆ ಎಂದನು. ಯಾರು ಶಿವರಾತ್ರಿಯನ್ನು ಮಾಡುವರೊ ಅವರೆಲ್ಲ ನನಗೆ ಅತಿಪ್ರಿಯರಾದ ವರು. ಶಬರನು ಶಿವರಾತ್ರಿಯಂದು ಆಹಾರವಿಲ್ಲದೆ ನಾಲ್ಕುಜಾವ ದಿಕ್ಕು ದಿಕ್ಕುಗಳಲ್ಲಿರುವ ಲಿಂಗಗಳಿಗೆ ಪರ್ಣಗಳನ್ನು ಕಿತ್ತುಹಾಕಿ ಪೂಜಿಸಿ ಪಾಪನಿವಾರಣೆ ಮಾಡಿ ಕೊಳ್ಳುವಷ್ಟರಲ್ಲಿ ಸರ್ಪದಿಂದ ಮೃತನಾದನು. ಇದಕ್ಕಿಂತ ಮಹತ್ತರವಾದ ಫಲವಾವುದು ಎನ್ನಲು ಪಾರ್ವತಿ ನಡನಡುಗಿ ಶಿವನ ಪಾದಗಳಿಗೆ ತಲೆಯನ್ನು ಚಾಚಿದಳು. ಪುಳಿಂದ ನಿಗೆ ನೇಮವಾವುದು ಎಂಬುದು ತಿಳಿಯದೆ ಕೇವಲ ಉದರ ಪೋಷಣೆ ನಿಮಿತ್ತವಾಗಿ ಬಂದವನಿಗೆ ಗಣೇಶ ಪದವಿ ಪ್ರಾಪ್ತವಾಯಿತು. ನರಜನ್ಮ ಬಂದಾಗ ಈಶ್ವರನನ್ನು

ಮರೆಯದೆ ಪೂಜಿಸಿದರೆ ಮಹತ್ತರ ಫಲಲಭಿಸುತ್ತದೆ. ಶಿವನನ್ನು ಅಂದಂ ನಾನಾ ವಿಧವಾದ ಸ್ತೋತ್ರಗಳಿಂದ ಹೊಗಳಿ ಪೂಜಿಸಿದರೆ ಪರಮೋಕ್ಷ ಸಿದ್ಧಿಸುವುದಕ್ಕೆ ಸಕಲ ಆಗಮಗಳೆ ಸಾಕ್ಷೀಭೂತವಾಗಿವೆ.

ವೀರಶೈವಾಚಾರಕ್ಕೆ ಮೂಲ ಗುರುಸೇವೆ. ಈ ಸೇವೆಯಿಲ್ಲದವರು ಏನೇ ಆಚರಿಸಿದರೂ ಫಲಸಿದ್ಧಿಯಾಗುವುದಿಲ್ಲ. ಇದು ಶಾಸ್ತ್ರ ಸಿದ್ಧವಾದುದು. ಗುರುಪಾದದ ಊಳಿಗಮಾಡಬೇಕು. ಇದೇ ಮಾನಸಿಕ ಗುರುಪೂಜೆ ಎಂದು ಹಿರಿಯರು ಹೇಳುವರು. ಗುರುಗಳು ಹೇಳಿದುದಕ್ಕೆ ಇದಿರಾಡಬಾರದು. ಗುರುಗಳ ಕೆಲಸವನ್ನು ಶಿರಸಾವಹಿಸಿ ಮಾಡುವುದೇ ಶಿಷ್ಯವರ್ಗದ ಕರ್ತವ್ಯವೆಂದು ನೈಮಿಷಾರಣ್ಯದಲ್ಲಿ ಹೇಳಿರುವುದನ್ನು ಸೂತನು ವಿವರಿಸಿದನು. ಗುರುವನ್ನು ಮನೆಗೆ ಕರೆತಂದು ಉಪಚರಿಸುವಾಗ, ಗುರುಗಳಲ್ಲಿ ಎಂದೂ ವೈಮನಸ್ಯಕ್ಕೆ ಎಡೆಮಾಡಿಕೊಡದಿರುವಾಗ ಗುರುಬಯಸಿದುದೆಲ್ಲವನ್ನೂ ಸಲ್ಲಿಸುವುದೇ ಪರಮ ಪೂಜೆ ಎಂದು ಆಗಮಗಳಲ್ಲಿ ಹೇಳಿದೆ. ಗುರುವಿನ ದೋಷಗಳನ್ನು ಪರಿಗಣಿಸಬಾರದು. ಶಿವನೇ ಗುರು, ಗುರುವೇ ಶಿವ. ಗುರುವನ್ನು ಬಿಟ್ಟು ಶಿವನಾಗಲಿ ಶಿವನನ್ನು ಬಿಟ್ಟು ಗುರುವಾಗಲಿ ಇಲ್ಲ. ಗುರು ಹರನ ರೂಪದಿಂದ ಭುವನದಲ್ಲಿ ಚರಿಸುತ್ತಾನೆ. ಆತನ ಹಸ್ತವನ್ನು ಶಿಷ್ಯನ ಮಸ್ತಕದ ಮೇಲಿಟ್ಟರೆ ಸಮಸ್ತ ಪಾಪಗಳೂ ಪರಿಹಾರವಾಗುತ್ತವೆ. ಶಿವನೆಂಬ ಪರವಸ್ತು ಗುರುಹಸ್ತಗತವಾದ ಧನವೆಂದು ಭಾವಿಸಬೇಕು.

ಗುರುನಿರೀಕ್ಷಣಮಾತ್ರದಿಂದ ಲಿಂಗಕ್ಕೆ ಕಳೆ ದೊರೆಕೊಳ್ಳುತ್ತದೆ. ಗುರುಹಸ್ತ ಸಂಸ್ಪರ್ಶನವಾದ ಮೇಲೆ ಪ್ರಾಣಲಿಂಗವೆನಿಸುತ್ತದೆ. ಆ ಮಹಾಲಿಂಗವನ್ನು ಧರಿಸಿದರೆ ಭೋಗ ಮೋಕ್ಷಗಳಾಗುತ್ತವೆ. ಆದುದರಿಂದ ಗುರುವೆ ಪರದೈವ.

ಗುರುಪಾದಸೇವೆಯನ್ನು ಸಂಧ್ಯಾಕಾಲದವರೆಗೂ ಯಾವಾಗಲೂ ಮಾಡುತ್ತಿರಬೇಕು. ಸಂಧ್ಯಾಕಾಲಕ್ಕೆ ಎರಡುಗಳಿಗೆ ಹಿಂದಿನ ಸಮಯ ಬ್ರಾಹ್ಮೀಮುಹೂರ್ತ. ಅದು ಅಭ್ಯುತ್ಥಾನ ಕಾಲವೆಂದು ಯೋಗಿಗಳು ಹೇಳುತ್ತಾರೆ. ಆಗ ಜಲಪಾತ್ರೆಯೊಡನೆ ಗ್ರಾಮದ ಬಹಿರ್ಭಾಗಕ್ಕೆ ಬಂದು ಕ್ರಮಬದ್ಧವಾಗಿ ಶೌಚಾದಿ ಕಾರ್ಯಗಳನ್ನು ಕುಲ್ಯ ತಟಾಕ ಸರಸಿ ಪಲ್ವಲಕೂಪಗಳಿಂದ ನೀರನ್ನು ತೆಗೆದುಕೊಂಡು ಮಾಡಬೇಕು. ಮಧ್ಯಾಹ್ನದ ಸ್ನಾನವನ್ನು ಮಾಡಿದ ಮೇಲೆ ಶಿವಲಿಂಗ ಪೂಜೆಯನ್ನು ಮಾಡಿ ಜಂಗಮ ಪ್ರಸಾದವನ್ನು ಸ್ವೀಕರಿಸಬೇಕು. ಗೃಹಾರಾಮ ಧಾನ್ಯ ಧನ ಗೋತತಿಗೆ ಲಿಂಗಾಂಕಿತ ಮಾಡಬೇಕು. ವಸನ ಭೂಷಣ ಕೋಶಗಳಿಗೆ ನಂದ್ಯಂಕಿತ ಮಾಡಬೇಕು. ಹೊಸದನ್ನು ಮಾತ್ರ ಅಂಗೀಕರಿಸಬೇಕು. ಪಶುಪತಿಯ ದೀಕ್ಷೆಯಿಲ್ಲದ ಜನರ ಕೈಯನ್ನು ಸೋಕಿಸಬಾರದು. ಜೇನು ನೀರು ಹಾಲು ಇವನ್ನು ಲಿಂಗ ಮುದ್ರಾಂಕಿತ ಮಾಡಿ ಸ್ವೀಕರಿಸಬೇಕು.

ಲವಮಾಂಸ ಮಧ್ಯಮಾಂಸ ಮಹಾಮಾಂಸ ಇವಕ್ಕೂ ಕೂಪಕ್ಕೂ ಲಿಂಗಮುದ್ರೆಯನ್ನು ಮಾಡಿ ಯುವತಿಯನ್ನು ಲಿಂಗಧಾರಣದಿಂದ ಪವಿತ್ರಮಾಡಿ ಸ್ವೀಕರಿಸಬೇಕು.

ಯಾವಾಗಲೂ ಭವಿಪಾಕವನ್ನು ಮುಟ್ಟಬಾರದು. ಶಿವ ಪೂಜೆಮಾಡುವಾಗ ಲೋಕಗಳ ವ್ಯವಹಾರ ಮಾತನಾಡಬಾರದು. ಮಧ್ಯರಾತ್ರಿಯಲ್ಲಿ ಭುಂಜಿಸಬೇಕು.

ಜಲ ದೋಷವಿರಹಿತವಾಗಿರಬೇಕು. ಪತ್ರ ಫಲ ಪುಷ್ಪಗಳು ಕ್ರಿಮಿಕೀಟಗಳ ವೇಧೆಯನ್ನು ಪಡೆಯದಿರಬೇಕು. ಷಟ್ಸ್ಥಲಬ್ರಹ್ಮಿಯಾಗಿರುವ ಜಂಗಮವೆ ಪಾತ್ರ. ಶಿವನ ಸಂಸ್ಕಾರದಿಂದ ಈ ಶರೀರ ಹೊಸದು ಎಂದು ಭಾವಿಸಿ ಶಿವಭಕ್ತನೆಂಬುದೇ ಗೋತ್ರ ಎಂದು ಪರಿಗಣಿಸುವುದೇ ಷಡ್ವಿಧದ ಸಂಸ್ಕಾರವೆನಿಸಿಕೊಳ್ಳುತ್ತದೆ. ಇದಕ್ಕೆ ತಾತ್ಪರ್ಯ ಸಂಗ್ರಾಹಕ ಶ್ಲೋಕಗಳು ವೀರಶೈವಾಮೃತ ಪುರಾಣದಲ್ಲಿವೆ. ಗುರುವನ್ನು ಸೇರಿದವನೇ ದಾಸ. ತನ್ನ ಗುರುವಲ್ಲದೆ ಬೇರೆ ಗುರುವನ್ನು ಪರಿಗಣಿಸಬಾರದು. ಗುರುವನ್ನು ಸೇರಿದವರಲ್ಲಿ ಕುಲವನ್ನೆಣಿಸಬಾರದು.

ಭೃತ್ಯನಾದವನು ತನ್ನ ದೇಹವನ್ನು ಚರಲಿಂಗಕ್ಕಿತ್ತು ವೀರಭೃತ್ಯನೆನಿಸಿಕೊಳ್ಳುವನು. ಗೃಹಾಭರಣ ಪಶುಪುತ್ರ ದಾರಾದಿಗಳನ್ನು ಜಂಗಮಕ್ಕೆ ಇತ್ತವನು ಸಮಯಿ ಎನ್ನಿಸಿಕೊಳ್ಳುವನು. ಮೋಹಕ್ಕೆ ಮೈಗೊಡದವನು ಸಜ್ಜನರಲ್ಲಿ ಸಕಲಾವಸ್ಥನೆನಿಸಿಕೊಳ್ಳುವನು. ಈರೀತಿ ಷಡ್ವಿಧದ ಸಜ್ಜನಿಕೆಯನ್ನು ತಿಳಿದು ಶಿವಶಾಸ್ತ್ರ ರೀತಿಯಲ್ಲಿ ಆಚರಿಸಬೇಕು.

ಶಿವಭಕ್ತರಲ್ಲಿ ಹೆಣ್ಣನ್ನು ತರಲು ಮತ್ತು ಕೊಡಲು ಕುಲವನ್ನು ನೋಡಬಾರದು. ಚರ್ಮಪಾತ್ರೆಯಲ್ಲಿ ಘೃತ ತೈಲ ಜಲವಿದ್ದರೂ ಅವನ್ನು ಸವಿಯಬಾರದು. ಕಾಲ ಕಾಲದಲ್ಲಿ ಲಿಂಗವನ್ನು ಪೂಜಿಸದೆ ಭೋಜನವನ್ನು ಮಾಡಕೂಡದು. ಶಿವನನ್ನು ಬಿಟ್ಟು ಬೇರೆ ದೇವರನ್ನು ಭಜಿಸಬಾರದು ಎಂದು ವೀರಭದ್ರೀಯವು ಸಾರುತ್ತದೆ.

ಮುಕ್ತಿಯನ್ನು ವರಿಸಬೇಕಾದರೆ ಕಾಮವಿರಬೇಕು; ದುರ್ನಾಮಕಾಧರ್ಮದಲ್ಲಿ ಕ್ರೋಧವಿರಬೇಕು; ಶಿವನ ಪೂಜೆಯಲ್ಲಿ ಲೋಭವಿರಬೇಕು; ಶಿವಾಗಮದಲ್ಲಿ ವ್ಯಾಮೋಹವಿರಬೇಕು; ದುರ್ವಾದಿವರ್ಗದಲ್ಲಿ ಭೂಮಮದವಿರಬೇಕು; ತನ್ನ ವಂಚಿಸುವ ಯುವತಿ ಹೇಮಭವನಾರಾಮಗಳಲ್ಲಿ ಮತ್ಸರವಿರಬೇಕು. ಇವೇ ಧರ್ಮ ಷಡ್ವರ್ಗ.

ತಿಥಿವಾರ ನಕ್ಷತ್ರ ದೋಷಗಳನ್ನು ಪರಿಗಣಿಸದೆ ಮೃತಸೂತಕಾದಿಗಳನ್ನು ಎಣಿಸದೆ ತನ್ನ ತಂದೆತಾಯಿ ಮುಂತಾದವರನ್ನು ಅನ್ಯಾಧ್ವದಲ್ಲಿ ಚರಿಸಲು ಅವರನ್ನು ಬಿಡುವುದೇ ಲಿಂಗಾಚಾರ. ಆಗಮತತಿಯಲ್ಲಿ ಹೇಳಿರುವುದನ್ನು ಪುರಾತನದಿಂದ ಉಕ್ತವಾದುದನ್ನೂ ನಂಬಿ ನಡೆಯುವುದೇ ಸದಾಚಾರ. ಚರಲಿಂಗದಲ್ಲಿ ಆಳಾಗಿ ನಡೆಯುವುದೇ ಭೃತ್ಯಾಚಾರ. ಮರ ಮಣ್ಣು ಕಲ್ಲು ಲೋಹಗಳಲ್ಲಿ ವಿರಚಿಸಿದ ಲಿಂಗಗಳಲ್ಲಿ ಹರರೂಪ ವಿರುವಂತೆ ಲಿಂಗವನ್ನು ಧರಿಸಿದವನು ಯಾವಕುಲದವನೇ ಆಗಲಿ ಅವನೇ ಶಿವ ಎಂಬ ಬುದ್ಧಿಯಿಂದ ನಡೆಯುವುದೇ ಶಿವಾಚಾರ.

ಶಿವನಿಮಿತ್ತವಾಗಿ ದುಷ್ಕರ್ಮವಮಾಡಿರಲಿ ಅಥವಾ ಶಿವಕರ್ಮವನ್ನುಳಿದು ಅನ್ಯವಿಷಯದಲ್ಲಿ ಶಿವಕರ್ಮವನ್ನು ಮಾಡಿರಲಿ ಸಜ್ಜನನಾದವನು ಶಿವಪದದ್ರೋಹಿ

ಯಾದವನನ್ನು ಕಂಡಕೂಡಲೆ ಸಂಹರಿಸಿ ಶಿವಭಕ್ತರಿಗೆ ಮತಿಹೋವಂವನ್ನು ಆಚರಿಸು ವುದೇ ಗಣಾಚಾರ. ಇವೇ ಪಂಚಾಚಾರಗಳು. ಪೂರ್ವದಲ್ಲಿ ಈ ಆಚಾರಗಳನ್ನು ಮಾಡಿ ಶರಣರು ಶಂಕರನ ಪಾದವನ್ನು ಸೇರಿದರು. ಗುರುವೇ ಶಂಭು ಎಂದು ಭಾವಿಸುವ ಬುದ್ಧಿ ಗುರುವ್ರತ. ಗುರುವು ಮುದದಿಂದ ಕೊಟ್ಟ ಲಿಂಗವೆ ಮಹಾದೇವ ನೆಂದು ಭೇದವಿಲ್ಲದೆ ಭಾವಿಸುವುದೇ ಲಿಂಗವ್ರತ. ಮಹಾಚರಲಿಂಗ ಭುಕ್ತೋಪ ಭೋಗ್ಯಭೋಗವನ್ನು ಸ್ವೀಕರಿಸುವುದೇ ಆಚಾರವ್ರತ. ಶೇಷಮಂತ್ರಷನ್ನು ಶಿವನಿಗೆ ಅರ್ಪಿಸಿಕೊಳ್ಳುವುದೇ ಸುಪ್ರಸಾದವ್ರತ. ಷಟ್ಸ್ಥಲಬ್ರಹ್ಮಿಗಳ ಪಾದೋದಕವನ್ನು ಇಷ್ಟಲಿಂಗಕ್ಕೆ ಅಭಿಷೇಕಮಾಡಿ ಶಿರದಲ್ಲಿ ಪ್ರೋಕ್ಷಿಸಿಕೊಳ್ಳುವುದೇ ಪಾದೋದಕವ್ರತ. ಶಾಂತಿ ಮೊದಲಾದ ಸಂಪತ್ತಿಯಿಂದ ಭಜಿಸುವುದು ಭಾಕ್ತಿಕವ್ರತ.

ಈ ಷಡ್ವಿಧ ವ್ರತಗಳನ್ನು ವೀರಶೈವರು ಸದಾ ಅನುಷ್ಠೆಮಾಡಬೇಕು, ಅಂತ್ಯಜರು ಕೊಟ್ಟ ದಾನ, ತಾಮ್ರದ ಪಾತ್ರೆಯಲ್ಲಿನ ಗೋವಿನಹಾಲು, ಕಂಚಿನ ಪಾತ್ರೆ ಯಲ್ಲಿನ ತೆಂಗಿನ ನೀರು, ಅಗಸರ ಕೆರೆಯನೀರು, ತೊಗಲ ಚೀಲದಲ್ಲಿನ ಚೂರ್ಣ. ನೀಚ ಮೃಗ ಬಿಡಾಲ ಅರುಣ ಶಿಖಾಶ್ವಾಸಗಳ ಮೈಗೆ ತಗುಲಿದ್ದ ಹಸಿಯ ವಸ್ತುಗಳನ್ನು ಬಿಡಬೇಕು. ಇವು ಬಾಹ್ಯಭವಿವರ್ಗವಾಗುತ್ತವೆ. ಅಂತರದ ಭವಿಗಳು ಯಾರು ಎಂದರೆ : ಅನ್ಯನಾರಿಯರಲ್ಲಿ ಕಾಮಾಸಕ್ತನಾಗುವುದು. ತನ್ನವರು ಹೇಳಿದುದನ್ನು ಮಾಡದೆ ಕೋಪಿಸಿಕೊಳ್ಳುವುದು, ಸತ್ಪಾತ್ರರಿಗೆ ಕೊಡದಿರುವ ಲೋಭ, ಕೀಳುವಿಷಯ ಗಳಲ್ಲಿ ಮೋಹಗೊಳ್ಳುವುದು, ನರರಲ್ಲಿ ತನಗೆ ಯಾರೂ ಸರಿಯಿಲ್ಲವೆಂಬ ಮದ, ಕೇಳದೇ ಹೋದ ಶಿವಭಕ್ತರಲ್ಲಿ ಮತ್ಸರ ಇವೇ ಆರು ಅಂತರದ ಭವಿಗಳು. ಇವಕ್ಕಿಂತ ಘನತರವಾದ ಪಾಪ ಮತ್ತೊಂದಿದೆ. ಎಲ್ಲಾಕಾಲದಲ್ಲೂ ಹಿತವಾಗಿರುವ ಸಂತೋಷವನ್ನು ಹುಟ್ಟಿಸುವ ವಾಕ್ಯಗಳನ್ನೇ ಹೇಳುವುದು; ಹಿತವಾದರೂ ಪ್ರಿಯವನ್ನು ಬಿಟ್ಟಿರುವುದನ್ನು ಹೇಳ ದಿರುವುದು; ಕೂರ್ಮೆಯನ್ನು ಪಡೆಯಬಹುದಾದರೂ ಅದನ್ನು ಉಸುರದೆ ಅಸತ್ಯ ವಾಗಿರುವುದು. ಇದರಿಂದ ವಸುಧೆಯಲ್ಲಿ "ನಾನೃತಾತ್ಪಾತಕಂ ಪರಂ" ಎಂದು ಶಾಸ್ತ್ರ ಗಳಲ್ಲಿ ಹೇಳಿದೆ.

ತಪಸಿಗಳೆಲ್ಲ ಒಂದೇ ಠಾವಿನಲ್ಲಿ ಕೂಡಲು ಬಲ್ಲವರು. ಸಕಲ ಪಾಪಗಳನ್ನು ಹಿಡಿದು ತಕ್ಕಡಿಯಲ್ಲಿ ತೂಗುವ ಸಮಯದಲ್ಲಿ ಅನೃತವು ಒಂದುಕಡೆಯ ತಕ್ಕಡಿಗೆ ಬರಲು ಉಳ್ಳ ಪಾಪಗಳೊಂದೊಂದನ್ನು ಒಡಿದಿಡಲು ಎಲ್ಲ ಪಾಪಗಳು ಒಟ್ಟಾದರೂ ಅನೃತದ ಭಾರವೇ ಹೆಚ್ಚಾಯಿತು—ಇದೇನಾಶ್ಚರ್ಯ ? ಸಟೆಯನ್ನು ಬಿಟ್ಟರೆ ಭೂತವರ್ತಮಾನ ಭವಿಷ್ಯತ್ಕಾಲದ ಶುಭಗಳಾಗುತ್ತವೆ. ವರ್ತಮಾನದ ಅಗಮ್ಯವಾದ ಸಂಪತ್ತು ಲಭಿಸು ತ್ತದೆ. ಸಟೆಯನ್ನು ಬಿಟ್ಟರೆ ಪಾಪನಿವಾರಣೆಯೂ ಪುಣ್ಯಸಂಪಾದನೆಯೂ ಆಗುವುದು. ಸಟೆಯನ್ನು ಬಿಟ್ಟರೆ ಶಿವನ ಕಟಾಕ್ಷ ದೊರಕೊಳ್ಳುವುದು.

ಅರವತ್ತನಾಲ್ಕು ಶೀಲಗಳ ವಿವರಣೆ: ಶಾಸ್ತ್ರದಲ್ಲಿ ಹೇಳಿರುವಂತೆ ನಡೆದು

ಕೊಳ್ಳುವುದಂ ಒಂದನೆಯ ಶೀಲ. ಹೆಂಡತಿಗೆ ತನ್ನ ಶೀಲವನ್ನು ನಡೆಸುವಂತೆ ಹೇಳು ವುದು ಎರಡನೆಯದು. ಆಕೆಯ ರಜಸ್ಸೂತಕಾದಿಗಳನ್ನು ಕಳೆಯುವುದಂ ಮೂರನೆಯದು. ಕರ್ಮವನ್ನು ಬಿಟ್ಟಿರುವುದು ನಾಲ್ಕನೆಯಶೀಲ. ಗರ್ಭಸಂಸ್ಕಾರವನ್ನು ಮಾಡುವುದು ಐದನೆಯ ಶೀಲ. ಚರಪ್ರಸಾದವನ್ನು ಲಿಂಗಕ್ಕೆ ಕೊಡುವುದು ಆರನೆಯ ಶೀಲ. ಜಂಗಮವೇ ಶಿವನೆಂದು ಭಾವಿಸುವುದು ಏಳನೆಯ ಶೀಲ. ವ್ರತೋಪಾಂಗವಾದ ಭಾಂಡಕ್ಕೆ ವಸ್ತ್ರವೇಷ್ಟನಮಾಡುವುದು ಎಂಟನೆಯದು. ಎಮ್ಮೆಯ ಹಾಲನ್ನು ತ್ಯಜಿಸು ವುದು ಒಂಬತ್ತನೆಯದು. ಲಿಂಗವಂತನಿಂದಲೇ ಕ್ಷೌರಮಾಡಿಸಿಕೊಳ್ಳುವುದು ಹತ್ತನೆಯ ಶೀಲ. ಲಿಂಗಮುದ್ರೆಯ ಹಸುವಿನಿಂದ ಕರುವಿಗೆ ಹಾಲನ್ನು ಬಿಟ್ಟು ಕರೆದುಕೊಳ್ಳುವುದು ಹನ್ನೊಂದನೆಯ ಶೀಲ. ಆ ಹಸುವನ್ನು ಭವಿಗಳಿಂದ ಕಾಪಾಡಿ ರಕ್ಷಿಸುವುದೇ ಹನ್ನೆರಡ ನೆಯ ಶೀಲ. ಸಪ್ಪೆಯ ಆಹಾರವನ್ನು ಕೊಳ್ಳುವುದಂ ಹದಿಮೂರನೆಯ ಶೀಲ. ಗೋಪತಿಯ ಮುದ್ರೆಯನ್ನು ಹೊಂದಿರುವ ಹಸುವಿನ ಸಗಣಿಯನ್ನು ಪರಿಶುದ್ಧವಾಗಿ ತಂದು ಲೇಪಿಸುವುದು ಹದಿನಾಲ್ಕನೆಯ ಶೀಲ. ಲಿಂಗಮುದ್ರೆಯ ಆಕಾರವನ್ನು ಹೊಂದಿದ ಭಾಂಡವನ್ನು ಗ್ರಹಿಸಿ ಶಿವಧರ್ಮದಲ್ಲಿ ತೊಡಗುವುದು ಹದಿನೈದನೆಯ ಶೀಲ. ತೊಗಲಿನ ಕಿವಿಯನ್ನು ಬಿಟ್ಟ ರಾಟೆಯ ನೂಲಿನಿಂದ ವಸ್ತ್ರವನ್ನು ಮಾಡಿಸಿ ಹೊದ್ದುಕೊಳ್ಳುವುದಂ ಹದಿನಾರನೆಯ ಶೀಲ. ಆ ವಸ್ತ್ರವನ್ನು ಚಿಲುಮೆಯ ನೀರಿನಿಂದ ತೊಳೆದು ಕೈಕೊಳ್ಳುವುದೇ ಹದಿನೇಳನೆಯ ಶೀಲ. ಮರದ ಪಾದರಕ್ಷೆ (ಪಾವುಗೆ) ಯನ್ನು ಮೆಟ್ಟುವುದು ಹದಿನೆಂಟನೆಯ ಶೀಲ. ಪರ್ಣಶಾಲೆ (ಉಟಜ)ಗೆ ಭವಿದೃಷ್ಟಿ ಬೀಳದಂತೆ ಬೇಲಿಯನ್ನು ಹಾಕಿಸುವುದು ಹತ್ತೊಂಬತ್ತನೆಯ ಶೀಲ. ಭೂಮಿಗೆ ಶಿವನ ಅಂಕಿತದ ಕಲ್ಲುಗಳನ್ನು ನಾಲ್ಕುದಿಕ್ಕುಗಳಲ್ಲು ನಿಲ್ಲಿಸುವುದು ಇಪ್ಪತ್ತನೆಯ ಶೀಲ. ಏಣಿಯನ್ನು ಕಟ್ಟದ ಲಿಂಗಮುದ್ರೆಯ ಎತ್ತುಗಳಿಂದ ಆಯಾಸಪಡದೆ ಬೆಳೆಯನ್ನು ಪಡೆಯುವುದು ಇಪ್ಪತ್ತೊಂದನೆಯ ಶೀಲ. ಜಂಗಮರಲ್ಲಿ ದೋಷವನ್ನು ಹುಡುಕ ದಿರುವುದು ಇಪ್ಪತ್ತೆರಡನೆಯ ಶೀಲ. ಪರಶಿವನನ್ನು ಆದರಿಸದವನ ಸಂಬಂಧವನ್ನು ಪರಿಗಣಿಸದಿರುವದು ಇಪ್ಪತ್ತಮೂರನೆಯ ಶೀಲ. ಅನ್ಯದೈವದ ನುತಿಸುವುದನ್ನು ಕೇಳದಿರುವುದು ಇಪ್ಪತ್ತನಾಲ್ಕನೆಯ ಶೀಲ. ಶಿವಭಕ್ತರೇ ಶ್ರೇಷ್ಠ ಈಶನೇ ಪರದೈವ ಶಿವಮಂತ್ರವೇ ಮಂತ್ರಗಳೊಳಗೆ ರಾಜ ಎಂಬುದು ಇಪ್ಪತ್ತೈದನೆಯ ಶೀಲ. ಜಾತಿ ಸೂತಕ ಜನನಸೂತಕ ಶವಸೂತಕಗಳನ್ನು ಬಿಡುವುದೇ ಇಪ್ಪತ್ತಾರನೆಯ ಶೀಲ. ಪರಧನ ಪರಾಂಗನೆಯರನ್ನು ಬಯಸದಿರುವುದೇ ಇಪ್ಪತ್ತೇಳನೆಯ ಶೀಲ. ಈಶನನ್ನು ಬೇಡದಿರುವುದು ಇಪ್ಪತ್ತೆಂಟನೆಯ ಶೀಲ. ಭಕ್ತರಲ್ಲಿ ಕುಲವನ್ನು ಎಣಿಸದಿರುವುದೇ ಇಪ್ಪತ್ತೊಂಬತ್ತನೆಯ ಶೀಲ. ಆ ಭಕ್ತರಲ್ಲಿ ಅರಿವನ್ನು ಅರಸದೆ ವರ್ತಿಸುವುದಂ ಮೂವತ್ತನೆಯ ಶೀಲ. ಆ ಭಕ್ತರಲ್ಲಿ ಬೆರೆತು ತರ್ಕಿಸದಿರುವುದು ಮೂವತ್ತೊಂದ ನೆಯ ಶೀಲ. ನಾಯಿ ಕೋಳಿ ಹಂದಿ ಇಲಿ ಭುಗ್ವರ್ಗವನ್ನು ತನ್ನ ನೆಲದಲ್ಲಿ ಸೇರಿಸ ದಿರುವುದು ಮೂವತ್ತೆರಡನೆಯ ಶೀಲ. ಕಾಡುತ್ತಿರುವ ರೋಗಗಳಿಗೆ ಔಷಧಿಯನ್ನು

ತೆಗೆದುಕೊಳ್ಳದಿರುವ ಪ್ರೌಢಿಯೇ ಮೂವತ್ತಮೂರನೆಯ ಶೀಲ.

ತಿಥಿವಾರಗಳನ್ನು ಪರಿಗಣಿಸದಿರುವುದೇ ಮೂವತ್ತುನಾಲ್ಕನೆಯ ಶೀಲ. ಭವಿಯ ಜೊತೆ ನೆರಮನೆಯಲ್ಲಿರದಿರುವುದೇ ಮೂವತ್ತೈದನೆಯ ಶೀಲ. ಶಿವರಾತ್ರಿಯೇ ಮೊದಲಾದ ಶಂಭುವ್ರತಗಳಂದು ಉಪವಾಸವನ್ನು ಮಾಡದಿಹುದೇ ಮೂವತ್ತಾರನೆಯ ಶೀಲ. ಗುರು ಲಿಂಗ ಜಂಗಮರಲ್ಲಿ ಕಪಟವಿಲ್ಲದಿರುವುದೇ ಮೂವತ್ತೇಳನೆಯ ಶೀಲ. ತೀರ್ಥಯಾತ್ರೆಗಳಿಗೆ ಚಪಲನಾಗದಿರುವುದು ಮೂವತ್ತೆಂಟನೆಯ ಶೀಲ. ಉಪದೇಶ ವನ್ನು ಯಾರಿಗೂ ಕೊಡದಿರುವುದೇ ಮೂವತ್ತೊಂಬತ್ತನೆಯ ಶೀಲ. ಚರಲಿಂಗದಲ್ಲಿ ವಕ್ರಭಾವನೆಯಿಂದ ನಡೆಯದಿರುವುದು ನಲವತ್ತನೆಯ ಶೀಲ. ಸೇವೆಮಾಡುವವ ರಲ್ಲಿಯೂ ಪರದೇಶಿ ಜಂಗಮದಲ್ಲಿಯೂ ಭೇದವನ್ನು ಮಾಡದಿರುವುದೇ ನಲವತ್ತೊಂದ ನೆಯ ಶೀಲ. ಬಲವಾದ ಆಸೆಯನ್ನು ಬಿಟ್ಟುಬಿಡುವುದೇ ನಲವತ್ತೆರಡನೆಯ ಶೀಲ. ಆಚಾರವೇ ಪ್ರಾಣ. ಪ್ರಾಣವೇ ಜಂಗಮ ಎಂದು ಭಾವಿಸುವುದು ನಲವತ್ತಮೂರನೆಯ ಶೀಲ. ಕಾಲ ವಿಪರೀತದಿಂದ ದಣಿಯದಿರುವುದೇ ನಲವತ್ತನಾಲ್ಕನೆಯ ಶೀಲ. ಪರಿಚಿತರ ಬಗ್ಗೆ ಕೆಟ್ಟಮಾತಾಡದಿರುವುದು ನಲವತ್ತೈದನೆಯ ಶೀಲ. ಬೇರೆಯವರು ಆಡುವ ಬಿರುನುಡಿಗಳನ್ನು ಕೇಳದಿರುವುದು ನಲವತ್ತಾರನೆಯ ಶೀಲ. ಪರದೈವಗಳನ್ನು ಕನಸಿನಲ್ಲಾದರೂ ನೆನೆಯದಿರುವುದೇ ನಲವತ್ತೇಳನೆಯ ಶೀಲ. ಸೂರ್ಯಚಂದ್ರರ ಬೆಳಕಿನಲ್ಲಿ ಚೆನ್ನಾಗಿ ಚರಿಸದಿರುವುದೇ ನಲವತ್ತೆಂಟನೆಯ ಶೀಲ. ಶೀಲದ ಎಲ್ಲೆಯನ್ನು ದಾಟದಿರುವುದು ನಲವತ್ತೊಂಬತ್ತನೆಯ ಶೀಲ. ಅತ್ಯಗತ್ಯವಾಗಿರುವ ಕೆಲಸಗಳಿಗಾಗಿ ಗಾಡಿಹತ್ತಿ ಪ್ರಯಾಣಮಾಡುವುದು ಐವತ್ತನೆಯ ಶೀಲ. ದಶವಾಯುಗಳ ನಿಗ್ರಹಿಸುವುದು ಐವತ್ತೊಂದನೆಯ ಶೀಲ. ಕಾಮವೇ ಮೊದಲಾದ ವೈರಿಗಳನ್ನು ವಶಮಾಡಿಕೊಳ್ಳು ವುದು ಐವತ್ತೆರಡನೆಯ ಶೀಲ. ಸುವಾಸನೆಯ ವಸ್ತುಗಳಿಗೆ ಮನಸೋಲದಿರುವುದು ಐವತ್ತಮೂರನೆಯ ಶೀಲ. ಶಿವಸಂಬಂಧವಾದ ವಸ್ತುಗಳನ್ನು ಬಿಟ್ಟು ಚಿನ್ನವೇ ಮೊದಲಾದ ಆಭರಣಗಳನ್ನು ಧರಿಸದಿರುವುದು ಐವತ್ತನಾಲ್ಕನೆಯ ಶೀಲ. ಶರಣನೇ ಲಿಂಗ ಲಿಂಗವೇ ಶರಣ ಎಂದು ತಿಳಿಯುವುದು ಐವತ್ತೈದನೆಯ ಶೀಲ. ದಶವಿಧ ಪಾದೋದಕ ಏಕಾದಶ ಪ್ರಸಾದವನ್ನು ಅರಿಯುವುದು ಐವತ್ತಾರನೆಯ ಶೀಲ. ಹರನ ಚತುರ್ವಿಧ ಪುರುಷಾರ್ಥಗಳನ್ನು ಬಿಟ್ಟಿರುವುದು ಐವತ್ತೇಳನೆಯ ಶೀಲ. ಪಂಚೇಂದ್ರಿಯಗಳಲ್ಲಿ ಲಿಂಗೋಪಭೋಗವನ್ನು ಮಾಡುವುದು ಐವತ್ತೆಂಟನೆಯ ಶೀಲ. ದೃಢಚಿತ್ತದಿಂದ ಷಟ್ಸ್ಥಲಗಳನ್ನು ಆಚರಿಸುವುದು ಐವತ್ತೊಂಬತ್ತನೆಯ ಶೀಲ. ಅನುರಾಗದಿಂದ ಬಂದುದು ಅಂಗಭೋಗ. ತನ್ನಿಂದ ಬಂದುದು ಲಿಂಗಭೋಗ. ಇವು ಗಳಲ್ಲಿ ಭೇದಭಾವವನ್ನು ಎಣಿಸದಿರುವುದೇ ಅರವತ್ತನೆಯ ಶೀಲ. ಪಂಚಜ್ಞಾನ ವಿವರವನ್ನು ಅರಿಯುವುದು ಅರವತ್ತೊಂದನೆಯ ಶೀಲ. ಉದಯಾಸ್ತಮಾನಗಳ ಕಾಲಗಣನೆಯನ್ನು ಮಾಡದಿರುವುದು ಅರವತ್ತೆರಡನೆಯ ಶೀಲ. ಪಂಚೇಂದ್ರಿಯಗಳ

ಅರಿವಿನಿಂದ ಪ್ರಕಾಶಿಸುತ್ತ ಪಂಚವಿಷಯಗಳನ್ನು ಅವುಗಳಲ್ಲಿ ಸಮೀಕರಿಸಿ ಪಂಚಲಿಂಗ ಗಳಿಗೆ ಅವನ್ನು ಸಮರ್ಪಿಸಿ ಸ್ವೀಕರಿಸುವುದೆ ಅರವತ್ತಮೂರನೆಯ ಶೀಲ. ಮಹದೇವನ ಪರವಾದ ಜಪತಪಧ್ಯಾನಗಳ ಬಾಧೆಗಳಿಗೆ ಒಳಗಾಗದೆ ಶಿವನೇ ತಾನು ಎಂದು ಅರಿತು ಮೂದೇವರ ಒಡೆಯನಾಗಿರುವುದೇ ಅರವತ್ತನಾಲ್ಕನೆಯ ಶೀಲ.

ಈ ಸದಾಚಾರದಲ್ಲಿ ಶಿವನ ಸಾಯುಜ್ಯವನ್ನು ಪಡೆದವರು ಉತ್ತಮೋತ್ತಮರು. ಸಾರೂಪ್ಯವನ್ನು ಪಡೆದವರು ಉತ್ತಮರು. ಸಾಮೀಪ್ಯವನ್ನು ಪಡೆದವರು ಮಧ್ಯಮ ದವರು. ಸಾಲೋಕ್ಯವನ್ನು ಪಡೆದವರು ಅಧಮರು ಎಂದು ಪರಿಭಾವಿಸಬೇಕು. ಹರ ಲೋಕದಲ್ಲಿ ಪೂಜೆಗೊಂಬ ಶರಣರು ಉತ್ತಮರು. ಬ್ರಹ್ಮಲೋಕದಲ್ಲಿ ಪೂಜೆಯನ್ನು ಪಡೆಯುವವರು ಮಧ್ಯಮರು. ಇಂದ್ರಲೋಕದಲ್ಲಿ ಪೂಜೆಯನ್ನು ಹೊಂದುವವರು ಶರಣರಲ್ಲಿ ಅಧಮರು. ಯಕ್ಷ ಗಂಧರ್ವ ಕಿನ್ನರಾದಿ ಲೋಕಗಳಲ್ಲಿ ಪೂಜೆಗೊಳ್ಳುವವರು ಅಧಮಾಧಮರೆಂದು ಪಾಲ್ಕುರಿಕೆ ಸೋಮೇಶ ಹೇಳಿದನು.

ಈರೀತಿ ಆಚಾರವನ್ನು ನಡೆಸಿದರೆ ಪರ್ವತನಂದನನಿಗೆ ಅತ್ಯಂತ ಪ್ರೀತಿಯುಂಟಾಗು ವುದು. ಪರಂಜ್ಯೋತಿಯಾದ ಮಲ್ಲಿಕಾರ್ಜುನಲಿಂಗಕ್ಕೆ ಅತ್ಯಂತ ಸಂತೋಷಕರ. ಇವರ ದೀಪಪ್ರಕಾಶದಿಂದ ಪಾಪಗಳೆಂಬ ಗಾಢಾಂಧಕಾರ ನಿವಾರಣೆಯಾಗುವುದು. ಸಂಸಾರದ ತಾಪ ಬಳಿಸಾರುವುದಿಲ್ಲ. ಆದುದರಿಂದ ಆಚಾರವೇ ಮುಖ್ಯವಾದಧರ್ಮ. ಈ ಆಚಾರ ವಂತನಿಗೆ ಜನ ರಾಜನಿಗೆ ನಮಸ್ಕರಿಸುವಂತೆ ನಮಸ್ಕರಿಸುವರು. ಆಚಾರವಂತನನ್ನು ಕೂಡಿದವರು ಅಖಿಲ ದುರ್ದೋಷದಿಂದ ಮುಕ್ತರಾಗುವರು. ಆಚಾರವು ತಾಯಿಯ ರೀತಿಯಲ್ಲಿ ಕಾಪಾಡುವುದು. ಇದು ಸ್ನೇಹಿತನಂತೆ ಇಷ್ಟವಾದುದನ್ನು ಸೂಚಿಸುತ್ತದೆ. ಆದುದರಿಂದ ಭಕ್ತರಾದವರು ಎಂದೆಂದಿಗೂ ಇದನ್ನು ಬಿಡಬಾರದು.

ಷಟ್ಸ್ಥಲವಿಧಾನವನ್ನು ಪಂಡಿತಾರಾಧ್ಯನು ವಾಮನನಿಗೆ ಬೋಧಿಸಿದ್ದು : ಪರಿಶುದ್ಧವಾದ ಅಂತರಂಗವುಳ್ಳವನು ಧರೆಯೊಳಗೆ ಪಿಂಡ ಎನಿಸಿಕೊಳ್ಳುವನು. ಅವನದೇ ಮೊದಲನೆಯ ಸ್ಥಲ. ದೇಹವು ಯಾವುದು ನಾನು ಯಾರು ಎಂಬ ಭಾವ ಎರಡನೆಯ ಭೂಮಿ. ಬೆರೆದ ಸಂಸಾರದಲ್ಲಿ ಹೇಯತಾ ಬುದ್ಧಿಯೇ ಮೂರನೆಯ ಭೂಮಿ. ಮೋಕ್ಷವನ್ನುಕೊಡುವ ಗುರುವನ್ನು ಆಶ್ರೈಸುವುದೇ ನಾಲ್ಕನೆಯ ಭೂಮಿ. ಲಿಂಗವನ್ನು ಧರಿಸುವುದು ಐದನೆಯದು. ಪಂಚವಿಧ ಭಸ್ಮವನ್ನು ಧರಿಸುವುದು ಆರನೆಯದು. ಪಂಚಾಸ್ಯನ ಅಕ್ಷಗಳನ್ನು ಧರಿಸುವುದು ಏಳನೆಯದು. ಸಪ್ತಕೋಟಿ ಮಂತ್ರಗಳನ್ನು ಪಂಚಾಕ್ಷರಿಯನ್ನು ಜಪಿಸುವುದು ಎಂಟನೆಯ ಸ್ಥಲ. ಪಂಚಾಸ್ಯ ಭಸ್ಮರುದ್ರಾಕ್ಷಿಧಾರಣೆ ಪಂಚಾಕ್ಷರಿಯ ಜಪವಮಾಡುವ ಭಕ್ತನೇ ನವಮಸ್ಥಲ. ಗುರು-ಶಿವ ಇವರಲ್ಲಿ ಭೇದಭಾವವೆಣಿಸದಿರುವುದೇ ದಶಮಸ್ಥಲ. ಗುರು ಶಿವಲಿಂಗ ಜಂಗಮ ರೊಡನೆ ಕೂಡಿರುವುದೇ ಏಕಾದಶಸ್ಥಲ. ಶಿವನ ಪಾದೋದಕವನ್ನು ಕೊಳ್ಳುವಂತೆಯೇ

ಗುರುಜಂಗಮರ ಪಾದೋದಕವನ್ನು ಕೊಳ್ಳುವುದು ದ್ವಾದಶಸ್ಥಲ. ಗುರುಲಿಂಗ ಜಂಗಮಕ್ಕೆ ಕೊಡುವುದೇ ತ್ರಯೋದಶಸ್ಥಲ. ಕಾಮದಲ್ಲಿ ಬೆರೆದವರಿಗೆ ದಾನ ಕೊಡುವುದು ಚತುರ್ದಶಸ್ಥಲ. ಆ ದಾನವು ಭಕ್ತಿಯಿಂದ ಕೂಡಿದ್ದರೆ ಪಂಚದಶಸ್ಥಲ ಎನಿಸಿಕೊಳ್ಳುವುದು. ಈ ಹದಿನೈದು ಸ್ಥಲಗಳಿಂದ ಕೂಡಿರುವ ಭಕ್ತನು ಮಹೇಶ ನಾಗುವನು. ಹೇಗೆಂದರೆ ಬ್ರಹ್ಮಧಾಮವೇ ಮೊದಲಾದ ವಾಂಛೆ ನಾಶವಾಗಲು ಮಹೇಶನಾಗುವನು ಎಂದು ಅಗಸ್ತ್ಯನಿಗೆ ರೇಣುಕನು ಹೇಳಿದನು.

ಭಕ್ತನ ಪ್ರಾಣಕ್ಕೆ ಅಪಾಯ ಒದಗಿದಾಗ ತನ್ನ ಆಚಾರವನ್ನು ಬಿಡದಿರುವುದು ಹದಿನೇಳನೆಯ ಸ್ಥಲ. ಶಿವಾರಾಧನೆಗೆ ವೈರವಾಗುವ ಜಾತಿ ಮೊದಲಾದ ಪೂರ್ವಾಶ್ರಯ ಗುಣಗಳನ್ನು ನೀತಿಗಳೆಯುವುದು ಅಷ್ಟಾದಶಸ್ಥಲ. ವೇದೋಕ್ತವಾಗಿ ಜೀವಪರಮರಿಗೆ ಐಕ್ಯವನ್ನು ಸಾಧಿಸುವುದಕ್ಕಿಂತ ಶಂಭುವಿನಲ್ಲಿ ಪೂಜ್ಯತ್ವವೂ ತನ್ನಲ್ಲಿ ಪೂಜಕತ್ವವೂ ತ್ಯಾಜ್ಯ ವಾಗುವುದರಿಂದ ಉಂಟಾಗುವ ದ್ವೈತ ನಿರಸನವೇ ಯೋಗ್ಯವಾದುದು. ಇದು ಹತ್ತೊಂ ಬತ್ತನೆಯ ಸ್ಥಲ. ಉಳಿದ ಶೈವರಂತೆ ಪವಿತ್ರವಾದ ಈಶ್ವರನ ಕಳೆಯುಳ್ಳ ಶಿವಲಿಂಗದ ಪ್ರಯೋಜನಕ್ಕೆ ಹಾನಿಯುಂಟುಮಾಡದಿರುವುದೇ ಇಪ್ಪತ್ತನೆಯ ಸ್ಥಲ. ಶಿವನ ಅಷ್ಟ ಮೂರ್ತಿಗಳಲ್ಲಿ ಏಕಭಾವವನ್ನು ಸಂಪಾದಿಸದೆ ಪಿನಾಕಿ ಅದರಲ್ಲಿ ಅಧಿಷ್ಠಾತೃವಾಗಿಹ ನೆಂದು ಸ್ವೀಕರಿಸುವುದು ಇಪ್ಪತ್ತೊಂದನೆಯ ಸ್ಥಲ. ಸರ್ವಗತನಾದ ಶಿವನನ್ನು ಲಿಂಗ ಮಾತ್ರದಿಂದ ಪೂಜೆಗೆ ನಿರಾಕರಿಸಿದ ದೆಸೆಯಿಂದ, ಲಿಂಗದಲ್ಲಿ ವಿಶೇಷಾಕಾರವಾಗಿ ಶಿವನು ಇರುತ್ತಾನೆ ಎಂದು ತಿಳಿಯುವುದು ಇಪ್ಪತ್ತೆರಡನೆಯ ಸ್ಥಲ. ಇಷ್ಟಲಿಂಗದಲ್ಲಿರುವ ಶಿವನು ಸಕಲ ಚರಾಚರಗಳಲ್ಲಿ ಮಣಿಗಣದ ಸೂತ್ರದ ರೀತಿಯಲ್ಲಿ ಇರುತ್ತಾನೆ ಎಂದು ತಿಳಿಯುವುದೆ ಇಪ್ಪತ್ತಮೂರನೆಯ ಸ್ಥಲ. ಈಶ್ವರನು ಭಕ್ತರ ಹೃದಯದಲ್ಲಿ ವಿಶಿಷ್ಟ ನಾಗಿರುತ್ತಾನೆ ಎಂಬುದು ಇಪ್ಪತ್ತನಾಲ್ಕನೆಯ ಸ್ಥಲ. ಈ ಒಂಬತ್ತು ಮಾಹೇಶ್ವರ ಸ್ಥಲಗಳು ಎನಿಸಿಕೊಳ್ಳುತ್ತವೆ.

ಶಂಕರನ ಪ್ರಸಾದವನ್ನು ಲಿಂಗನಿಷ್ಠೆಯ ಭಾವದಿಂದ ತಾನು ಅಪ್ರಸಾದಿಯೆಂದು ಮನದಲ್ಲಿ ಭಾವಿಸದೆ ಕೊಳ್ಳುವುದು ಇಪ್ಪತ್ತೈದನೆಯ ಸ್ಥಲ. ಒಳ್ಳೆಯದನ್ನುಂಟು ಮಾಡಲು ಗುರುವೇ ಬೀಜಕಾರಣವೆಂದು ತಿಳಿಯುವುದು ಇಪ್ಪತ್ತಾರನೆಯ ಸ್ಥಲ. ಗುರುವಿಗಿಂತ ಶಿವನೊಬ್ಬನೇ ಜಗತ್ಪೂಜ್ಯನೆಂದು ವಿವಿಧಾಗಮಗಳಿಂದ ಅರಿತಿರುವುದು ಇಪ್ಪತ್ತೇಳನೆಯ ಸ್ಥಲ. ಶಿವನೆ ಜಂಗಮನೆಂದು ತಿಳಿಯುವುದು ಇಪ್ಪತ್ತೆಂಟನೆಯ ಸ್ಥಲ. ಶಿವನನ್ನು ಶಿವಭಕ್ತರಂತೆ ಕಾಣುವುದು ಇಪ್ಪತ್ತೊಂಬತ್ತನೆಯ ಸ್ಥಲ. ಅವನಿಗೆ ಲಿಂಗವೇ ಮೊದಲಾದುವುಗಳ ಮಾಹಾತ್ಮ್ಯ ಬೋಧೆಯಿಂದ ಶಿವನೊಡನೆ ಸಂಬಂಧ ಕಲ್ಪಿಸುವುದು ಮೂವತ್ತನೆಯ ಸ್ಥಲ. ಸದಾಶಿವನನ್ನೇ ಧ್ಯಾನಿಸುತ್ತಿರುವವನಿಗೆ ಕಾಡುವ ಸಂಸಾರತಾಪದ ನಿವೃತ್ತಿ ಶಿವನ ಸುಪ್ರಸಾದದಿಂದ ಎಂದು ಸಾರುವುದೇ ಮೂವತ್ತೊಂದನೆಯ ಸ್ಥಲ. ಸಂಸಾರವೇ ಮೊದಲಾದ ಇವು ಏಳು ಪ್ರಸಾದಿಸ್ಥಲ.

ಹಿಂಸಾದಿ ದೋಷಗಳನ್ನು ಬಿಟ್ಟವನೆ ಭಕ್ತ. ಮುಖ್ಯರಲ್ಲಿ ತೊಡಗಿರುವುದೆ ಕ್ರಿಯಾ ಸಂಬಂಧ; ಈ ಜ್ಞಾನಯುಕ್ತನಾದವನೇ ಪ್ರಾಣಲಿಂಗಿ. ಸಕಲ ತತ್ವಗಳಿಗೂ ಆಕಾರ ವಾದುದೇ ಪ್ರಾಣ. ಸಕಲ ವಿಜ್ಞಾನಗಳಿಗೂ ಮೂಲ ಶಂಭು. ಇವೆರಡಕ್ಕೂ ಭೇದಭಾವ ವೆಣಿಸದೆ ಸಂಬಂಧವುಳ್ಳವನಾಗುವುದೇ ಮೂವತ್ತೆರಡನೆಯ ಸ್ಥಲ. ಅಕಲಂಕವಾದ ಚಿಲ್ಲಿಂಗವನ್ನು ಭಾವಪುಷ್ಪಗಳಿಂದ ಅರ್ಚಿಸುವುದು ಮೂವತ್ತಮೂರನೆಯ ಸ್ಥಲ. ಶಿವನ ತಾದಾತ್ಮ್ಯವು ಚಿತ್ತದಲ್ಲಿ ಮಿಸಂಕದಂತಿರುವುದೇ ಮೂವತ್ತನಾಲ್ಕನೆಯ ಸ್ಥಲ. ಶಿವನ ಸನ್ನಿಧಾನವು ಚಿತ್ತದಲ್ಲಿ ನೆಲಸುವುದು ಮೂವತ್ತೈದನೆಯ ಸ್ಥಲ. ಜ್ಞಾನ ಅಂಡವೆಂದೂ ಜ್ಞೇಯ ಲಿಂಗವೆಂದೂ ಇವುಗಳಲ್ಲಿ ದೃಢವಾದ ಜ್ಞಾನವುಳ್ಳವನು ಸಾಂಗಲಿಂಗಿ. ಇದು ಮೂವತ್ತಾರನೆಯ ಸ್ಥಲ. ಇವು ಐದೂ ಪ್ರಾಣಲಿಂಗಿಸ್ಥಲಗಳು.

ತಾನು ಸತಿ ಶಿವನು ಪತಿ ಎಂಬ ನಿಶ್ಚಯವಾದ ಮನಸ್ಸುಳ್ಳ ಶರಣನೆನಿಸಿ ಕೊಳ್ಳುವುದು ಮೂವತ್ತೇಳನೆಯ ಸ್ಥಲ. ರಾಗಾದಿಗಳು ತಾಮಸಭಾವಗಳು. ಇವನ್ನು ಬಿಡುವುದು ಮೂವತ್ತೆಂಟನೆಯ ಸ್ಥಲ. ವಿಜ್ಞಾನವನ್ನು ಗುರುಮುಖದಿಂದ ಸಂಪಾದಿಸಿ ಭವದ ಬೇನೆಯನ್ನು ಅಡಗಿಸುವುದು ಮೂವತ್ತೊಂಬತ್ತನೆಯ ಸ್ಥಲ.

ಈಶ್ವರನ ಭಾವವನ್ನೂ ಗುರುಭಾವವನ್ನೂ ಜಂಗಮದ ಭಾವವನ್ನೂ ಇವುಗಳಲ್ಲಿ ಆಚರಿಸುವ ರೀತಿಯನ್ನೂ ತಿಳಿಯುವ ಇಚ್ಛೆ ನಲವತ್ತನೆಯ ಸ್ಥಲ. ಈ ನಾಲ್ಕು ಸ್ಥಲಗಳು ಶರಣನಿಗೆ ಸಂಬಂಧಿಸಿದುವು. ಪ್ರಾಣಲಿಂಗವೇ ಮೊದಲಾದ ಯೋಗಗಳಿಂದ ನರವಾಸನೆ (ಮನುಷ್ಯಭಾವ)ಯನ್ನು ನಿವಾರಿಸಿ ಶಿವನ ಐಕ್ಯವನ್ನು ಸಂತೋಷದಿಂದ ಪಡೆಯುವುದೇ ನಲವತ್ತೊಂದನೆಯ ಸ್ಥಲ.

ಈತನು ಯಾವರೀತಿ ಆಚರಿಸಿದರೂ ಪಾತಕಗಳು ಅಂಟದಿರುವ ಯೋಗವು ನಲವತ್ತೆರಡನೆಯ ಸ್ಥಲ. ವಿಶ್ವವೆಲ್ಲವೂ ಶಿವನ ರೂಪಾಗಿ ತೋರಿದರೆ ಅದು ನಲವತ್ತಮೂರನೆಯ ಸ್ಥಲ. ಗುರುವನ್ನೂ ವೃಷಭಕೇತುವನ್ನೂ ಜಂಗಮವನ್ನೂ ಆತ್ಮಸ್ವರೂಪವಾಗಿ ತಿಳಿಯುವುದೇ ನಲವತ್ತನಾಲ್ಕನೆಯ ಸ್ಥಲ. ಈ ನಾಲ್ಕು ಸ್ಥಲಗಳು ಐಕ್ಯನ ಯೋಗದಿಂದ ಆದುವು. ಈ ನಲವತ್ತನಾಲ್ಕು ಅಂಗಸ್ಥಲಗಳೆನಿಸಿ ಕೊಳ್ಳುವುವು. ಭಕ್ತನನ್ನು ಆಶ್ರೈಸಿರ್ದ ನವವಿಧ ಮಹಾಸ್ಥಾನಗಳನ್ನೂ ಲಿಂಗರೂಪ ಗಳನ್ನೂ ಸಮಾಧಾನದಿಂದ ಕೇಳು. ವಿಜ್ಞಾನಮುಖದಿಂದ ಕೊಡುವಂತಹುದು ಯಾವದೆಸೆಯಿಂದ ಮಲತ್ರಯ ನಾಶವಾಗುವುದು ಅದು ದೀಕ್ಷೆ. ಗುರುವೇ ದೀಕ್ಷಾಗುರು. ಅವನು ಬಾಣಸಂಜ್ಞೆಯಿಂದ ಕೂಡಿದ ನಾಲ್ವತ್ತನೆಯ ಮೇದಿನಿ. ಶಿಷ್ಯನ ಉತ್ತರಕ್ಕೆ ತಿಳಿಯುವಂತೆ ಬೋಧಿಸುವುದೇ ನಲವತ್ತಾರನೆಯ ಸ್ಥಲ. ಶಿಷ್ಯನಿಗೆ ಪರಮೇಶ್ವರನ ಸನ್ನಿಧಾನವಾಗುವಂತೆ ಉತ್ತರವನ್ನು ಕೊಡುವುದು ನಲವತ್ತೆಂಟನೆಯ ಸ್ಥಲ. ಈ ಪರಮೇಶ್ವರನೆ ಭವತಾರಕನೆಂದು ಲಿಂಗವನ್ನು ಕೈಗೆ ಕೊಡುವುದು ನಲವತ್ತೊಂಬತ್ತನೆಯ ಸ್ಥಲ. ಕರ್ಮವು ಯಾವಕಡೆ ಅಡಗಿತೊ ಅ

ತೆರದ ಭಾವಾಕಾರವು ಎಲ್ಲಿ ಲಯಿಸುವುದೋ ಅದೇ ಐವತ್ತನೆಯ ಸ್ಥಲ. ಭಾವವನ್ನು ತನ್ನಲ್ಲಿ ಸ್ವೀಕರಿಸಿಕೊಂಡಿರುವ ಜ್ಞಾನವುಳ್ಳವನೆ ಗುಣಾಕರ. ಇದು ಐವತ್ತೊಂದನೆಯ ಸ್ಥಲ. ವಿಕಾರವನ್ನೂ ಅಹಂಕಾರವನ್ನೂ ಬಿಟ್ಟು ನಡೆಯುವುದು ಐವತ್ತೆರಡನೆಯ ಸ್ಥಲ. ತನ್ನ ನಿಜದಿಂದ ಬೇರೆಯಿಲ್ಲ ಎಂಬ ಭಾವನೆಯಿಂದ ಚೆನ್ನಾಗಿ ಆಚರಿಸುವವನು ಐವತ್ತಮೂರನೆಯ ಸ್ಥಲ. ಈ ಒಂಬತ್ತು ಭಕ್ತನ ಲಿಂಗಸ್ಥಲಗಳು. ಪೂಜೆಯೆ ಪನ್ನಗಾಭರಣನಕ್ರಿಯೆ. ಸರ್ವಶಾಸ್ತ್ರಗಳೂ ಇದನ್ನೇ ಹೇಳುತ್ತವೆ ಎನ್ನುವುದು ಐವತ್ತನಾಲ್ಕನೆಯ ಸ್ಥಲ. ಈ ವಿರಾಗಿಯ ಭಾವದ ಆಚಾರ ಯಾವುದೋ ಅದು ಐವತ್ತೈದನೆಯ ಸ್ಥಲ. ಜ್ಞಾನಲಿಂಗಗಳಿಗೆ ಗೋಚರಿಸುವುದೇ ಐವತ್ತಾರನೆಯ ಸ್ಥಲ. ತನುತ್ರಯದಲ್ಲಿ ಅಭಿಮಾನವೆಂಬ ಅಜ್ಞಾನವನ್ನಳಿದ ಯೋಗಿಯ ಶರೀರದ ಲೀಲೆಯೇ ಐವತ್ತೇಳನೆಯ ಸ್ಥಲ. ಯಾವ ಕಾರಣದಿಂದಲೂ ದೇಹದೊಡನೆ ಸಂಬಂಧವನ್ನು ಇಟ್ಟುಕೊಂಡಿರದಿರುವುದೇ ಐವತ್ತೆಂಟನೆಯ ಸ್ಥಲ. ಭಕ್ತರಿಗುಂಟಾದ ಕಂಟಕವನ್ನು ಶಿವನ ಸೇವೆಯಿಂದ ನಿವಾರಿಸುವುದು ಐವತ್ತೊಂಬತ್ತನೆಯ ಸ್ಥಲ. ದೋಷಗಳು ಅಂಟದೆ ಆಚರಣೆಗೆ ತಡೆಯಿಲ್ಲದಿರುವುದು ಅರವತ್ತನೆಯ ಸ್ಥಲ. ಕಳಂಕವಿಲ್ಲದ ಆಶಯ ಭಾವವು ಅರವತ್ತೊಂದನೆಯ ಸ್ಥಲ. ಇವನ್ನು ಅರಿತುಕೊಳ್ಳುವ ಆಚಾರವೆ ಅರವತ್ತೆರಡನೆಯ ಸ್ಥಲ. ಇವು ಒಂಬತ್ತು ಲಿಂಗಸ್ಥಲಗಳು. ತನ್ನ ಅಂಗದರ್ಶನದಿಂದ ಲೋಕವನ್ನು ಕಾಪಾಡುವುದು ಅರವತ್ತಮೂರನೆಯ ಸ್ಥಲ. ಜಗತ್ತನ್ನು ತಾನು ನೋಡಿ ಪವಿತ್ರವನ್ನು ಮಾಡುವುದು ಅರವತ್ತನಾಲ್ಕನೆಯ ಸ್ಥಲ. ಈ ವರಿಷ್ಠನ ಪ್ರೀತಿಯುಕ್ತೇಕ್ಷಣವೆ ಅರವತ್ತೈದನೆಯ ಸ್ಥಲ. ದೇವದೇವನ ಪೂಜೆಗಾಗಿ ಕಾಯಾಭಿಮಾನವನ್ನು ಪುನಃ ಹೊಂದದೆ ಬಿಡುವುದೇ ಅರವತ್ತಾರನೆಯ ಸ್ಥಲ. ಸಕಲ ಕರಣೋಪಭೋಗಗಳನ್ನೂ ಭಾವಗಳನ್ನೂ ಆಯಾ ಮಹೇಶಮುಖಕ್ಕೆ ಕೊಡುವುದು ಅರವತ್ತೇಳನೆಯ ಸ್ಥಲ. ಮಾನಸಿಕ ಮೋದವನ್ನು ಶಿವನಿಗೆ ಅವಧಾನದಿಂದ ಅರ್ಪಿಸುವುದು ಅರವತ್ತೆಂಟನೆಯ ಸ್ಥಲ. ಈ ನಿಧಾನದಲ್ಲಿ ಶೋಭಿಸುವ ಶಿವಯೋಗಿಯಲ್ಲಿ ಮೋಕ್ಷಾರ್ಥಿಯೇ ಶಿಷ್ಯನೆನಿಸಿಕೊಳ್ಳುವನು. ಆ ನೀತಿಪರನೇ ಅರವತ್ತೊಂಬತ್ತನೆಯ ಸ್ಥಲ. ಈತನು ಜಂಗಮಾಂಘ್ರಿಸೇವೆಗೆ ಅನುಕೂಲಮಾಡಿಕೊಡುವ ಇಚ್ಛೆಯುಳ್ಳವನಾಗುವುದೇ ಎಪ್ಪತ್ತನೆಯ ಸ್ಥಲ. ಆ ಗುರುವಿನ ಶುಶ್ರೂಷೆಮಾಡುತ್ತ ಶಾಸ್ತ್ರಗಳಲ್ಲಿ ಪಾರಂಗತನಾಗಿ ಇತರರಿಂದ ಸೇವೆಯನ್ನು ಪಡೆಯುತ್ತ ಗುರುತ್ವವನ್ನು ಹೊಂದುವುದೆ ಎಪ್ಪತ್ತೊಂದನೆಯ ಸ್ಥಲ. ಇವು ಪ್ರಸಾದಿಯ ನವಲಿಂಗಯೋಗಸ್ಥಲಗಳು. ಈ ಸೇವ್ಯನು ಗುರುವಿನಿಂದ ತತ್ವವನ್ನು ತಿಳಿದು ಆತ್ಮನೆನಿಸಿಕೊಂಡು ರಾಜಿಸುವನು. ಅವನೇ ಎಪ್ಪತ್ತೆರಡನೆಯ ಸ್ಥಲ.•

ಕೃರ್ತವಿಗೆ ಶರಣನಿಗೆ ದರ್ಪದ ಅಳಿವೇ ಫಲ. ಆತ್ಮನೆ ಅಂಗ. ಬೋಧೆಯೇ ಹಸ್ತ

---

• ಇಲ್ಲಿಂದ ಮುಂದಕ್ಕೆ ಗ್ರಂಥಪಾತವಾಗಿದೆ. 29ರಿಂದ 50ನೆಯ ಪದ್ಯದವರೆಗೆ.

ಸಾದಾಖ್ಯ. ಮಹಾಶಬ್ದಪೂರ್ವವೇ ಚಿತ್ತು. ಶಕ್ತಿಲಿಂಗವನ್ನು ಮಹಾಪದಪೂರ್ವವಾಗಿ ಕ್ರಮವಾಗಿ ಯೋಜಿಸುವುದು ಪಾತಾಳಮುಖ. ಉತ್ತರೆ ಎನಿಸುವ ಪದದ ಸಮುದಾಯವೇ ಕಲೆ. ಹೃದಯವೇ ಮುಖ. ಪರಿಣಾಮವೇ ಉತ್ತಮದ್ರವ್ಯ. ಓಂಕಾರವೇ ಬೀಜ. ಸಂಖಿತೃಪ್ತಿಯೇ ಕಾಲ. ಸಮರಸಭಕ್ತಿ. ಇವುಗಳಿಂದ ಕರ್ತೃವಿಗೆ ಐಕ್ಯನಿಗೆ ಸುಜ್ಞಾನವೇ ಫಲ. ತಾದಾತ್ಮ್ಯ ಪಡೆಯುವುದೇ ಪರ್ಯಂತಿಮ ಫಲ.

ಈ ಸಕಲ ಸಾಮಗ್ರಿಯನ್ನು ಕೂಡಿದ ಕ್ರಮದಲ್ಲಿ ಗಂಧವನ್ನು ಉಳಿದ ಭೂತಗಳಲ್ಲಿ ಒದಗಿ ಆಯಾ ಪದಾರ್ಥಗಳಲ್ಲಿ ಬೆರಸಲು ಆರಾಗುವುದು ರಸಗಂಧಕ. ಇದರಂತೆಯೇ ರೂಪಗಂಧ ಸ್ಪರ್ಶಗಂಧ ಶಬ್ದಗಂಧ ವೃತ್ತಿಗಂಧಗಳು ಹುಟ್ಟುತ್ತವೆ. ಈರೀತಿ ರಸ ರೂಪ ಸ್ಪರ್ಶ ಶಬ್ದವೃತ್ತಿಯನ್ನು ಪ್ರತ್ಯೇಕವಾಗಿ ಒಂದನ್ನು ಒಂದರಲ್ಲಿ ಬೆರಸಲು ಉತ್ತಮ ಪ್ರಕೃತಿ. ಮೂವತ್ತಾರು ಸಂಖ್ಯೆಯ ಪದಾರ್ಥಗಳು ಆಗುತ್ತದೆ. ಈ ಪ್ರಕಾರದಿಂದ ಭೂತಗಳನ್ನು ಚಾರುಹಸ್ತಗಳನ್ನು ಶಕ್ತಿಷಟ್ಕಗಳನ್ನು ಲಿಂಗಗಳ ಮೇಲೆ ಭಕ್ತ್ಯಾದಿ ಷಟ್ಕಗಳನ್ನು ಮಾಡಲು ಇನ್ನೂರ ಹದಿನಾರು ಭೇದಗಳಾಗುವುವು.

ಆಚಾರಲಿಂಗಕ್ಕೆ ಗಂಧವನ್ನೂ ಗುರುಲಿಂಗಕ್ಕೆ ರಸವನ್ನೂ ಶಿವಲಿಂಗಕ್ಕೆ ರೂಪವನ್ನೂ ಹೊಂದಿಸುವುದು. ಜಂಗಮಲಿಂಗಕ್ಕೆ ಸ್ಪರ್ಶವನ್ನೂ ಪ್ರಾಣಲಿಂಗಕ್ಕೆ ಶಬ್ದವನ್ನೂ ಮಹಾಲಿಂಗಕ್ಕೆ ಸಂಕಲ್ಪವನ್ನೂ ಅರ್ಪಿಸುವುದು. ಈರೀತಿ ಗಂಧದೊಳಗಣ ಗಂಧ ಬೃಂದವನ್ನೂ ರಸವನ್ನೂ ರೂಪವನ್ನೂ ಸ್ಪರ್ಶವನ್ನೂ ಶಬ್ದವನ್ನೂ ಸಂಕಲ್ಪವನ್ನೂ ಬೇರೆ ಬೇರೆ ಆಚಾರಲಿಂಗದಲ್ಲಿರುವ ಗುರುಲಿಂಗ ಶಿವಲಿಂಗಗಳಿಗೆ ಜಂಗಮಲಿಂಗ ಪ್ರಸಾದ ಲಿಂಗ ಆರಕ್ಕೆ ಮಹಾಲಿಂಗಕ್ಕೆ ಅರ್ಪಿಸುವುದು. ಇದರಂತೆ ವಾರಿ ಶುಚಿ ವಾಯು ಪುಷ್ಕರ ಹೃದಯ ಗುಣದ ಒಂದರೊಳಗೆ ಒಂದನ್ನು ಬೆರಸಿ ಗುರುಲಿಂಗ ಶಿವಲಿಂಗ ಜಂಗಮ ಲಿಂಗ ಸಂಪ್ರಸಾದಲಿಂಗ ಮಹಾಲಿಂಗಕ್ಕೆ ಅರ್ಪಿಸುವುದು. ಮೂವತ್ತಾರು ರೀತಿಯಿಂದ ಮಿಶ್ರಾರ್ಪಣವೆನಿಸುವುದು. ದ್ರವ್ಯಗಳ ರೂಪ ಇಷ್ಟಲಿಂಗಕ್ಕೆ ಅರ್ಪಿತ ಪ್ರಾಣ ಹರಮೂರ್ತಿಗೆ ಅರ್ಪಿತ ರುಚಿಭಾವಲಿಂಗಕ್ಕೆ ತೃಪ್ತಿ ಅರ್ಪಿತವಾಗುವುದು. ತನುವನ್ನು ಗುರುವಿಗೂ ಮನವನ್ನು ಲಿಂಗಕ್ಕೂ ಧನವನ್ನು ಜಂಗಮಕ್ಕೂ ಕೊಡಬೇಕು. ಇದರಲ್ಲಿ ಎಳ್ಳಷ್ಟೂ ವಂಚನೆಯನ್ನು ಮಾಡಬಾರದು. ತನುಮನಧನಗಳನ್ನು ಕೊಟ್ಟವನೆ ಭಕ್ತನೆನಿಸುವನು. ಅವನಿಗೆ ಮೇಲಧಿಕಾರದೆಸೆಯಿಂದ ಮಾಹೇಶ್ವರಾದಿ ಪಂಚಸ್ಥಲ ಪ್ರಾಪ್ತವಾಗುತ್ತದೆ.

ಸ್ಪರ್ಶಕಾಲದಲ್ಲಿ ಆಚಾರಲಿಂಗವನ್ನು ಗಂಧ ಸ್ಪರ್ಶಿಸುತ್ತದೆ. ಗುರುಲಿಂಗವನ್ನು ಗಂಧರಸ ಸ್ಪರ್ಶ ವಿಜ್ಞಾನಕಾಲದಲ್ಲಿ ಅಂಟುವುದು. ಗಂಧರೂಪವು ಶಿವಲಿಂಗವನ್ನು ಸ್ಪರ್ಶ ನಿಶ್ಚಯಕಾಲದಲ್ಲಿ ಸೇರುವುದು. ಗಂಧಸ್ಪರ್ಶ ಜಂಗಮಲಿಂಗವನ್ನು ಬಿಡದೆ ಸೇರಿಕೊಳ್ಳುತ್ತದೆ. ಸ್ಪರ್ಶಸುಖಕಾಲದಲ್ಲಿ ಗಂಧಶಬ್ದ ಪ್ರಸಾದಲಿಂಗವನ್ನು ಸೇರಿಕೊಳ್ಳುತ್ತದೆ.

ಸುಖಪರಿಣಾಮಕಾಲದಲ್ಲಿ ಮಹಾಲಿಂಗಭಾಗವನ್ನು ಗಂಧಸಂಕಲ್ಪವು ತಾನಾಗಿ ಸೇರುತ್ತದೆ. ಸುಖತೃಪ್ತಿಕಾಲದಲ್ಲಿ ಅಗ್ನಿವಾಯುಪುಷ್ಕರ ಇವುಗಳ ಆಗಾರದೊಳಗಿರುವ ಪದಾರ್ಥಗಳನ್ನು ಮಿಶ್ರವಾಗಿ ಭಾವಿಸಿ ಗುರುಪ್ರಮುಖಲಿಂಗಗಳಲ್ಲಿ ನಿಯೋಗಿಸುವ ಕಾಲಕ್ಕೆ ಅವಧಾನವೆನ್ನುವರು.

ಅರ್ಪಿತವನ್ನು ಸಾಮಾನ್ಯವಾಗಿ ತಿಳಿದುಕೊಂಡಿದ್ದರೂ ಅದರಲ್ಲಿ ತೋರುವ ನಿತ್ಯಾವಧಾನವನ್ನು ತಿಳಿಯುವದು ಅಸದಳವಾದುದು. ಸಕಲಾವಧಾನಗಳನ್ನು ಬೇರ್ಪಡಿಸಿ ಸಕಲಕರಣಗಳಲ್ಲಿ ಅರ್ಪಿಸುವ ಕಾಲದೊಳಗೆ ಯಾರಿಗೆ ಮನವು ಬಾಹ್ಯ ವಿಷಯುಗಳಲ್ಲಿ ತೋರ್ಪಡುವುದೋ ಅವನಿಗೆ ಅವಧಾನ ಇರುವುದು ಹೇಗೆ ಸಾಧ್ಯ ವಾಗುತ್ತದೆ? ಅವನು ಕಂದರ್ಪರಿಪುವಾದರೂ ಏನು?

ಅವಧಾನವು ಅಳವಟ್ಟಾತನೇ ನಿಜಭಕ್ತ. ಆತನೇ ಮಾಹೇಶ, ಪ್ರಸಾದಿ, ಪ್ರಾಣಲಿಂಗಿ ಶರಣ, ಐಕ್ಯ. ರೇಣುಕವರೇಣ್ಯ ಮುಖ್ಯ ಶಿವಪ್ರಮಥರೊಳಗೆ ಇವನು ಒಬ್ಬನು. ಇದನ್ನು ಬಿಟ್ಟು ಸಕಲ ಜೀವರಾಶಿಗಳಲ್ಲಿ ಇವನೊಬ್ಬನಲ್ಲ.

ಪ್ರಣವದಿಂದ ಪಂಚಭೂತಗಳಾದುವು. ಕೃತಿಕರಣಪಂಚಕ ಜ್ಞಾನಕರಣ ಪಂಚಕ ಇವೆರಡೂ ನಕಾರದಲ್ಲಿ ಜನಿಸಿದುವು. ಪಂಚಾಂತರಂಗಗಳು ಮಕಾರದಿಂದಾದುವು. ಶಿಕಾರದಿಂದ ಜೀವ ಜನಿಸಿದ. ವಕಾರದಿಂದ ದಶವಾಯುಂಗಣವೂ ಯಕಾರದಿಂದ ಗುಣಗಳೂ ಉದಿಸಿದವು. ಇವು ಮೂರು. ಆದರಿಂದ ಮಂತ್ರಮೂರ್ತಿಯೆ ಭಕ್ತನೆಂದರಿಯಬೇಕು.

ಈ ಮಂತ್ರವು ಶಿವದ್ರವ್ಯವಾಚಕವಾಗುತ್ತದೆ. ಇದು ಶಿವನ ಮೂರ್ತಿಯಾಗಂತ್ತದೆ. ಮಹಾದೇವನಿಗೆ ಪಾತಾಳಮುಖದೊಡನೆ ಪಂಚಮುಖಗಳಾದುವು. ಸದ್ಯೋಜಾತಮುಖದಿಂದ ಭೂಮಿಯೂ ವಾಮದೇವದಿಂದ ಜಲವೂ ಅಘೋರದಿಂದ ಅಗ್ನಿಯೂ ತತ್ಪುರುಷದಿಂದ ವಾಯುವೂ ಹುಟ್ಟಿದುವು. ಈಶಾನಮುಖದಿಂದ ಆಕಾಶವೂ ಪಾತಾಲಮುಖದಿಂದ ಆತ್ಮನೂ ಉದಯಿಸಿದವು. ಈ ಪಂಚಭೂತಾಶೇಷರೂಪವನ್ನು ಭಾಗಗಳಾಗಿ ಮಾಡಿ ಪಂಚೀಕರಿಸಿ ಕೂಡಿದರೆ ಪಂಚವಿಂಶತಿತತ್ವ ಉದಯಿಸಿತು. ಈ ಶರೀರವು ಅವರ ಕೂಟದಿಂದಾಯಿತು. ಈಶನು ತನುವಿಗಾದನು. ಭಕ್ತನು ಅಂಡಕ್ಕೆ ಆದನು. ಸಮರಸವಾದ ಜಗತ್ತಿನಲ್ಲಿ ಘ್ರಾಣವೆ ಭೂಮಿಭಾಗ; ನಾಲಿಗೆಯೆ ಜಲ; ನೇತ್ರವೇ ಅಗ್ನಿ, ತ್ವಕ್ಕೇ ವಾಯು, ಗಗನವೆ ಶ್ರೋತ್ರ ಆಗಿರುತ್ತವೆ. ಮನ, ಆತ್ಮಗಳ ವಿಷಯಂಗಳಾದ ಯೋಗವಾಹಕ ಗಂಧ ರಸರೂಪಸುಸ್ಪರ್ಶವಾಗಿ ಅಮಲ ಸಂಕಲ್ಪಗಳೆ ಭೂತಕಾರಣಗಳು. ಈಶನಿಗೆ ಸೂಕ್ಷ್ಮತನು. ಜೀವನಿಗೆ ಸ್ಥೂಲತನು, ಪಂಚಭೂತಗಳು, ಮೇಳೈಸಿದ ಪಾಂಚಭೌತಿಕವು. ಸ್ಥೂಲತನುವಿನಲ್ಲಿ ಕರಣದಶಕ ಚತುಷ್ಟಯ ಅಂತರಂಗ ಸೂಕ್ಷ್ಮತನು ಇದರ ಅಧಿಷ್ಠಾತೃ ದೇವತೆಗಳು.

ತೋಂಟದಾರ್ಯರಿಂದ ರಚಿತವಾದ ಷಟ್ಸ್ಥಲದೀಪಿಕೆಯಲ್ಲಿ ಇದರ ವಿಸ್ತಾರವನ್ನು

ತಿಳಿದುಕೊಳ್ಳುವುದು, ಇದರ ಅರ್ಥವನ್ನು ಚನ್ನಬಸವೇಶ್ವರನು ರಾಜಯೋಗವಚನದಲ್ಲಿ ಹೇಳಿದನು. ಆದುದರಿಂದ ಈ ಕೃತಿಯಲ್ಲಿ ಅದನ್ನು ವಿಸ್ತರಿಸಲಿಲ್ಲ. ಚದುರರು ಅರ್ಪಿತವನ್ನೂ ಅವಧಾನವನ್ನೂ ಆಲಿಸಬೇಕು. ಸಾಮರಸ್ಯವನ್ನು ತಿಳಿದವನೇ ಮಹಾವೀರಶೈವ.

ಇದನ್ನೇ ಇನ್ನೊಂದುರೂಪದಿಂದ ಹೇಳುತ್ತೇನೆ. ಆಚಾರಲಿಂಗ ತ್ರಿವಿಧರೂಪಾಗಿರುವದು. ಸದಾಚಾರ ನಿಯತಾಚಾರ ಗಣಾಚಾರ. ಸನ್ಮಾರ್ಗದಿಂದ ಶರಣರಿಗೆ ಸಂತೋಷವನ್ನುಂಟುಮಾಡುತ್ತ ಶಿವನತ್ತ ಭಕ್ತಿಯನ್ನು ಹುಟ್ಟಿಸುವಂತಹುದೇ ಸದಾಚಾರ. ಪ್ರಾಣಾಂತವಾಗಿ ಹಿಡಿದ ಆಚಾರಕ್ಕೆ ಕೊರತೆಬಾರದಂತೆ ನಡೆಸುವುದೇ ನಿಯತಾಚಾರ. ಈಶನಿಂದಕರನ್ನು ಶಿಕ್ಷಿಸುವುದೇ ಗಣಾಚಾರ. ಗುರುಲಿಂಗ ಮೂರು ವಿಧವಾಗಿರುವುದು. ಅವು ದೀಕ್ಷೆ, ಶಿಕ್ಷೆ, ಸ್ವಾನುಭವ. ಷಡಧ್ವಗಳನ್ನು ಬೆರಸದೆ ಮಾಡುವುದೇ ಹರದೀಕ್ಷೆ. ಜಂಗಮವೆ ಶಿವ ಎಂಬ ಭಾವನೆ ಅಳವಡುವುದೇ ಶಿಕ್ಷೆ. ಪೂರ್ವಸಂಸ್ಕಾರದಿಂದ ತನಗೆ ತಾನೇ ಹರನಲ್ಲಿ ಭಕ್ತಿತೋರುವುದು ಸ್ವಾನುಭವ. ಇಷ್ಟಲಿಂಗ ಪ್ರಾಣಲಿಂಗ ತೃಪ್ತಿಲಿಂಗವೆಂದು ಶಿವಲಿಂಗ ಮೂರುತೆರನಾಗಿದೆ. ದೀಕ್ಷೆಯಿಂದ ಗುರು ಕೊಟ್ಟದ್ದೇ ಇಷ್ಟಲಿಂಗ. ತನುಗುಣದ ಘನವ್ಯಾಪ್ತಿಯನ್ನು ಬಿಟ್ಟು ಚಿತ್ತವು ಶಿವನ ಮೂರಂತಿಯೊಳಿಲ್ಲದಿರುವುದೆ ಪ್ರಾಣಲಿಂಗ. ಶಿವಲಿಂಗದೊಳಗೆ ಅನನ್ಯತೆಯಿಂದಿರುವುದೇ ತೃಪ್ತಿಲಿಂಗ.

ಜಂಗಮಲಿಂಗವು ತ್ರಿವಿಧ: ಸ್ವಯಲಿಂಗ. ಚರಲಿಂಗ, ಪರಲಿಂಗ. ಶಿವಲಾಂಛನವನ್ನು ಧರಿಸಿ ಶಿವನೆ ತಾನೆಂಬ ಭಾವವನ್ನು ತಾಳಿ ಬಾಹ್ಯಕರ್ಮಗಳನ್ನು ಬಿಟ್ಟು ಸದಾನಂದದಿಂದಿರುವವನೆ ಸ್ವಯಂಲಿಂಗವೆನಿಸಿಕೊಳ್ಳುವನು. ಶಿವಲಿಂಗದೊಳಗೆ ಸಕಲೇಂದ್ರಿಯಗಳೂ ಲೀನವಾಗಿ ಅದರಿಂದಾದ ಆನಂದದಿಂದ ಸ್ವೇಚ್ಛೆಯಿಂದ ಚರಿಸುವವನೇ ಚರಲಿಂಗ. ಎಲ್ಲಕ್ಕೂ ಅಧಿಷ್ಠಾತೃವಾಗಿ ತಾನಿರುವುದೇ ಪರಲಿಂಗ. ಪ್ರಸಾದಲಿಂಗ ಮೂರುವಿಧ: ಶುದ್ಧ, ಸಿದ್ಧ. ಪ್ರಸಿದ್ಧ. ಗುರು ಭುಂಜಿಸಿದ ಆಹಾರದ ಒಂದು ಚೂರು ಶುದ್ಧ. ಮಹಾದೇವರಿಗೆ ಅರ್ಪಿಸಿದ ಚೂರು ಸಿದ್ಧ. ಜಂಗಮದ ಭುಕ್ತಶೇಷವೇ ಪ್ರಸಿದ್ಧ.

ಇದಕ್ಕೆ ಮತ್ತೊಂದು ರೀತಿಯ ಅರ್ಥವುಂಟು. ಹಿಂದಿನ ಕಾಮಾದಿಗಳನ್ನು ಬಿಟ್ಟು ಲಿಂಗಾಣತಿಯನ್ನು ಹೊಂದಿರುವುದು ಶುದ್ಧ. ಶಿವಜ್ಞಾನ ಉದಯವಾಗುವುದೇ ಸಿದ್ಧ. ಶಿವನಲ್ಲಿ ಅಹಂಭಾವ ನಿಶ್ಚಲತೆಯೇ ಪ್ರಸಿದ್ಧ. ಮಹಾಲಿಂಗವೃತ್ತಿ ಮೂರು ತೆರನಾಗಿದೆ. ಪಿಂಡಜಸುಲಿಂಗ, ಅಂಡಜಸುಲಿಂಗ, ಚಿದಾಕಾಶಲಿಂಗ. ಆಚಾರಲಿಂಗ ಷಟ್ಕಗಳಲ್ಲಿ ಭಕ್ತಾದಿಷಟ್ಕದ ಒಂದೊಂದರೊಳಗೆ ಆರುವೃತ್ತಿಗಳಿಂದ ಮೂವತ್ತಾರು ಭೇದವಾಗಿವೆ. ಶೈವಾಚಾರ ವರ್ತನೆಯನ್ನೂ ಸತಿಯೇ ಮೊದಲಾದವರ ಮೋಹವನ್ನೂ ಬಿಟ್ಟವನು ವರಾಚಾರಲಿಂಗದ ಮೋಹಿ ಎನಿಸಿಕೊಳ್ಳುವನು.

ಶಿವಾಚಾರಕ್ಕೆ ವಿರುದ್ಧವಾದ ಆಚಾರವನ್ನು ಮಾಡದೆ ಬೇರೆಯಾಗಿರುವವನ ಆಚಾರ ಶಂಕರನ ಲಿಂಗಕ್ಕೆ ಭಕ್ತ. ಅನ್ಯದೇವತೆಗಳ ಭಜನೆಯನ್ನು ಬಿಟ್ಟು ಶಂಕರನನ್ನು ಪೂಜಿಸುವಾತನ ಆಚಾರ ಶಂಕರನ ಲಿಂಗಕ್ಕೆ ಪೂಜಕ. ಸ್ವಾಚಾರವನ್ನು ಪಡೆದವನು ವೀರಶೈವರಲ್ಲಿ ಆಚಾರಲಿಂಗವೀರನೆನಿಸಿಕೊಳ್ಳುವನು. ಶುಚಿ ಅಶುಚಿ ಎಂಬ ಸಂಕಲ್ಪ ವನ್ನು ಬಿಟ್ಟವನು ಭೂಮಿಯಲ್ಲಿ ಆಚಾರಲಿಂಗಪ್ರಸಾದಿ. ಶಿವನಿಂದೆಯನ್ನು ಆಲಿಸದವನು ಆಚಾರದ ಪ್ರಚುರಲಿಂಗಪ್ರಾಣಿ. ಮಾತಾಪಿತೃಗಳಲ್ಲಿ ಮೋಹವನ್ನು ಬಿಟ್ಟು ಗುರುವಿನಲ್ಲಿ ಅಚಲವಾದ ಪ್ರೇಮವುಳ್ಳವನು ಗುರುಲಿಂಗಮೋಹಿ ಎನಿಸಿ ಕೊಳ್ಳುವನು.

ಬಂಧುಗಳ ಉಪಚಾರವನ್ನು ಲೆಕ್ಕಿಸದೆ ಗುರುಪದಕಬಂಧರುಹದಲ್ಲಿ ಪ್ರೇಮ ವುಳ್ಳಾತನೇ ಗುರುಲಿಂಗಭಕ್ತ. ಬೇರೆ ಪೂಜೆಯನ್ನು ಇಷ್ಟಪಡದೆ ಗುರುವನ್ನು ಅರ್ಚಿಸು ವವನೇ ಗುರುಲಿಂಗಪೂಜಕ. ಪೂರ್ವದ ವಿರುದ್ಧಮಾರ್ಗವನ್ನು ಬಿಟ್ಟು ಗುರುಸೂಕ್ತಿ ಸಂದರ್ಭಮಾರ್ಗದಲ್ಲಿ ನಡೆಯುವವನೇ ವೀರ. ಗುರುವಾಜ್ಞೆಯನ್ನು ಮೀರದವನು ಗುರುಲಿಂಗಪ್ರಸಾದಿ ಎನಿಸಿಕೊಳ್ಳುವನು. ಗುರುವಿನಿಂದ ಬೇರೆಯಾದವರ ಸೇವೆಯನ್ನು ಬಿಟ್ಟು ಯಾವಾಗಲೂ ಗುರುಸೇವೆಯನ್ನು ಮಾಡಿಕೊಂಡು ಸಂತೋಷದಿಂದಿರುವವನೇ ಗುರುಲಿಂಗಪ್ರಾಣಿ. ಹರಮೋಹದಿಂದ ಅನ್ಯಮೋಹವನ್ನು ಬಿಟ್ಟವನು ಹರಲಿಂಗ ಮೋಹಿ. ಅನ್ಯದೈವಗಳಲ್ಲಿ ನಿರಾಸಕ್ತಿಯುಳ್ಳವನೆ ಶಿವಲಿಂಗಭಕ್ತ. ಅನ್ಯದೈವವ ಭಜಿಸದವನೆ ಶಿವಲಿಂಗಪೂಜಕ. ಪುಣ್ಯಯಾತ್ರಾದಿಗಳ ವ್ಯವಹಾರವಿಲ್ಲದವನು ಶಿವ ಲಿಂಗವೀರ. ಸುಖದುಃಖಗಳು ಪ್ರಾಪ್ತವಾದಾಗ ಅವನ್ನು ಸಹಿಸಿದವನೇ ಲಿಂಗಪ್ರಸಾದಿ. ಶಿವಶರಣ ವನಿತೆಯರ ಭೋಗವನ್ನು ಬಿಟ್ಟವನೆ ಶಿವಲಿಂಗಪ್ರಾಣಿ. ಪೂರ್ವವ್ಯವಹಾರ ಗಳನ್ನು ನಿಷೇಧಿಸಿದವನೇ ಜಂಗಮಲಿಂಗಮೋಹಿ.

ನಾನು ಇಂತಹ ಜಾತಿಯಲ್ಲಿ ಹುಟ್ಟಿದ್ದೆ; ಇಂತಹ ಹೆಂಗಸಿನೊಡನೆ ನನಗೆ ಸಂಬಂಧವಾಯಿತು; ಇದರಿಂದ ಬಂದ ಕೀರ್ತಿ ಇದು; ಕೊರತೆ ಇದು ಎಂದು ಭಾವಿಸಿ ದವನೆ ಜಂಗಮಲಿಂಗಭಕ್ತ. ದೇವತಾಂತರಗಳಿಂದ ಕೂಡಿದ ಸಮಾಜದಲ್ಲಿ ಫಲಗಳಿವೆ ಅವಕ್ಕಾಗಿ ಪೂಜೆಮಾಡಬೇಕು ಎಂದು ಬಗೆಯದವನೆ ಜಂಗಮದ ಲಿಂಗಪೂಜಕ. ತನ್ನಲ್ಲಿರುವ ಉತ್ತಮ ಪದಾರ್ಥಗಳನ್ನು ನೋಡಿದ ಜಂಗಮ ಅದನ್ನು ಕೇಳಿ ದೊಡನೆ ಕೊಟ್ಟು ಕಾಲಾಂತರದಲ್ಲಿ ಲಿಂಗದೇಹದೊಳಗೆ ಅದರ ಇಚ್ಛೆಯನ್ನು ತೊರೆದವನೆ ಜಂಗಮಲಿಂಗವೀರ. ಯಾವುದೇ ಜಂಗುಳಿಯಲ್ಲಿರಲಿ, ಅವಸ್ಥೆಯಲ್ಲಿರಲಿ ಅದಾವುದನ್ನೂ ಲೆಕ್ಕಿಸದೆ ಎಲ್ಲ ಪದಾರ್ಥಗಳನ್ನು ಜಂಗಮಕ್ಕೆ ಅರ್ಪಿಸದೆ ಲಿಂಗಾರ್ಪಣೆ ಯನ್ನು ಮಾಡದವನು ಜಂಗಮಲಿಂಗಪ್ರಸಾದಿ ಎನಿಸಿಕೊಳ್ಳುವನು. ತನ್ನ ಇದಿರಿನಲ್ಲಿ ನಾನಾ ವರ್ತನೆಗಳು ಕಾಣುತ್ತಿದ್ದರೂ ಅವನನ್ನು ಗಣಿಸದೆ ಸದಾ ಗುರುವಾಕ್ಯ ವನ್ನು ಪಾಲಿಸುತ್ತ ಜಂಗಮನೆ ಶಿವ ಎಂಬ ಭಾವವುಳ್ಳವನು ಜಂಗಮಲಿಂಗಪ್ರಾಣಿ

ಎನಿಸಿಕೊಳ್ಳುವನು. ಲಿಂಗಾರ್ಪಿತವನ್ನುಳಿದು ಇತರ ಪದಾರ್ಥಗಳಲ್ಲಿ ರುಚಿಯನ್ನು ಅರಿಯದವನು ಪ್ರಸಾದಲಿಂಗಮಾಹೇಶ್ವರನೆನಿಸುವನು. ತನ್ನ ಹಿಂದಿನ ಆಹಾರದ ಮೇಲಿನ ರಾಗವನ್ನು ಬಿಟ್ಟವನು ಪ್ರಸಾದಲಿಂಗಭಕ್ತ. ಅನ್ಯಮತದವರೊಡನೆ ತನಗೆ ಸ್ನೇಹವೇ ಆಗದಂತೆ ನಡೆಯುತ್ತ ಅವರು ಕಂಡರೂ ಮಾತನಾಡದೆ ಅವರು ಬೇಡಿದರೂ ಕೊಡದೆ, ಅವರು ಕೊಟ್ಟರೂ ತೆಗೆದುಕೊಳ್ಳದೆ ನಡೆದುಕೊಳ್ಳುವವನೇ ಪ್ರಸಾದಲಿಂಗಪೂಜಕ. ಕೋಪದಿಂದ ಒಂದಾದಂತೆ ಕಾಣಿಸಿಕೊಳ್ಳದೆ ಅನ್ಯರ ಪದಾರ್ಥಗಳನ್ನು ತಾನು ಪಡೆದರೂ ಅವನ್ನು ಅಟ್ಟದವನೆ ಸುಪ್ರಸಾದಾಖ್ಯಮೃಡಲಿಂಗವೀರನೆನಿಸುವನು. ಯಾರ ಒತ್ತಾಯದಿಂದಾಗಲಿ ಪರಹಿಂಸೆಯನ್ನು ಮಾಡದವನು ಪ್ರಸಾದಲಿಂಗಸ್ಥದಲ್ಲಿ ಸೇರಿದ ವಿಹಿತವಾದ ಅನ್ನಪಾನಾದಿಗಳನ್ನೂ ವ್ರತಾದಿಗಳಿಂದ ಆತ್ಮನಿಗ್ರಹವನ್ನೂ ಮಾಡಿದವನೆ ಪ್ರಸಾದಾಖ್ಯಲಿಂಗಪ್ರಾಣಿ. ಈ ಲೋಕವಾರ್ತೆಯನ್ನು ಕೇಳಿ ನೃಪರು ಆಚರಿಸುವ ಜನಪೀಡೆ, ದುರ್ಭಿಕ್ಷ, ಅವೃಷ್ಟಿ, ಮುಂತಾದುವುಗಳಿಂದಾಗುವ ಸಂತಾಪವನ್ನು ಮನಸ್ಸಿಗೆ ಹಚ್ಚಿಕೊಳ್ಳದವನು ಘನಲಿಂಗಮಾಹೇಶ್ವರ. ಹಿಂದಿನ ಆಚರಣೆಗಳಲ್ಲಿ ವಿನಯಾದಿ ಸದ್ಗುಣಗಳಲ್ಲಿ ಅನುಸಂಧಾನವಿಲ್ಲದಾತನು ಮಹಾಲಿಂಗಭಕ್ತ. ಅಜ್ಞಾನಿಗಳೊಡನೆ ಯಾವ ಸಮಯದಲ್ಲಾದರೂ ಯಾವ ಕಷ್ಟದುಃಖಗಳಲ್ಲಾಗಲಿ ಅವರ ಸಂಗಸಹವಾಸಗಳನ್ನು ಮಾಡದಿರುವವನೆ ಮಹಾದೇವದಲಿಂಗಪೂಜಕ. ಇಷ್ಟವಾದುದಾಗಲಿ ಸಾವೇ ಸಂಭವಿಸಲಿ ಆ ಬಗೆಗೆ ವ್ಯಸನಪಡದವನೇ ಮಹಾಲಿಂಗವೀರ. ಪ್ರಾಕೃತರಲ್ಲಿ ಭೋಜನ ಪ್ರತಿಭೋಜನವೇ ಮೊದಲಾದ ಸತ್ಕಾರಗಳನ್ನು ಮಾಡದವನೇ ಪ್ರಸಾದಿಯೆನಿಸುವನು. ಶಿವಲಿಂಗಕ್ಕೆ ಬಾಹ್ಯದಲ್ಲಿ ಮಾಡುವ ಪೂಜೋಪಕರಣವೇ ಮೊದಲಾದ ಕ್ರಿಯೆಗಳಲ್ಲಿ ಅನಾವರಣೆಯುಳ್ಳವನು ಮಹಾಲಿಂಗಪ್ರಾಣಿ.

ಷಟ್ಸ್ಥಲದ ಭೇದೋಪಭೇದಗಳನ್ನು ತಿಳಿದು ಅದರಲ್ಲಿ ಆಸಕ್ತಿಯನ್ನು ಹೊಂದಿ ಸಂಸಾರತಾಪ ಒತ್ತರಿಸಿದರೂ ಧೈರ್ಯಗುಂದದೆ ಪ್ರಾಣಿವರ್ಗದ ನರಜನ್ಮವನ್ನೆತ್ತಿ ಶಿವಧರ್ಮವನ್ನು ಅನುಸರಿಸಿ ಭವದಲ್ಲಿ ಬರಬಾರದು ಎಂಬುವವನೇ ನಿಜವಾದ ವೀರಶೈವ. ಈತನು ಪರಿಪಕ್ವಚಿತ್ತನಾದರೆ ತನುವಿಗೆ ಸೌಖ್ಯವನ್ನು ಒದಗಿಸುವ ಭೋಗ ದ್ರವ್ಯಗಳಲ್ಲಿ ಆಸಕ್ತಿಯಿಲ್ಲದೆ ಭೂಮಿಯಲ್ಲಿ ಸಂಚರಿಸಿ ಬದುಕಬೇಕು. ಎಲ್ಲ ಗಣವರರೂ ಇದನ್ನು ಆಚರಿಸಿದರು.

ನಿರಾಭಾರಿಯೊಡವನಿಗೆ ಯಾವುದಾನೊಂದರ ಪರಿಗ್ರಹ ದೊರಕೊಳ್ಳುವುದೆ ಎಂದು ಗಿರಿಜೆ ಕೇಳಲು, ಬೃಹದಾರಣ್ಯಕಾಪಾಸನೀಯ ವಚನದಲ್ಲಿ ಹೇಳಿರುವುದನ್ನು ಶಿವನು ವಿವರಿಸಿದನು. ಮುಕ್ತನಾಗಿರುವವನಿಗೆ ನಾಲ್ಕು ಗುಣಗಳಿರಬೇಕು. ಅವು ಮೈತ್ರಿ, ಕರುಣೆ, ಮುದಿತೆ, ಉತ್ಪ್ರೇಕ್ಷೆ. ವೀರಶೈವದ ಮಹಾಯಾತ್ರೆ ಮಾಡಿದವರಿಗೆ ಇರಬೇಕಾದ ಸಂಸಾರಸಾಮಗ್ರಿ ಯಾವುವೆಂದರೆ, ಉತ್ತಮವಾದ ವಿದ್ಯೆಯೇ ಭಾರ್ಯೆ, ಸಂತೋಷವೃತ್ತಿ ಸುತ, ಕೆಡದಿರುವ ಮತ್ತು ಜೊತೆಯಲ್ಲೇ ಇರುವ ಸತ್ಯವು ಪುತ್ರ

ಪುತ್ರಿಯರು.....ಮೊದಲನೆಯ ಸೊಸೆ. ಸತ್ವಗುಣ ಅಳಿಯ. ವಿರಾಗ ಬಂಧುಗಳು, ಕ್ಷಮೆಯೇ ಚರರು, ಶಾಂತಿಯೆ ಮಿತ್ರ, ಶಿವಭಕ್ತಿಯೇ ಮಾತೆ, ವಿಮಲವಾದ ಆಚಾರವೇ ತಂದೆ. ಮೈತ್ರಿಯೇ ಮೊದಲಾದ ಸದ್ಗುಣಗಳು ಪೌತ್ರ ಪ್ರಪೌತ್ರರು.

ಜ್ಞಾನವೇ ದೇಹ. ಈ ದೇಹ ಎಂತಿರುತ್ತದೆ ತಾನು ಯಾರು ತನಗೂ ಈ ಶರೀರಕ್ಕೂ ಏನುಸಂಬಂಧ ಇದನ್ನು ತಿಳಿದುಕೊಳ್ಳಬೇಕೆಂಬ ಸುವಿಚಾರವೇ ಕ್ಷೇತ್ರ. ಪ್ರಾಣಿಗಳನ್ನು ಕೊಲ್ಲದಿರುವುದು ದಾಸಿ; ಕಳ್ಳತನವಿಲ್ಲದಿರುವುದು ದಾಸ; ಪ್ರಾಣಿಗಳಲ್ಲಿ ಉಪಕಾರರೂಪಧರ್ಮವೇ ವಾಹನಾಕಾರವಾಗಿರುವುದು. ದಮೆಯೇ ಕುಲಗುರು. ಮೋಕ್ಷವನ್ನು ಕೊಡುವ ಆಚಾರ್ಯನೇ ಶಮ. ಪರಮುಕ್ತಿಯೇ ನಾಡು. ಇವನ್ನು ಬಿಟ್ಟು ಉಳಿದವುಗಳೆಲ್ಲ ಸಂಸಾರಿಕೋಪಕರಣಗಳು. ಕಂಥೆ, ದಂಡ, ಕಮಂಡಲು, ಭಿಕ್ಷಾಪಾತ್ರೆ, ವಿಭೂತಿ ಇವನ್ನು ಧರಿಸಿದವನಾಗಿ ಶಂಕರನ ಮುದ್ರೆಯನ್ನು ಕ್ರಮವಾಗಿ ಅಂತರಂಗದಲ್ಲಿ ಧರಿಸಿರಬೇಕು. ಸಮತೆಯೆ ಕಂಥೆ, ಹರನ ವಿಜ್ಞಾನವೆ ದಂಡ, ದಯೆಯೇ ಕಮಂಡಲು, ವೈರಾಗ್ಯವೆ ಭಿಕ್ಷಾಪಾತ್ರೆ; ಉಪರತಿ ಭಸ್ಮದ ಉಂಡೆ. ಈ ಪಂಚಪರಿಕರಗಳನ್ನು ತಾಳಿ ಬಾಹ್ಯದಲ್ಲಿ ತುರುಬು, ಜಡೆ, ಬೋಳಂದಲೆ, ಜಿಂಕೆಚರ್ಮ, ನಾರುಬಟ್ಟೆಗಳನ್ನು ಹೊಂದಿರಬೇಕು. ಇವು ಇಲ್ಲದಿದ್ದರೆ ದಿಗಂಬರನಾಗಿ ಭಸ್ಮಧಾರಣೆಮಾಡಿಕೊಂಡು ಶಿವನಲ್ಲಿ ತೋರುವ ಚಿತ್ರವೇಷಗಳನ್ನು ತಾಳಿ ನಿಯಂತವಾದಾಹಾರದಿಂದ ಪಲ್ಲವೀಕರಣ ಎಳಿಗೆಯಿಂದ ಭಸ್ಮವನ್ನು ಉದ್ಧೂಳಿಸುತ್ತ ಹಣೆಯಲ್ಲಿ ವಿಭೂತಿಯನ್ನು ಧರಿಸಿ ಶಿವ ಪೂಜೆಯಲ್ಲಿ ಆಸಕ್ತನಾಗಿ ಶಿವಮಂತ್ರವನ್ನು ಯಾವಾಗಲೂ ಜಪಿಸುತ್ತ ಸದಾಕಾಲದಲ್ಲಿ ಧ್ಯಾನಕ್ರಿಯೆಗಳಲ್ಲಿ ನಿಷ್ಠನಾಗಿರಬೇಕು.

ರಸವಾದದಲ್ಲಿ ತತ್ಪರನಾಗದೆ ಷಟ್ಕರಸಪಾಕದಲ್ಲಿ ನಿರ್ಭರನಾಗದೆ ವಾದರಸದಲ್ಲಿ ಆಸಕ್ತನಾಗದೆ ಬೇಟೆಯಲ್ಲಿ ಮನವಿಡದೆ ವಸಂಮಾಲಿಗತಿಯನ್ನು ಕೇಳುವ ಶಾಸ್ತ್ರದಲ್ಲಿ, ವೈದ್ಯಸಮಾಜದಲ್ಲಿ ವಣಿಗ್ವರ್ಗದಲ್ಲಿ ಶಸ್ತ್ರಜೀವಿಸಮೂಹದಲ್ಲಿ ಸಂಸಕ್ತನಾಗದೆ ಲೌಕಿಕ ವ್ಯಾಪ್ತಿಯನ್ನು ಖಂಡಿಸಬೇಕು. ವನಿತೆಯರ ಬಗೆಗೆ ವಿರಕ್ತಿಯನ್ನು ತಾಳಿ ಜನಪದದಲ್ಲಿ ಚರಿಸುವ ಯೋಗಿಯು ಭವಾರಣ್ಯದಲ್ಲಿ ತನಗೆ ಸಂಚರಿಸುವುದಕ್ಕೆ ಸುಪ್ತಸಂಸ್ಕಾರದಿಂದ ದೊರಕದಿದ್ದರೂ ಪೂರ್ವಕರ್ಮಾನುಗುಣದಿಂದ ತೀವ್ರಸಂಸ್ಕಾರ ಮಂದಸಂಸ್ಕಾರ ಅಳವಟ್ಟರೆ ಆ ಕಾಲದಲ್ಲಿ ಚರಿಸಬೇಕು. ಹೀಗೆ ಚರಿಸಿದರೂ ಅದರಲ್ಲಿರುವ ಲೋಭವನ್ನು ಹೊಂದದೆ ವನಿತಾಸಕ್ತಿಯನ್ನು ತೊರೆದು ಪಂಚಾಂಕದಿಂದ ಕೂಡಿರುವ ಜ್ಞಾನೇಂದ್ರಿಯಗಳೆಂಬ ಶತ್ರುಗಳನ್ನು ಲೆಕ್ಕಿಸದೆ ಕರ್ಮೇಂದ್ರಿಯಗಳಾದ ಶತ್ರುಮಿತ್ರರಿಗೆ ಗುಟ್ಟನ್ನು ಕೊಡದೆ ಮೋಹವೆಂಬ ಪಿಶಾಚಿಗೆ ಅಂಜದೆ ಕೋಪವೆಂಬ ಹೆಬ್ಬುಲಿಗೆ ಸಿಕ್ಕದೆ ಸರ್ಪರೂಪದಲ್ಲಿರುವ ಮಮತೆಯನ್ನು ತುಳಿಯದೆ ಮನ್ಮಥನಿಗೆ ವಶನಾಗದೆ ಏನು ಪಾಡುಪಟ್ಟರೂ ಅಂಧಕಾರದಂತಿರುವ ಅಹಂಕಾರದಿಂದ ಕುಣ್ಣು ಕರುಡಾಗದೆ ತಾಪತ್ರಯಗಳಿಗೆ ಸಿಕ್ಕಿಹಾಕಿಕೊಳ್ಳದೆ ಗರ್ವವೆಂಬ ಪರ್ವತವನ್ನೇರಿ ಮೋಸವೆಂಬ

ಝುರಿಯೊಳಕ್ಕೆ ಬೀಳದೆ, ಹೊಗಳಿಕೆಗೆ ಮರುಳಾಗದೆ ಅಸೂಯೆಪಡದೆ ಅಹಮ್ಮಿಗೆ ಒಳಗಾಗದೆ ಮೂಢರ ಸಹವಾಸಮಾಡದೆ ಜಾರೆಯರ ಸಂಗಮಾಡದೆ ಭೋಗಿಗಳ ಮನೆಯನ್ನು ತುಳಿಯದೆ ದುರ್ಮತಿಗಳ ಒಡನಾಡದೆ ವಿದ್ವಾಂಸರು ಇರುವ ಸ್ಥಳವನ್ನು ನಿರೀಕ್ಷಿಸಬೇಕು. ಅವರಿಂದ ಪುಣ್ಯ ದೊರಕೊಂಡರೂ ಈ ಭವಕಾನನದಲ್ಲಿ ತಿರಿಗಿ ಶಂಕರಜ್ಞಾನಪಡೆದ ಪೂರ್ವರ ಮಾರ್ಗದಲ್ಲಿ ಒಬ್ಬನೇ ನಡೆಯುವೆನೆಂದು ತೋರಿಸಿಕೊಟ್ಟು ಪೂರ್ವದಲ್ಲಿ ಪಟ್ಟ ಕಷ್ಟವನ್ನು ಜ್ಞಾಪಿಸಿಕೊಳ್ಳುತ್ತ ನಡೆದುಬಂದ ದಾರಿಯನ್ನು ಮತ್ತೆ ನೋಡದೆ ಈ ನಾಡಿಗೆ ಮರಳಿಬಂದ ಮಹಾಪುರುಷನೇ ಜಂಗಮಸ್ಥಲಕ್ಕೆ ಪಾತ್ರ. ಇಂತಹವನನ್ನು ಯೋಗಿಗಳು ನಿರಾಭಾರಿ ಎನ್ನುವರು ಎಂದು ಶಂಕರಸಂಹಿತೆಯಲ್ಲಿ ರುವುದನ್ನು ಶಿವನು ಷಣ್ಮುಖನಿಗೆ ಹೇಳಿದನು.

ಕ್ರಿಮಿಗಳಿಗಿಂತ ಕೀಟ, ಕೀಟಕ್ಕಿಂತ ಭೂಮಿ, ಚರ ಖಚರ ಪಕ್ಷಿ ಮೃಗಚಾರಿಗಿಂತ ಮನುಷ್ಯ ಅಧಿಕ. ಈ ಮನುಷ್ಯರಲ್ಲಿ ದ್ವಿಜ ಉತ್ತಮ. ಆತನಿಗಿಂತ ಸೋಮಯಾಜಿ, ಆತನಿಗಿಂತ ಸನ್ಯಾಸಿ, ಈತನಿಗಿಂತ ಆಗಮಜ್ಞಾನಿ, ಇವನಿಗಿಂತ ನಾಗಭೂಷಣನ ಅರ್ಚಕ, ಇವನಿಗಿಂತ ಲಿಂಗಾಂಗಸಂಗಿಗಳಧಿಕ. ಅವರಿಗಿಂತ ಷಟ್ಸ್ಥಲಜ್ಞ ಮಿಗಿಲು; ಇವರಿಗಿಂತ ಮಿಗಿಲಾದವರು ಯಾರೂ ಇಲ್ಲ ಎಂದು ಶಿವ ಗುಹನಿಗೆ ಪಾರ್ವತಿ ಸಾಕ್ಷಿಯಾಗಿ ಹೇಳಿದನು.

ಪಂಡಿತಾರ್ಯರು ದಾರುಮುನಿಗೆ ಸಕಲ ರಹಸ್ಯಾರ್ಥಗಳನ್ನು ತಿಳಿಸಲು ಸಂತುಷ್ಟನಾದ ಮುನಿ ಆಚಾರ್ಯರಿಗೆ ದಂಡಪ್ರಣಾಮವನ್ನು ಮಾಡಿ ಕಡೆಯಿಲ್ಲದ ಘೋರ ಸಂಸಾರದಲ್ಲಿ ತೊಳಲುತ್ತಿದ್ದವನನ್ನು ಕಷ್ಟಕಾರ್ಪಣ್ಯಗಳಿಂದ ಪಾರುಮಾಡಿ ಶಿವನತ್ತ ಹೊರಳಿಸಿದ ತಮ್ಮ ಉಪಕಾರಕ್ಕೆ ಯಾವ ಉಪಹಾರವನ್ನು ನೀಡಲಿ ಎಂದು ರೋಮಾಂಚಪುಳಕಿತನಾಗಿ ಬೇಡಿಕೊಂಡನು. ಆತನನ್ನು ಕಂಡ ಪಂಡಿತಾಚಾರ್ಯರು ಸಂತೋಷಪಟ್ಟು ''ಖಂಡೇಂದುಧರನೊಲವು ನಿನಗಾದುದೈ ನೀಂ ಕೃತಾರ್ಥ'' ಎಂದು ಆಶೀರ್ವದಿಸಿ ಬೀಳ್ಕೊಟ್ಟರು.

ಚತುರಾಚಾರ್ಯರು ಭೂಲೋಕದಲ್ಲಿ ಅವತರಿಸಿ ವೀರಶೈವಮತವನ್ನು ಪ್ರತಿಷ್ಠಿಸಿ ಕೃತಯುಗದ ಆದಿಯಲ್ಲಿ ವೀರಶೈವಾಚಾರವನ್ನು ನಿರ್ಭರವಾಗಿ ಹೇಗೆ ನಡೆಸಿದರೋ ಹಾಗೆ ಕಲಿಯುಗದಲ್ಲಿ ನಡಸಿ ಭಕ್ತರ ಸಂಸಾರಪಾಶವನ್ನು ಪರಿದು ನಿಶ್ಚಿಂತ ಪದವಿಯನ್ನು ಪಾಲಿಸುತ್ತಿದ್ದರು. ಈಶ್ವರನ ಅಜ್ಞೆ ಯಾವ ರೀತಿ ಇದೆಯೊ ?

ಈ ರೀತಿಯಿಂದಲೇ ವಿವಾಹಗಳನ್ನು ಮಾಡಿಕೊಂಡು ಔರಸಪುತ್ರರನ್ನೂ ಬೇರೆ ಕೆಲವು ಪುತ್ರರನ್ನೂ ಪಡೆದು ಅವರಿಗೆ ಆಚಾರ್ಯಪಟ್ಟವನ್ನು ಕಟ್ಟಿ ಕ್ರಮವನ್ನು ಮೀರದೆ ನಿಮ್ಮ ನಿಮ್ಮ ಕಲಶಾರಂಭದಲ್ಲಿ ಪರಿಣತರಾಗಿ ಲಿಂಗಸಂಸ್ಕಾರವನ್ನು ಮಾಡಿ ಭವದಲ್ಲಿ ಬೇಸರವನ್ನು ಹೊಂದಿದ ಮುಮುಕ್ಷುಗಳಿಗೆ ಶಾಂಕರಸ್ಥಾನವನ್ನು ಕೊಟ್ಟು ಅವರವರ ಯೋಗ್ಯತೆಗೆ ಅದನ್ನು ಅನುಸಾರವಾಗಿ ಕ್ರಿಯಾಧರ್ಮವನ್ನು ಹೇಳಿ ವೀರಶೈವ

ಜ್ಞಾನವನ್ನು ಸಾಂಗೋಪಾಂಗವಾಗಿ ತಿಳಿಸಬೇಕು. ಸಾರತರವಾದ ಶಾಂಭವದೊಳಗೆ ಸಾಲೋಕ್ಯಪೌರುಷ ಸಾಮೀಪ್ಯಪೌರುಷ ಸಾರೂಪ್ಯಪೌರುಷ ಸಾಯುಜ್ಯಪೌರುಷ ವನ್ನು ಕರತಲಾಮಲಕಮಾಡಿಕೊಂಡು ಮೂರುವೇಳೆಯಲ್ಲೂ ಬೋಧಿಸಿದ ವಾಕ್ಯವನ್ನು ಮರೆಯದೆ ವೀರಶೈವ ಪ್ರತಿಷ್ಠೆಯನ್ನು ಮಾಡಬೇಕು.

ಭವಸಾಗರದಲ್ಲಿ ತೊಳಲುತ್ತಿರುವ ಜೀವಜಾಲಗಳಿಗೆ ಶುಭವುಂಟುಮಾಡ ಬೇಕೆಂಬುದೇ ಶಿವನ ಸಂಕಲ್ಪ. ಎಳೆಯ ಮಕ್ಕಳು ಗೊತ್ತಿಲ್ಲದೆ ಕೆಂಡವನ್ನು ಮುಟ್ಟಿ ದರೆ ಅದನ್ನು ಕಂಡ ತಂದೆತಾಯಿಗಳು ಹೇಗೆ ಸಂತಾಪಕ್ಕೆ ಗುರಿಯಾಗುವರೋ ಹಾಗೆ ವಿಷಯದಾಸೆಗೆ ಸಿಕ್ಕಿ ಕಷ್ಟಪಡುತ್ತಿರುವ ಜೀವರಾಶಿಗಳನ್ನು ಉದ್ಧರಿಸಲೋಸುಗ ಪರಶಿವನು ನಮ್ಮನ್ನು ಭೂಲೋಕಕ್ಕೆ ಕಳಿಸಿದ್ದಾನೆ. ನಾವು ನಿಮಿತ್ತಮಾತ್ರರು. ದೀಕ್ಷೆಯನ್ನು ಮಾಡಿ ಜನರನ್ನು ಉದ್ಧರಿಸಬೇಕೆಂದು ಆಚಾರ್ಯರು ತನಯತತಿಗೆ ಹೇಳಿದರು.

ರುದ್ರಮುನಿ ಮುಖ್ಯರಾದವರು ಆಗಲಿ ಎಂದರು. ಭಕ್ತಿಯಿಂದ ಬಂದವರಿಗೆ ಶಿವ ದೀಕ್ಷೆಯನ್ನು ಕೊಡುವುದು ಆವಶ್ಯಕ. ಅಜ್ಞರಿಗೆ, ಹೊಟ್ಟೆಪಾಡಿಗಾಗಿ ದೀಕ್ಷೆಯನ್ನು ಪಡೆ ದವರಿಗೆ ಯಾವ ಗತಿ ಪ್ರಾಪ್ತವಾಗುವುದೋ ಎಂದು ರೇವಣಾರಾಧ್ಯ ಮೊದಲಾದವರು ಹೇಳಿದರು. ಪಾರ್ವತೀಸಮೇತನಾದ ಶಿವನು ಗುಹಗಣಪರೊಂದಿಗಿರಲು ನಂದೀಶ್ವರನು ಸಾಷ್ಟಾಂಗಪ್ರಣಾಮವನ್ನುಮಾಡಿ ಭವದುಃಖಿಗಳಿಗೆ ದೀಕ್ಷೆಕೊಡಿಸುವುದು ಕಾದ ತಗಡಿಗೆ ಬೆಳುಗಾರ ಸೇರಿಸಿ ಬೆಸುಗೆ ಹಾಕಿದಂತೆ. ನಿಮ್ಮ ಲಾಂಛನವಾದ ಭಸ್ಮಾದಿಗಳು ಅವರಲ್ಲಿದ್ದು ಶಿವದೀಕ್ಷೆಕೊಡದೆ ಕುಲದ ನೆವದಿಂದ ಜೀವನದ ಲೋಭದಿಂದ ಅನುರೋಧರಾದವರಿಗೆ ಗತಿಯಾವುದು ಹೇಳಿ ಎಂದು ಪಶುಪತಿಯನ್ನು ಕೇಳಿದನು. ಪಶುಪತಿ ಯಾವುದೋ ಕಾರಣದಿಂದ ಕಬ್ಬಿಣದ ರಾಶಿಗೆ ಬೆಲೆಬಾರದಿರಲು ಯಾವು ದಾದರೂ ನೆಪದಿಂದ ಅದಕ್ಕೆ ಸಿದ್ಧರಸ ಸಂಪರ್ಕವಾಗಲು ಅದು ಚಿನ್ನವಾಗಿ ಪೂರ್ವಾವಸ್ಥೆಯನ್ನು ಪಡೆಯುತ್ತದೆ. ಹಾಗೆಯೇ ಬುದ್ಧಿವಂತನಾದವನು ಕಾಡಕಲ್ಲನ್ನು ತಂದು ಪಂಚಸೂತ್ರಪ್ರಕಾರದಿಂದ ಲಿಂಗವನ್ನು ಮಾಡಿ ಪೂಜಿಸಿದ ಮೇಲೆ ಅದು ಸರ್ವರಿಂದಲೂ ಪೂಜಾಯೋಗ್ಯವಾಗುತ್ತದೆ. ಸುರಾಸುರರು ಅನಾದಿಲಿಂಗವನ್ನು ವಂದಿಸಲಿಲ್ಲವೆ ? ನನ್ನಲ್ಲಿಗೆ ಬಂದವರಿಗೆ ಮೂರನೆಯ ಜನ್ಮವೆಂಬುದೇ ಇಲ್ಲ.

ಸಕಲಗಣಮಧ್ಯದಿಂದ ಶಂಭು ಈ ರೀತಿ ಉಚ್ಚರಿಸಿದ : "ಏಕಾವೃತ್ತಿರಸ್ತು ದ್ವಿರಾವೃತ್ತಿರಲಘುಬುದ್ಧೇಮಾಸ್ತು ತದಪಿ ತ್ರಿರಾವೃತ್ತಿರಲಮಲಂ ನಾಸ್ತೀ" ಎಲೈ ಮಕ್ಕಳೆ, ನಾವು ಶಂಭುವಿಂದ ಭೂಮಿಯಲ್ಲಿ ಅವತರಿಸಿದೆವು ಎಂದು ಹೇಳಿ ಬಂಧುಬಾಂಧವ ಸಮೇತ ಯಾವ ಯಾವ ಲಿಂಗದಿಂದ ಭೂಮಿಗೆ ಬಂದರೋ

ಆ ಲಿಂಗದ ಸನ್ನಿಧಿಗೈದಿ ಕೈಮುಗಿದು "ಎಲೈ ಶಂಭುವೆ, ನೀನು ಹೇಳಿದ ಕಾರ್ಯವನ್ನು ಮಾಡಿದ್ದೇವೆ. ಈ ಜಗತ್ಪಾವನೋದ್ಯೋಗಕ್ಕೆ ಸೇವಕರನ್ನು ಶಿಷ್ಯರನ್ನೂ ತನಯರನ್ನೂ ನಿಲಿಸಿದ್ದೇವೆ. ಮುಂದೆ ನಾವೇನು ಮಾಡಬೇಕು" ಎಂದು ಸಾಷ್ಟಾಂಗಪ್ರಣಾಮವನ್ನು ಮಾಡಿ ತಾವು ಬಂದ ಲಿಂಗಗಳನ್ನು ನೋಡಲು ರೇವಣಾಚಾರ್ಯ ಕೊಲ್ಲಿಪಾಕ ಸೋಮೇಶನ ಒಡಲಲ್ಲೂ ಮರುಳುಸಿದ್ಧ ಸಿದ್ಧವಟಮಂದಿರದ ಸಿದ್ಧೇಶ್ವರನ ಜಠರದಲ್ಲೂ ಏಕೋರಾಮತಂದೆ ಮುದ್ರಾಪುರಿರಾಮನಾಥನ ಉದರದಲ್ಲೂ ಪಂಡಿತಾರಾಧ್ಯರು ಅಮರಗುಂಡದ ಮಲ್ಲಿಕಾರ್ಜುನನ ಕುಕ್ಷಿಯಲ್ಲೂ ವಿಶ್ವನಾಥಾರ್ಯರು ವಿಶ್ವೇಶ್ವರನ ಗರ್ಭಸಮುದ್ರದಲ್ಲೂ ಹೊಕ್ಕಂತೆ ಆಯಾ ಲಿಂಗಗಳನ್ನು ಪ್ರವೇಶಿಸಿದರು.

ಅಂಕೋಲೆಯನ್ನು ಮೇಣದ ಬೀಜಗಳೂ ಸೂಜಿಯನ್ನು ಅಯಸ್ಕಾಂತವೂ ನಿಜಪತಿಯ ಸಂಗಡ ಪತಿವ್ರತೆಯೂ ಲತೆಗಳು ಮರದ ಕೊಂಬಿನ ಅಂಕುರಗಳನ್ನೂ ನದಿಗಳು ಸಮುದ್ರವನ್ನೂ ಬೆರೆದಂತೆ ಅವರೆಲ್ಲರೂ ಲಿಂಗಗಳಲ್ಲಿ ಐಕ್ಯರಾದರು. ಮೇಲೆ ಲಿಂಗವು ಮಾತ್ರ ಕಾಣುತ್ತಿತ್ತು. ಅದನ್ನು ಕಂಡು ಎಲ್ಲರೂ ಆಶ್ಚರ್ಯಪಟ್ಟರು.

ಜಯಜಯಧ್ವನಿ ಆಕಾಶವನ್ನೆಲ್ಲ ತುಂಬಿತು. ಅಪ್ಸರೆಯರು ನಲಿದಾಡಿದರು. ಸುರರು ಜಯಭೇರಿ ಬಾರಿಸಿದರು. ಅಲ್ಲಿದ್ದ ತನಯರು ಶಿಷ್ಯರು ಸೇವಕರು ಆನಂದ ಶೋಕಭರಿತರಾಗಿ ನಿಜನಿವಾಸಗಳಿಗೆ ಹಿಂತಿರುಗಿದರು.

ಸಕಲ ವೀರಶೈವಾಚಾರ್ಯವಲ್ಲಭರೆನಿಸಿದ ಚತುರಾಚಾರ್ಯರು ಭೂಲೋಕದಲ್ಲಿ ಹುಟ್ಟಿ ಸದ್ಭಕ್ತರಿಗೆ ಮುಕ್ತಿಮಾರ್ಗವನ್ನು ತೋರಿ ಶಿವಭಕ್ತಿಪಲ್ಲವಾಗ್ರದಲಿ ಷಟ್ಸ್ಥಲದ ಅಮೃತಫಲದ ಬೆಳಗಲ್ಲಿರಿಸಿ ಹೋದರು. ಇಲ್ಲಿಗೆ ಚತುರಾಚಾರ್ಯಚಾರಿತ್ರ ಸಂಪೂರ್ಣವಾಯಿತಂ.

ಚತುರಾಚಾರ್ಯಚರಿತ್ರೆಯ ಅನುಕ್ರಮಿತೆಯನ್ನು ಗುರುಪಾದದೇವರು ಬಸವ ಪೌರಾಣಿಕಗೆ ಹೇಳಿದರು.

ಮೊದಲನೆಯ ಸಂಧಿಯಲ್ಲಿ ದೇವತಾಸ್ತುತಿ ಕಥಾರಂಭ. ಅದರಲ್ಲಿ 56 ಪದಗಳು.

ಎರಡನೆಯ ಸಂಧಿಯಲ್ಲಿ ಕೈಲಾಸವರ್ಣನೆ ಶಿವನರೀತಿ
ಶಿವನ ಪ್ರಮಥರುಗಳ ಸಮಾಖ್ಯೆ. ಅದರಲ್ಲಿ 108 ಪದಗಳು
ಮೂರನೆಯ ಸಂಧಿಯಲ್ಲಿ ಸಾಂಬಲೋಕದಿಂದ ನಾಲ್ವರಾಚಾರ್ಯರು
ಭೂಮಿಗೆ ಬಂದದ್ದು. ಅದರಲ್ಲಿ 65 ಪದಗಳು
ನಾಲ್ಕನೆಯ ಸಂಧಿಯಲ್ಲಿ ಭೂಲೋಕದಲ್ಲಿರುವ ಕಾಶಿ ಮುಂತಾದ
ಶಿವನಿಲಯಂಗಳ ರೀತಿ. ಅದರಲ್ಲಿ 78 ಪದಗಳಂ
ಐದನೆಯಂ ಸಂಧಿಯಲ್ಲಿ ಆಚಾರ್ಯರು ಸ್ವಯಂವ್ಯಕ್ತ ಲಿಂಗಗಳುದರದಲ್ಲಿ
ಬಂದುದಂ, ಅದರಲ್ಲಿ 58 ಪದಗಳು

ಸಂಪಾದನೆಯ ಸಿದ್ಧವೀರೇಶ್ವರನ ಶಿಷ್ಯ ಮಲ್ಲಿಕಾರ್ಜುನದೇವರನ್ನು ಬೋಳ ಬಸವೇಶ್ವರನು ಚತುರಾಚಾರ್ಯರ ಚರಿತ್ರೆಯನ್ನು ನಿರೂಪಿಸುವಂತೆ ಕೇಳಿಕೊಳ್ಳಲು ಅವರು ಹೇಳಿದರು. ಅದನ್ನು ಪರ್ವತೇಶ್ವರ ಕೇಳಿದ್ದನು. ಆಮೇಲೆ ಬಸವಪೌರಾಣಿಕನು ಆ ಕಥೆಯನ್ನು ಹೇಳಬೇಕೆಂದು ಪರ್ವತೇಶ್ವರನನ್ನು ಕೇಳಿಕೊಳ್ಳಲು "ನಾವೆಂತು ಪೇಳಬಹುದು" ಎಂದು ಚಿಂತಿಸುತ್ತಿರುವಲ್ಲಿ ಅವರ ಕನಸಿನಲ್ಲಿ ಚೆನ್ನಮಲ್ಲಿಕಾರ್ಜುನ ಗುರುಗಳು ಪ್ರತ್ಯಕ್ಷರಾಗಿ "ಭಯಬೇಡ ನಿನಗೆಂದಭಯಮಂ ಸಲಿಸಿ ನಾವೇ ನಿನ್ನ ಹೃದಯಸರಸೀರುಹದಿ ನೆಲಸಿ ಪೇಳಿಸುವೆವೆಚ್ಚತ್ತು ನೀಂ ಗುರುಪಾದನಳಿನಕಭಿನಮಿಸಿ ಯಪ್ಪಣೆವಡೆದಂ ಪೇಳೆಂದು ನಿಜಹಸ್ತಮಂ ಪ್ರೀತಿಯಿಂ ತಲೆಯ ಮೇಲಿಡಲೆನ್ನನಸುಗಳಿಂದ ಕಾಯಕ್ಕೆ ತಳಿದಂತೆ ದಿವ್ಯಾಮೃತವ" ಎಂದು ಸಂಪ್ರೀತನಾಗಿ ಕನಸಿನಲ್ಲಿದ್ದವನು ಎಚ್ಚತ್ತು ಕಾವ್ಯವನ್ನು ರಚಿಸಿದನು.

ಸಂಪಾದನೆಯಂ ಸಿದ್ಧವೀರೇಶನ ಸ್ತುತಿ : ಚಾರುವೀರಶೈವ ಸ್ಥಿತಿಯಂ, ಸಾಧು ಜಂಗಮದ ಸಂಗತಿಯ ಬಾಲಚಂದ್ರಾವತಂಸನ ಕೃಪಾಕಟಾಕ್ಷದ ನೀತಿಯ ಧನಕನಕ ವಾಹನವ ಚಿತ್ತವೃತ್ತಿಯ ನೃಪರ ಸಂಪಾದಿಸಿದ ಅಖಿಲಜಂಗಮವಾರ್ಧಿಚಂದ್ರೋದಯನಾದವನಂ ಸಿದ್ಧವೀರೇಶ. ಈತನಿಗೆ ಶಿವಲಿಂಗವೇ ಪ್ರಾಣಜಂಗಮವೂ ಜಂಗಮವೇ ಪ್ರಾಣಲಿಂಗವೂ ಆಗಿ ಶಿವಜಂಗಮರಲ್ಲಿ ಐಕ್ಯವನ್ನು ಪಡೆದವನು. ಶಿವನನ್ನು ಜಂಗಮ ಮೂಲದಿಂದ ಭಜಿಸಿದವನಂ. ಈತನು ಪರಸಮಯದವರಿಂದ ಹೊಗಳಿಸಿಕೊಂಡು,

ನಾನಾ ಭೂಪಾಲರಿಂದ ಪೂಜೆಯನ್ನು ಪಡೆದವನು, ಶೈವಶೀಲ ಸಂಪನ್ನನು. ಈತನ ಶಿಷ್ಯನಾದ ಚೆನ್ನಮಲ್ಲಿಕಾರ್ಜುನನ ಕೃಪಾಪಾತ್ರನಾದ ಪರ್ವತೇಶ ಈ ಕಾವ್ಯವನ್ನು ಬರೆಯಲು ಸಮರ್ಥನೆಂದು ಚೆನ್ನಮಲ್ಲಿಕಾರ್ಜುನ ಆಶೀರ್ವಚನಪೂರ್ವಕವಾಗಿ ನಿರೂಪವನ್ನು ಕೊಡಲು ಚತುರ್ಗುರುಚರಿತವನ್ನು ಬರೆದ.

ದಿವ್ಯಾಗಮಗಳನ್ನೂ ಪುರಾಣಗಳನ್ನೂ ನಂದೀಶ ಮುಖ್ಯಪುರಾತನ ವಾಕ್ಯ ರಾಶಿಯನ್ನು ಈ ಕಾವ್ಯದಲ್ಲಿ ಸಂದರ್ಭಿಸಲಾಗಿದೆ. ಈ ಮಹಾಭಾಗ್ಯಕ್ಕೆ ಜಗತ್ತಿನಲ್ಲಿ ಯಾವುದು ಎಣೆ. ಚತುರ್ವೇದಗಳಲ್ಲಿ ಉಪನಿಷತ್ತುಗಳಲ್ಲಿ ಇರುವ ಸಾರವತ್ತಾದುದನ್ನೆಲ್ಲ ಈ ದಿವ್ಯಕಾವ್ಯದಲ್ಲಿ ಸೇರುವೆಯನ್ನು ಮಾಡಲಾಗಿದೆ. ಹಾಗೆಯೇ ಕಾಮಿಕಾಗಮದ ಚೋದಿತ್ಯತ್ತ ಎಂಬ ವಾಕ್ಯವನ್ನು ವೈದಿಕ ವಿರುದ್ಧವಾಗದ ತೆರದಲ್ಲಿ ಹೇಳಿದೆ. ಸುಜನರು ಇದನ್ನು ಲಾಲಿಸಬೇಕು.

ವೀರಾಗಮ ವಾತೂಲ ಪಾರಮೇಶ್ವರ ಮೊದಲಾದುವುಗಳಲ್ಲಿನ ಲೇಸನ್ನು ಸ್ವೀಕರಿಸಿ, ಲೈಂಗ್ಯ ಪದ್ಮೋತ್ತರ ಇವೇ ಮೊದಲಾದುವುಗಳಿಂದ 'ವೀರಶೈವ ಮತಕ್ಕನುಕೂಲವಪ್ಪಂತೆ' ಉದ್ಧರಿಸಲಾಗಿದೆ. ಹಾಗೆಯೇ ಸ್ಕಂದ, ಸಾರಂಗ, ಷಟ್ಸ್ಥಲಜ್ಞಾನ ದೀಪಿಕೆ, ಗುರುಬಸವೇಶನ ಷಟ್ಕಾವ್ಯಗಳು, ಸಿದ್ಧಾಂತಶಿಖಾಮಣಿ, ನಿಜಗುಣರ ವಿವೇಕ ಚಿಂತಾಮಣಿ–ಇವುಗಳಲ್ಲಿ ನಿರೂಪಿತವಾಗಿರುವ ಸಂಗತಿಗಳನ್ನು ತೆಗೆದುಕೊಂಡು ಸರವನ್ನು ಮಾಡಲಾಗಿದೆ.

ಕನ್ನಡದಲ್ಲಿ ರಚಿತವಾದ ಕೃತಿಯೆಂದು ಬೇಸರಗೊಳ್ಳಬಾರದು. ವೇದಾದಿ ಸಮ್ಮತಿಯ ವಾಕ್ಯಗಳನ್ನು ಸೇರಿಸಿದೆ. ಸಂಗತಿಯನ್ನು ಅರಿತು ಆಮೇಲೆ ಆ ಪದಾರ್ಥವನ್ನು ತಿಳಿದುಕೊಳ್ಳುವ ಹಾಗೆ ಕನ್ನಡಿಸಿ ಹೇಳಲಾಗಿದೆ. ಸೂತ್ರಕಾರನ ಮತದಂತೆ ಕೋವಿದರು ಅಸಕೃದಾವೃತ್ತಿರಭ್ಯಾಸ ಎಂದೆನ್ನುವರು.

ಈ ರೀತಿಯ ಶಾಬ್ದದೊಳಗೆ ಅಷ್ಟಮಿಕ ಯಮಕವನ್ನು ಸೇರಿಸಿ ಹೇಳುವಲ್ಲಿ ವ್ಯಾಖ್ಯಾತೃಗಳು ಅದಕ್ಕೆ ಆದಿಶಕ್ತಿ ಎನ್ನುತ್ತ ಸಿದ್ಧಾಂತವನ್ನು ಮಾಡಿದರು. ಪ್ರಾತಿಸ್ವಿಕ ಪ್ರಾಪ್ತಿಯಿಂದ ಫಲವ ಕೊಡುವುದನ್ನೇ ಮತ್ತೆ ಸೀಳುವುದುಚಿತವಲ್ಲದೆ ಮಿಕ್ಕ ಲೋಕ ರೂಢಿಯ ನಾಡಮಾತಿನ ಜಾಣ್ಮೆಯಿಂದ ಎಣಿಸುತ್ತ ಹಿರಿಯರು ಜಾರಿಕೊಂಡರು. ಈ ಕಾರಣದಿಂದಾಗಿ ಹೇಳಿದೆವು. ಪೌರಾಣಿಕನೆ ಬಸವಸದವಾಕ್ಯವನ್ನು ಅವಧಾನದಿಂದಾಲಿಸು. ಏಕೋತ್ತರದ ಚೆನ್ನವೀರದೇವನು ಪದಪದಂಗಳಲಿರುವ ಸಾರವಾದ ಅರ್ಥವನ್ನು ಹೃದಯಗೋಚರಮಾಡಿ ಈ ಅರ್ಥವನ್ನು ನಮ್ಮ ಪದದಿ ಚರಿಸುವ ಗಣಂಗಳಿಗೆ ಸಂಪ್ರೀತಿಯಿಂದ ಉಪದೇಶವನ್ನು ಮಾಡುವುದು.

ಯಾವ ಕಾವ್ಯದಲ್ಲಿ ಜಗದಾರಾಧ್ಯನಾದ ಮಹಾದೇವನ ವಿಷಯ ನಿರೂಪಿತ ವಾಗಿದೆಯೋ ಅದು ಎಲ್ಲರಿಂದಲೂ ಸೇವಿಸಲ್ಪಡುವುದು. ಅದನ್ನು ಸಂಪಾದನಾ

ಸಿದ್ಧವೀರೇಶನ ಕರುಣಾವಲಂಬ ಚೆನ್ನಮಲ್ಲಿಕಾರ್ಜುನನ ಕೃಪಾಪಾತ್ರನಾದ ಪರ್ವತೇಶನಿಗೆ ನಿರೂಪಿಸಿದನು. "ಈ ಕಾವ್ಯವನ್ನು ಸಂಪಾದಿಸಿದವರು ಈಶ್ವರನ ಕೃಪಾಕಟಾಕ್ಷಕ್ಕೆ ಒಳಗಾಗುವರು. ಭೂಲೋಕದಲ್ಲಿ ಅವರಿಗೆ ಶಾಶ್ವತ ಕೀರ್ತಿ ಲಭಿಸುವುದು." ಎಂದು ಗುರುದೇವರು ಪರ್ವತದೇವನ ಕನಸಿನಲ್ಲಿ ಉಸುರಲು ಅವರ ಆಣತಿಯಂತೆ ಈ ಕಾವ್ಯವನ್ನು ನಿರೂಪಿಸಿದೆ. ಈ ಕಾವ್ಯವನ್ನು ಪರಮ ಸಂಪ್ರೀತಿಯಿಂದ ವಾಚಿಸಿದವರ ಕೇಳಿದವರ ಕರ್ಮಗಳು ಕಳೆದು ಶುಭಫಲಗಳು ಪ್ರಾಪ್ತವಾಗುವುವು. ಅವರಿಗೆ ಗಣಪದವಿ ಪ್ರಾಪ್ತವಾಗುವುದು. ಈ ದಿವ್ಯವಾದ ಚತುರಾಚಾರ್ಯಚಾರಿತ್ರವನ್ನು ಭಕ್ತಿಯಿಂದ ಪಠಿಸಿದ ಸಂಪಾದನಾಗಣವರ್ಗಕ್ಕೆ ಪರಮೇಶ್ವರನ ದಿವ್ಯಾಂಗಸಾಮರಸ್ಯ ಉಂಟಾಗುತ್ತದೆ.

ಚತುರಾಚಾರ್ಯ ಚಾರಿತ್ರವು ಶಾಲಿವಾಹನ ಶಕದ ನವಚಂದ್ರರಸಶಶಿಗಳ ಈಶ್ವರಸಂವತ್ಸರದ ಮಾಘಪೌರ್ಣಿಮೆಯಂದು ಸಂಪೂರ್ಣವಾಯಿತು. ಅದಕ್ಕೆ ರಕ್ಷಕರು ಕಲ್ಯಾಣ ಪಟ್ಟಣದ ಬಸವಾದಿ ಪ್ರಮಥರು. ಅಭಿನವ ಪರಬ್ರಹ್ಮ ಸಂಪಾದನಾದೀಪಿತರಾದ ಚೆನ್ನಮಲ್ಲಿಕಾರ್ಜುನ ದೇವರ ಶಿಷ್ಯ ಪರ್ವತಾರ್ಯನಿಗೆ ಹೇಳಿದ ಸತ್ಕಥಾ ಚಾರಿತ್ರದಲ್ಲಿ ಆರುಕಾಂಡ ಮುಕ್ತಾಯವಾಯಿತು.

## ೩ ಕಾವ್ಯಸಮೀಕ್ಷೆ

ಚತುರಾಚಾರ್ಯಚಾರಿತ್ರ ಒಂದು ಉದ್ಧೃಕೃತಿ. ಕನ್ನಡ ಸಾಹಿತ್ಯಚರಿತ್ರೆಯಲ್ಲಿ ವಾರ್ಧಕಷಟ್ಪದಿ ಕಾವ್ಯಗಳ ಶ್ರೇಣಿಯಲ್ಲಿ ಗ್ರಂಥಬಾಹುಳ್ಯದಿಂದ ಬಹುಶಃ ಇದು ನಾಲ್ಕನೆಯ ಕೃತಿಯೆನಿಸುತ್ತದೆ. ವೀರಶೈವಧರ್ಮಪ್ರತಿಷ್ಠಾಪಕರೂ ಸಂವರ್ಧಕರೂ ಪ್ರಸಾರಕರೂ ಎನಿಸಿಕೊಂಡ ಪಂಚಾಚಾರ್ಯರಲ್ಲಿ ನಾಲ್ವರು ಆಚಾರ್ಯರ ಚರಿತ್ರೆಯನ್ನು ನಿರೂಪಿಸುವುದಾಗಿ ಈ ಕಾವ್ಯಕರ್ತೃ ಸಂಪಾದನಾಪರ್ವತೇಶ ಹೇಳಿಕೊಂಡಿದ್ದಾನೆ.

ಸಂಪಾದನಾಪರ್ವತೇಶ ಒಬ್ಬ ಸಂಪ್ರದಾಯಪ್ರಿಯನಾದ ಕವಿ. ವೀರಶೈವಾಚಾರ್ಯರ ಚರಿತ್ರೆಯನ್ನು ನಿರೂಪಿಸಿರುವ ಈತ ಭಕ್ತಿಭಾಂಡಾರಿ ಬಸವಣ್ಣ, ಪಟ್ಟಸ್ಥಲ ಬ್ರಹ್ಮಿ ಚನ್ನಬಸವ, ನಿತ್ಯನಿರುಪಮ ನಿರಂಜನ ನಿರ್ಮಾಯನಾದ ಪ್ರಭುದೇವ-ಇವರನ್ನು ವಿಶೇಷವಾಗಿ ಸ್ಮರಿಸಿದ್ದಾನೆ. ತೋಂಟದ ಸಿದ್ಧಲಿಂಗನನ್ನು ಆಲಂಕಾರಿಕವಾಗಿ ಹೀಗೆ ಸ್ತುತಿಸಿದ್ದಾನೆ.

ಲಿಂಗವೆನಿಪಮಲತೋಂಟಕ್ಕೆಯಾಚಾರವೆಂ
ಬಿಂಗಿತದ ಬೇಲಿಯಂ ತೆತ್ತು ಸ್ಥಾವರ ಜಂಗ
ಮಂಗಳೆನಿಸುವ ವನಕೆ ಏಕಂ ಏವ ಪರಬ್ರಹ್ಮವೆಂಬ ಬೀಜವನೆ ಬಿತ್ತಿ
ಕಂಗೊಳಿಪ ಮೂರಾರು ಮೂವತ್ತುಮೂರುತೆರ
ತುಂಗಯಿನ್ನೂರಹದಿನಾರು ಮೊದಲಹ ಪೂರ್ಣ
ಲಿಂಗಫಲದಮೃತಮಂ ಸವಿದು ಶರಣರ್ಗಿತ್ತ ಸಿದ್ಧಲಿಂಗನೆ ಜಯುಜಯು ॥

೧-೧-೧೮

ತನ್ನ ಗುರುವಾದ ಸಂಪಾದನಾಸಿದ್ಧವೀರೇಶನನ್ನು ಅತ್ಯಂತ ಶ್ರದ್ಧಾಭಕ್ತಿ ಪೂರ್ವಕವಾಗಿ ಕೊಂಡುಕೊನೆದಾಡಿದ್ದಾನೆ. ಅವರ ಪಾಂಡಿತ್ಯದ ಬಗೆಗೆ ಇರುವ ಅಪಾರ ವಾದ ಗೌರವಭಾವನೆಯನ್ನು ಈ ಮುಂದಿನ ಪದ್ಯಗಳಲ್ಲಿ ವ್ಯಕ್ತಪಡಿಸಿದ್ದಾನೆ.

ವರ ವೇದ ವೇದಾಂತತತಿ ಪುರಾಣಾಗಮ ಸಂ
ಸರಸನಾಟಕ ಕಾವ್ಯಮೀಮಾಂಸ ತರ್ಕ ವ್ಯಾ
ಕರಣ ಗೀರ್ವಾಣಶಾಸ್ತ್ರವನೋದುತಾನಾದಿವೀರಶೈವಾಚಾರದ
ನಿರುತ ಸಿದ್ಧಾಂತವಹ ಸಂಗ್ರಹವ ರಚಿಸಂತ್ತ
ಜರೆದು ಶೈವವ ವೀರಶೈವಮಂ ಸ್ಥಾಪಿಸಿದ
ಗುರುವರನ ಸಂಪಾದನಾ ಸಿದ್ಧವೀರೇಶನಮಲಪಾದಂಕೆಯಂಪ್ಪೆನು ॥

೧-೧-೨೦

ಜಸವೆತ್ತ ಸಂಯೆನಲ್ ಸಂಜೀವ ಪಾಯೆನ
ಲ್ಕಸಮ ಪಾವನಬ್ರಹ್ಮ ದಾಯೆಂನೆ ಮಹಾಶರಣ
ವಿಸರಕ್ಕೆ ಲಿಂಗಾಂಗದೈಕ್ಯಮಂ ಬೋಧಿಸುವಣಮೆ ಶಬ್ದವೆನಿಪ ಧಾತು
ಹಸನಾದ ಭವವ ನಷ್ಟವನೆಯ್ದಿಸುವುದಲಾ
ಕುಶಲದಕ್ಷರ ನಾಲ್ಕು ಶ್ರುತಿಶಾಸ್ತ್ರ ಸಿದ್ಧಾಂತ
ಶಶಿಕಲೋತ್ತಂಸ ಶ್ರೀಸಂಪಾದನಾ ಸಿದ್ಧವೀರಮಾವಿರತಶರಣು ॥

೧-೧-೨೧

ಸಂಪಾದನಾ ಪರ್ವತೇಶನಿಗೆ ತನ್ನ ಕಾವ್ಯದ ಬಗೆಗೆ ವಿಶೇಷವಾದ ಪೂಜ್ಯಭಾವನೆ ಇತ್ತು. ಆದುದರಿಂದಲೇ ತನ್ನ ಕಾವ್ಯದ ಉತ್ಕೃಷ್ಟತೆಯನ್ನು ಹೀಗೆ ಹೇಳಿದ್ದಾನೆ.

ಇದು ಕಣಾ ಪರಶಿವನ ಬೀಡು ಮುಕ್ತಿಯ ನಾಡು
ಇದು ಕಣಾ ಲಿಂಗಾಂಗಸದನ ಭಕ್ತಿಯ ವದನ
ವಿದು ಕಣಾ ಗುರುಶಿಷ್ಯರಮಳ ಮಂಕುರಂ ಸಂಕರನಿಕರದಾಮಳಕವು
ಇದು ಕಣಾ ಶರಣಜನದಾನಂದ ಸಂಧಾನ
ವಿದು ಕಣಾ ನವರಸದ ಹಕ್ಕೆ ಭಾವದ ತೆಕ್ಕೆ
ಇದು ಕಣಾ ಸತ್ಕವಿಯ ವಂಚ್ಚು ಕುಕವಿಗೆ ಕಿಚ್ಚು ಮಚ್ಚು ಬುಧಜನರ
ಪೆರ್ಚು ॥ ೧-೧-೩೪

ತನ್ನ ಕಾವ್ಯದ ಉತ್ಕೃಷ್ಟತೆಯನ್ನು ಸಾರುವುದರ ಜೊತೆಗೆ ಸಂಪ್ರದಾಯದಂತೆ ಕುಕವಿನಿಂದೆಯನ್ನೂ ಸಾಕಷ್ಟು ಮಾಡಿದ್ದಾನೆ. ತನ್ನ ಕೃತಿ ನಿರ್ದೋಷಯಂತವಾದುದು ಎಂದು ಹೇಳಿ ಅದನ್ನು ಜಳೆಯುವವರನ್ನು ಕಟುವಾಗಿ ಟೀಕಿಸಿದ್ದಾನೆ. ಚತುರಾಚಾರ್ಯ

ಚಾರಿತ್ರ ನವರಸಭರಿತವಾದುದೆಂದೂ ಪಸ್ತುಕ ವರ್ಣಕಪೂರ್ಣವಾದುದೆಂದೂ ಹೇಳಿಕೊಂಡಿದ್ದಾನೆ. ದೋಷಗಳೇನಾದರೂ ತನ್ನ ಕಾವ್ಯದಲ್ಲಿ ಕಂಡುಬಂದರೆ ಬುಧರು ಅವನ್ನು ತಿದ್ದಬೇಕೆಂದು ಪ್ರಾರ್ಥಿಸಿಕೊಂಡಿದ್ದಾನೆ. ನೀರಕ್ಷೀರನ್ಯಾಯದಂತೆ ತನ್ನ ಕಾವ್ಯವನ್ನು ಪರಿಗಣಿಸಬೇಕೆಂದೂ ಏಕೆಂದರೆ ಅದು "ವೇದ ಪೌರಾಣಾಗಮಾದಿ ಶಾಸ್ತ್ರದಿರವಿನೊಳಗುಳ್ಳ ಶಿವಜ್ಞಾನರಸಗಂಧದಿಂ" ರಚಿತವಾದುದೆಂದೂ, ಇಂತಹ ಕಾವ್ಯವನ್ನು ಆಚಾರ ನಾಸ್ತಿಕಹೀನರು ಅರಿಯಬಲ್ಲರೆ ಎಂದೂ ಪ್ರಶ್ನಿಸಿದ್ದಾನೆ. ಅನ್ಯರಿಂದ ಕೃತಿಯನ್ನು ಹೇಳಿಸಿ ಅದಕ್ಕೆ ತನ್ನ ಹೆಸರನ್ನಿಟ್ಟುಕೊಳ್ಳುತ್ತಿದ್ದವರನ್ನೂ ಅಂತಹ ಕೃತಿಗಳನ್ನೂ ಪರ್ವತೇಶ ಗಮನಿಸಿದಂತೆ ಕಾಣುತ್ತದೆ. ಆದ್ದರಿಂದ ಕೃತಿಚೌರ್ಯದ ಬಗೆಗೆ ಕಟುವಾಗಿ ಟೀಕಿಸಿದ್ದಾನೆ.

ಸಂಪಾದನಾ ಪರ್ವತೇಶನಿಗೆ ತನ್ನ ಕೃತಿಯ ನಾಯಕರಾದ ಚತುರಾಚಾರ್ಯರ ಬಗೆಗೆ ಅಪಿಂತವಾದ ಭಕ್ತಿ ಶ್ರದ್ಧೆ ಗೌರವಾದರಗಳಿರುವುದು ಕಂಡುಬರುತ್ತದೆ. ತನ್ನ ಕೃತಿಯ ಹೆಸರು ಚತುರಾಚಾರ್ಯಚಾರಿತ್ರ ಎಂದಿದ್ದರೂ ರೇಣುಕ. ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ, ವಿಶ್ವಾರಾಧ್ಯ ಈ ಪಂಚಾಚಾರ್ಯರನ್ನು ಸ್ತುತಿಸಿದ್ದಾನೆ, ಸ್ಮರಿಸಿದ್ದಾನೆ, ಹಾಡಿ ಹೊಗಳಿದ್ದಾನೆ. ಒಂದೊಂದು ಪದ್ಯದಲ್ಲಿ ಅವರ ಮೂರ್ತಿಗಳನ್ನು ಕಟೆದು ನಿಲ್ಲಿಸಿದ್ದಾನೆ.

ಕಮಲಧರನೊಳ್ ಪುಟ್ಟಿ ಕಲಶಜಂಗರುಹಿ ಹರಿ
ಯಮಲ ನಿಜವೀರ್ಯದಿಂ ನಿಲಿಸಿ ತೆಲ್ಲಿಗ ಮಾಯೆ
ಮಮತೆಯಿಂ ಸಲಹಿ ಲಂಕೆಯೊಳಂ ಲಿಂಗವ ನಿಲಿಸಿ ಯಕ್ಷರಂ ಸುಟ್ಟುರಂಪುತೆ
ಅಮಮ ಸ್ಪರ್ಶನದಿಂದಲರುಹಿ ರಾಜಗೆ ಮಹಿಮೆ
ಯಮರ್ದುಂಡು ಗೋರಕ್ಷಗಸುಪಿತ್ತನಂತಪಶು
ರಮಣಿಯರ ಪೊರೆದಪ್ಪಮೂರ್ತಿ ಭರ್ಗನೊಳೈಕ್ಯವಾದ ರೇಣುಕ
ಜಯ ಜಯ ॥ ೧–೧–೫೦

ದುರುಳರಹ ಗಂಧರ್ವ ಯಕ್ಷಮುಖ ಸುರನಾಗ
ನರರ ಲೋಕಾಲೋಕ ಸಚರಾಚರಂಗಳಂ
ಇರದಗ್ನಿನೇತ್ರದುರುಳಿಗಳಿಂದ ದ್ರುಹಿಣಾಂಡಮಂ ಭಸ್ಮಮಂ ಮಾಡುಂತ
ಗರಳಗಳ ಚಿತಭಸ್ಮಲೇಪನಾಸ್ಥಿಯಮಾಲೆ
ಕೊರಲೊಳಂಕಿಸಿ ಮರುಳತಂಡ ಸಹ ಬಿನದಿಸುವ
ಮರುಳಸಿದ್ಧೇಶ್ವರನೆ ನವಕೋಟಿಸಿದ್ಧ ಪ್ರಸಿದ್ಧ ಹೃತ್ಸಿದ್ಧಗುರುವೆ ॥
೧–೧–೫೭

ಆಕಾಶಕೇಶ ನಾಕೇಶವಂದಿತಪಾದ
ಲೋಕೇಶ ಪಂಚಮಶಿರಚ್ಛೇದ ಮಹಕಾಳ
ಲೋಕೇಶ ಕಾದ್ರವೇಯ ಮಹಾವಿಭೂಷ ಭೂಗಗನಸಂಭರಿತಭಾಷ
ಪಾಕಾರಿಯನುಜೇಷ್ಟ ಸಾಕಾರ ರೂಪೇಷ್ಟ
ಏಕವಿವೋ ರುದ್ರನೆನಿಪ ಶ್ರುತಿಸಿದ್ಧನಹ
ಏಕರಾಮಾರಾಧ್ಯ ಲೋಕವಿಶ್ರುತಪಾದ್ಯ ಸಾಕಂ ಮೂಲೋಕದೊಡೆಯ ॥

೧-೧-೫೨

ಪುಂಡರೀಕಾಕ್ಷಾದಿ ದೇವಪ ಮೃಕಂಡಂ ಮಹ
ದಂಡಿ ಶಾಂಡಿಲ್ಯ ಕೌಂಡಿನ್ಯ ಪೂಜಿತಪಾದ
ಪುಂಡರೀಕೇಕ್ಷುಕೋದಂಡಖಂಡನ ದಂಡಧರ ಕಮಲವೇತಂಡನೆ
ಲಂಡಿ ಬೌದ್ಧಾದಿ ಮತಧ್ವಾಂತಮಾರ್ತಾಂಡ ಪ್ರ
ಮಂಡನ ಶಿವೈಕ್ಯಮತ ಕುಂಡಲಿಯ ವಿದ್ಯಾಘ
ದಂಡನನೆ ಶಿವ ಪಂಡಿತಾರಾಧ್ಯ ಕೊಡು ಚಾರುಬುದ್ಧಿಯಂ ನಿನ್ನ ಕೃತಿಗೆ ॥

೧-೧-೫೩

ಗುರು ಚತುರ್ವಿಧ ಮಧ್ಯದೊಳ್ ನಿಂದ ವರಗುರುವೆ
ಪರಮೇಶ್ವರನೆ ಗುಣಾತೀತನೇ ನಿರುಪಮನೆ
ಗುರುವೆಯಾನತಕಲ್ಪತರುವೆ ಜ್ಞಾನಾಮೃತಗಳಿರವೆಯಮರರ ಧೇನುವೆ
ಗುರುವೆ ಮುಕ್ತಿಯ ಕೊಡುವ ಚಿಂತಾಮಣಿಯೆ
ಗುರುವೆ ಯುಕ್ತಿಯ ಸಾಣೆವಿಡಿದ ಪರುಷದ ಕಣಿಯೆ
ಗುರುವೆ ವಿಶ್ವಾರಾಧ್ಯ ವಿಶ್ವಿತಾನಂದವಿತ್ತನವರತ ಪೊರೆವುದೆನ್ನಂ ॥

೧-೧-೫೪

ಸಂಪಾದನೆಯ ಪರ್ವತೇಶ ಪ್ರತಿಸಂಧಿಯ ಪ್ರಾರಂಭದಲ್ಲಿ ಇಷ್ಟದೇವತಾ ಪ್ರಾರ್ಥನೆಯಾದ ಮೇಲೆ ಎರಡನೆಯ ಪದ್ಯದಲ್ಲಿ ಒಬ್ಬೊಬ್ಬ ಪುರಾತನ ನೂತನ ಶಿವ ಶರಣರನ್ನು ತಪ್ಪದೆ ಸ್ಮರಿಸಿದ್ದಾನೆ. ಕೆಲವೊಂದು ಕಡೆ ವಚನಕಾರರನ್ನೂ ಸ್ತುತಿಸಿದ್ದಾನೆ. ಅವರ ಹೆಸರುಗಳು ಅನುಕ್ರಮವಾಗಿ ಇಂತಿವೆ : 1 ಸಿದ್ಧರಾಮ 2 ಸಕಲೇಶಮಾದರಸ 3 ನನ್ನಯ್ಯ 4 ವಾಗೀಶ 5 ಕನ್ನದ ಬ್ರಹ್ಮ 6 ಸೌಂದರ ಗಣೇಶ 7 ಬಾಚಿದೇವ 8 ರುದ್ರಪಶುಪತಿ 9 ಮಲಯರಾಜೇಂದ್ರ 10 ಇರಿಭಕ್ತ 11 ತಿರುನೀಲಕಂಠ 12 ಮಲ್ಲಿನಾಥ 13 ಮಾನಕಂಜಾರ 14 ಗುಂಡಬ್ರಹ್ಮಯ್ಯ 15 ಪಂಡಿತಾರಾಧ್ಯ 16 ಹಲಾಯುಧ 17 ಬಿಬ್ಬಿಬಾಚಯ್ಯ 18 ಸತ್ಯಕ್ಕ 19 ಸೂರಸಾನಾಂಬೆ 20 ಭೋಜ 21 ಉದ್ಭಟ 22 ಕಾಳಿ 23 ಶ್ರೀಪತಿಪಂಡಿತ 24 ಬಾಹೂರಬ್ರಹ್ಮಯ್ಯ 25 ಕಲಕೇತಿ 26 ಸಂಕಣ್ಣ 27 ಪಾಲ್ಕುರಿಕೆ ಸೋಮೇಶ 28 ಕೇಶಿರಾಜ 29 ಗುಪ್ತಮಂಚಣ್ಣ

30 ಪದ್ಮರಸ 31 ಹಡಪದಪ್ಪಣ್ಣ 32 ಸುಜ್ಞಾನಿ 33 ಘಟ್ಟಿವಾಳ 34 ತಿರುನಾಳ್ಪೋವ 35 ಚಾಮಲಾಂಬಿಕೆ 36 ಧರ್ಮಯ್ಯ 37 ರಾಜೇಂದ್ರ ಚೋಳ 38 ಸಿಂಧುಬಲ್ಲಾಳ 39 ನೈಸರು 40 ಹರೀಶ್ವರ 41 ದಂಡಿ 42 ಸುರಗಿಯ ಚೌಡಯ್ಯ 43 ಬಂಕಯ್ಯ 44 ಮಯೂರ, ಬಾಣ 45 ವೀರಶಂಕರ 46 ಸೋವಣ್ಣ 47 ದಿಂಡುಗೂರನಾಗ 48 ಭೈರವಾಂಕ 49 ಓಹಿಲ ಉದ್ಭಟ ಪಾಂಡ್ಯ ಹಲಾಯುಧ ಸಾಮವೇದಿ ಮಲಯರಾಜ 50 ಬಸವರಾಜ.

ಚತುರಾಚಾರ್ಯಚಾರಿತ್ರದ ಪ್ರಥಮಕಾಂಡದಲ್ಲಿ ಇಷ್ಟದೇವತಾಪ್ರಾರ್ಥನೆ ಗುರುಪರಂಪರೆಯ ಸ್ತುತಿ ಕುಕವಿನಿಂದೆ ಕಾವ್ಯದ ಉತ್ಕೃಷ್ಟತೆಯನ್ನು ನಿರೂಪಿಸಿದ ಮೇಲೆ ಕಥಾರಂಭ ಮಾಡಲಾಗಿದೆ. ಕೈಲಾಸದ ವರ್ಣನೆ, ಶಿವನ ರೀತಿ ಶಿವ ಪ್ರಮಥರುಗಳ ಸಮಾಖ್ಯೆಯನ್ನು ಕವಿ ವಿವರವಾಗಿ ಮಾಡಿದ್ದಾನೆ. ಶಿವನ ಆಸ್ಥಾನದ ವರ್ಣನೆ ಕಣ್ಣಿಗೆ ಕಟ್ಟುವಂತಿದೆ. ಶಿವನು ತನ್ನ ಗಣಾನೀಕದೊಳಗೆ ಅಗ್ರಗಣ್ಯರೂ ಶ್ರುತಿಪುರಾಣಾಗಮ ಪ್ರಶಸ್ತರೂ ಶಾಶ್ವತಾನಂದೇಷ್ಟಫಲದಾತರೂ ಆದ ಚತುರಾಚಾರ್ಯರಿಗೆ ಭೂಲೋಕಕ್ಕೆ ಹೋಗಿ ವೀರಶೈವೋಪದೇಶವನ್ನು ಮಾಡುತ್ತ ಧರೆಯನ್ನು ಪಾವನಮಾಡುವಂತೆ ಆಜ್ಞಾಪಿಸುವನು. ಅದರಂತೆ ಚತುರಾಚಾರ್ಯರು ಸಾಂಬಲೋಕದಿಂದ ಹೊರಟು ಅನೇಕ ಲೋಕಗಳನ್ನು ಸಂದರ್ಶಿಸಿಕೊಂಡು ಭೂಲೋಕಕ್ಕೆ ಬರುತ್ತಾರೆ. ಕಾಶಿ ಮುಂತಾದ ಶಿವನಿಲಯಗಳನ್ನು ಸಾರಿ ಸ್ವಯಂವ್ಯಕ್ತಲಿಂಗಗಳಿಂದ ಅವತರಿಸುವರು. ಅವರೇ ಪಂಡಿತಾರಾಧ್ಯ, ಏಕೋರಾಮ, ಮರುಳಸಿದ್ಧ ಮತ್ತು ರೇವಣಸಿದ್ಧ. ಈ ಕಾಂಡದ ನಾಲ್ಕು ಐದು ಆರು ಮತ್ತು ಏಳನೆಯ ಸಂಧಿಗಳಲ್ಲಿ ಕಳವೆಯ ಹೊಲಗಳು ಪಾಮರಿಯರು, ಕಮಲಾಕರ, ಅರವಟಿಗೆ, ವಾರನಾರಿಯರು, ಛತ್ರಶಾಲೆ, ಪಾಂಥಜನ, ತಾಂಬೂಲದ ಅಂಗಡಿಗಳು, ಕಂಚುಗಾರ ಗಂದಿಗರ ಪಸರಗಳು, ಸೂರ್ಯೋದಯ, ಸೂರ್ಯಾಸ್ತ ವೇಶ್ಯಾವಾಟ–ಇವೇ ಮೊದಲಾದುವನ್ನು ವಿಶೇಷವಾಗಿ ವರ್ಣಿಸಿದ್ದಾನೆ. ಇದು ವರ್ಣಕ ಕಾವ್ಯವೂ ಹೌದು ವಸ್ತುಕ ಕಾವ್ಯವೂ ಹೌದು ಎಂಬುದನ್ನು ಪರ್ವತೇಶ ಸಮರ್ಥಿಸಿಕೊಂಡಿದ್ದಾನೆ. ಕೆಲವೊಂದು ನಿದರ್ಶನಗಳನ್ನು ನೋಡಬಹುದು.

ಗಂಧಶಾಳಿಗೆ ಎರಗುತ್ತಿದ್ದ ಗಿಳಿಗಳನ್ನು ಓಡಿಸುತ್ತಿದ್ದ ಪಾಮರಿಯರ ಒಂದು ಚಿತ್ರ.

ಬಿಂಬಯುತ ಗಂಧಶಾಳಿಯ ಗರ್ದೆಗೆರಪ ಗಿಳಿ
ಬಂಬಲ್ಗಳಂ ತೆಮರುತಿರೆ ಮೇಲುದಂ ಜಾರಿ
ಕಂಬುಕಂಠದೊಳಿಟ್ಟ ಶಂಖಹಾರಂ ಪರಿದು ಚೆಲ್ಲೆ ಚಾತಕದವಿಂಡು
ಅಂಬುದದ ಪನಿಗಳಿವ ಸೇವಿಸುವೆನೆನಲಾ ನಿ
ತಂಬಿನಿಯ ಮುಡಿಯಳಿಯಲುದಿರ್ದ ಮಲ್ಲಿಗೆಯರಲ್
ಬಿಂಬದಂತೆಸೆಯೆ ರೋಲಂಬಯೆರಗಲ್ ಚಂದ್ರಲಾಂಛನದೊಳಿರ್ದುವವಮುವಂ ॥
೧–೪–೧೩

ವೇಶ್ಯಾವಾಟದ ವರ್ಣನೆಯು ಏಳನೆಯ ಸಂಧಿಯನ್ನು ಪೂರ್ತಿಯಾಗಿ ಆಕ್ರಮಿಸಿ ಕೊಂಡಿದೆ. ಪ್ರಾಚೀನಕಾವ್ಯಗಳಲ್ಲಿ ಸೂಳೆಗೇರಿಯ ವರ್ಣನೆ ಒಂದು ಅಪರಿಹಾರ್ಯ ವಾದ ಅಂಗವಾಗಿತ್ತು. ಕಾವ್ಯದ ವಸ್ತು ಯಾವುದೇ ಆಗಿದ್ದರೂ ವೇಶ್ಯಾವಾಟದ ವರ್ಣನೆ ಯನ್ನು ಮಾತ್ರ ತಪ್ಪದೆ ಮಾಡುತ್ತಿದ್ದುದು ಕಂಡುಬರುತ್ತದೆ. ಪರ್ವತೇಶ ಇದಕ್ಕೇನೂ ಅಪವಾದವಾಗಿಲ್ಲ.

ದ್ವಿತೀಯಕಾಂಡ ಪೂರ್ತಿ ರೇವಣಸಿದ್ಧನಿಗೇ ಮೀಸಲಾಗಿದೆ. ರೇವಣಸಿದ್ಧ ಮಲಯಾಚಲವನ್ನು ಹೊಕ್ಕು ಅಲ್ಲಿಂದ ಚಂದನಗಿರಿಗೆ ಬಂದಾಗ ಅಗಸ್ತ್ಯನು ರೇವಣ ಸಿದ್ಧನನ್ನು "ಶಿವನಂ ಮಂದರಾದ್ರಿಯಲ್ಲಿ ಪ್ರಮಥರಿಗೆ ಬೋಧಿಸಿದ ಪರಮರಹಸ್ಯವನ್ನು ನಿರೂಪಿಸುವಂತೆ" ಪ್ರಾರ್ಥಿಸಿಕೊಂಡನು. ಆಗ ರೇವಣಸಿದ್ಧ "ಅತಿಬಾಹುಲ್ಯವಾದ ಪರಮರಾಹಸ್ಯವನ್ನು ಕರಿಯನ್ನು ಕನ್ನಡಿಯಲ್ಲಿ ಕಾಣಿಸುವಂತೆ" ಬೋಧಿಸುವನಂ. ಸ್ಥಲ ವಿಚಾರಗಳನ್ನು ವಿವರವಾಗಿ ತಿಳಿಸಿಕೊಡುವನು.

ಮಲಯಾಚಲದ ವರ್ಣನೆ ತುಂಬ ಮೋಹಕವಾಗಿದೆ. ಆ ಪರ್ವತದ ಬೇಡ ಬೇಡಿತಿಯರ ವರ್ಣನೆ, ಮೃಗಪಕ್ಷಿಗಳ ವರ್ಣನೆ, ರಾಘವಾಂಕನ ಹರಿಶ್ಚಂದ್ರಕಾವ್ಯದ ವರ್ಣನೆಗಳನ್ನು ನೆನಪಿಗೆ ತರುತ್ತದೆ. ಒಂದೆರಡು ಪದ್ಯಗಳನ್ನು ದೃಷ್ಟಾಂತಕ್ಕಾಗಿ ನೋಡಬಹುದಂ. ವಿವಿಧ ಜಾತಿಯ ಹಕ್ಕಿಗಳ ಚಿತ್ರ ಇದು :

ಪಾರಿವಾಳವು ಕೊಕಿ ಹಂಗ ಶಂಕ ಪಿಕ ಕೇಕಿ
ಕಾರಂಡ ಕೆಂಬೂತ ಕಾಗೆ ತಿತ್ತಿರಿ ಹರಡೆ
ಸಾರಸಂ ಹದ್ದು ಗಿಡುಗಂ ಬಿಜ್ಜು ಗರುಡ ರಣಹದ್ದು ನಾಡಾಡಿ ಹದ್ದು
ಚೀರಿಕೆ ಚಕೋರ ಕುರರಂ ಹಂಸ ಟಿಟ್ಟಿಭಂ
ಗೇರಂಜ ಕೆಂಪಲಾವುಗೆ ಕಾಡೆ ಶಿಪಿಲೆ ಕ
ಮ್ಮಾರಕಾಗೆಯುಂ ಕೊಂಗ ಕಾಡ್ಕೋಳಿ ಪಿಕ್ಕಳಂ ಕಬ್ಬಕ್ಕಿಗಳ್ ಮೆರೆದವು ॥

೨-೧-೧೭
(ಹರಿಶ್ಚಂದ್ರ ಕಾವ್ಯಂ ೫-೪೩ ನೋ)

ಬೇಡರು ಮತ್ತು ಅವರ ಬಲೆಗಳ ಚಿತ್ರ.

ಬೀಸುವಲೆ ಸವಡಿವಲೆ ತೊಡರುವಲೆಯೊಡ್ಡುವಲೆ
ಹಾಸುವಲೆ ಕಟ್ಟುವಲೆಯುಳಿವಲೆ ಪರಂಪುವಲೆ
ಸೂಸುವಲೆ ದಡಿವಲೆಗಳಿಂದ ಜಗಿರಿನ ಕೋಲ್ಗಳಿಂದ ಜಗಿರಿನ ಜವಳೆಯಿಂ
ಹಾಸನೂರಿದ ನಾಯ್ಗಳಿಂದ ಗಿಡುಗಗಳಿಂದ
ಪೈಸರದ ತುಂಡು ಡೊಣ್ಣೆಗಳಿಂದ ನಾರನಿಡು
ಕಾಸೆಗಳ ಚಲ್ಲಣಗಳಿಂ ತೊಗಲ್ಟೋಪಿಯಿಂದೊಪ್ಪಿತಲ್ಲಿರುವ ಬೇಡಂ ॥

೨-೧-೧೮
(ಹರಿಶ್ಚಂದ್ರ ಕಾವ್ಯಂ ೫-೮ ನೋ)

ಕಾಂಚಿಪುರಕ್ಕೆ ಬಂದ ರೇವಣಸಿದ್ಧ ವೇಷವನ್ನು ಬದಲಿಸಿ ಬಾಲಕನಂತೆ ಚೇಷ್ಟೆ ಮಾಡುತ್ತ ಹರುಕುಬಟ್ಟೆ ಧರಿಸಿ, ಮರುಳನಂತಿದ್ದನು. ಅವನು ತಾನು ಪಿಣ್ಣಾಕನೈನಾರ್ ಎಂದು ಕೂಗಿ ಸಾರುತ್ತ ಭಿಕ್ಷೆಬೇಡುತ್ತ ಶಿವಕಂಚಿಯಿಂದ ವಿಷ್ಣುಕಂಚಿಗೆ ಬಂದನು. ಪಿಣ್ಣಾಕನೈನಾರನ ವೇಷಭೂಷಣಗಳು ಈ ರೀತಿ ಇದ್ದುವಂತೆ :

ಸಣ್ಣನಹ ದೊಡ್ಡನಹ ಗುಡ್ಡನಹ ಪರಿಪರಿಯ
ಬಣ್ಣಗಳ ನಟಿಸುವಂ ಜೀರ್ಣ ಕಂಥೆಯ ಧರಿಸಿ
ಕಣ್ಣಿನಲಿ ಜಾರಂತಲೆಗೆದರುತಾ ಪಣೆಯ ಮೇಲ್ಕುಣಿವ ಕುರುಳುಗಳಂ ನೋಡೆ
ಮಣ್ಣುಮಸಿವತ್ತಿದಂಗದ ಜೋರಿನಿಂ ತಾನಂ
ಪಿಣ್ಣಾಕನೈನಾರೆನಂತ್ತ ಕುಣಿಯಲ್ ಜನರಂ
ದಣ್ಣನೆ ದಣಿದಂ ನಗುತಂ ನೋಡಿ ಬೆರಗಾಗಲಲ್ಲೆಸೆದನಾನಂದದಿಂ ॥
೨-೩-೩೩

ರೇವಣಸಿದ್ಧ ವಿಷ್ಣುದೇವಾಲಯದ ಪ್ರತಿಮೆಗಳನ್ನು ನೋಡಿ ಗಹಗಹಿಸಿ ನಗಲು ಅದನ್ನು ನೋಡಿದ ವೈಷ್ಣವರು ಅವನನ್ನು ಹಿಡಿದುಕೊಂಡು ದಂಡಿಸುವ ಪ್ರಕರಣ ಅತ್ಯಂತ ಸ್ವಾರಸ್ಯವಾಗಿದೆ.

ಆ ಗುಡಿಯ ವೈಷ್ಣವರ್ ಬಂದು ನಗುತಂ ಬಿಡದೆ
ಬೇಗ ನೀನಾರಡಾಯಿಂಗೆವಂದೇನೆನ
ಲ್ಯಾಗ ವೊಡಲ್ಕವರು ಪಿಡಿತಂದು ತಮ್ಮ ತೇವರಿಕೆ ಗುಮ್ಮಟಲಲ್ಲಲೆ
ಈಗ ದಂಡಂ ಮಣಿಯೆನುತ್ತ ಬಗ್ಗಿಸಿ ಕೆಡಹೆ
ಯೋಗಿವರ್ಯನನಾಗಲಚ್ಯುತಂ ಬೆಚ್ಚುತ್ತ
ರಾಗದಿಂ ಪೊರಮಟ್ಟು ಪಿಂದಕ್ಕೆ ನೋಡಿಯೋಡುತ್ತ ಬಯಲಾದನಮಮ ॥
೨-೩-೩೭

ಅಡಲಡಾ ಪುಡುಪುಡಂಚಿಕೋ ಎಂದು ಬಂದವರು
ತಡಹಿ ಕಾಣದೆ ಪೆಡಂಮಟ್ಟು ಪೋಗಲ್ಕಾಗ
ಜಡಜಾಕ್ಷನಹ ಕಾಂಚಿವರದನಾ ಪ್ರತಿಮೆಯದ್ಭುತದಿಂದೆ ಗಡಬಡಿಸಂತ
ನಡನಡುಗುವಂದವಂ ಕಂಡು ವೈಷ್ಣವರಾಗ
ಮೃಡನಲ್ಲದೀ ಪುಚ್ಚು ಬೇರೊಬ್ಬನಲ್ಲಮೆಂ
ದಡಿಗಡಿಗೆ ಹೆದರಿ ಶಿವದ್ರೋಹಮೆಂದವರು ಮನೆಗಳ ಪೊಕ್ಕರ ತಿಭಯದಲಿ॥
೨-೩-೩೮

ವೈಷ್ಣವರ ಭಾಷೆಯನ್ನೇ ಕವಿ ಬಳಸಿರುವುದು ಆವನ ಅನ್ಯಭಾಷಾಪ್ರಾವೀಣ್ಯಕ್ಕೆ ನಿದರ್ಶನವಾಗಿದೆ. ಕವಿಗೆ ಕನ್ನಡ ಸಂಸ್ಕೃತ ಭಾಷೆಗಳ ಜೊತೆಗೆ ತಮಿಳು ಭಾಷೆಯ ಪರಿಚಯವಿದ್ದುದಂ ಸ್ಪಷ್ಟವಾಗಂತ್ತದೆ.

ಅಲ್ಲಿಂದ ರೇವಣಸಿದ್ಧ ಮಂಗಳವಾಡಕ್ಕೆ ಬಂದು ಕಲ್ಲಿಸೆಟ್ಟಿಯ ಮನೆಯಲ್ಲಿ ಗಾಣ ಹೊಡೆಯುವ ಕೆಲಸ ಕೈಕೊಂಡನು. ಈ ಕಾಯಕವನ್ನು ಕವಿ ಅತ್ಯಂತ ಆಲಂಕಾರಿಕವಾಗಿ ಬಣ್ಣಿಸಿದ್ದಾನೆ:

ವನಜಸಂಭವನಂಡಗಳ ಸಮೂಹಂಗಳಂ
ಬಿನದದಿಂ ಸಲಹುತಿರ್ಪನುಪಮನು ಸಿಟ್ಟಿನಿಂ
ವಿನಯದಿಂದೆನ್ನ ರಕ್ಷಿಸಬೇಹುದೆನಲು ವುಣಲಿಕ್ಕಿ ಗಾಣವ ಹೊಡೆಯೆನೆ
ಘನಮಹಿಮನಾ ಜ್ಞಾನಪೂರ್ವಸತ್ಕರ್ಮಮೆಂ
ಬನುವಾದ ಬಾರುಕೋಲಿಂದ ಮುಂದುಜೀವನಹ
ಬಿನುಗೆತ್ತ ಒಡಿದು ಪರಿಭವವೆಂಬ ಗಾಣಮಂ ಸುತ್ತಿ ಪೊತ್ತಿರುಗಿಸಿದನು ॥

೨-೩-೭೩

ನರಸುರೋರಗ ಮುಖ್ಯ ಜೀವರಾಶಿಗಳೆಂಬ
ಪರಿಮಿತದ ತಿಲಗಳಂ ಯೋನಿಯಂತ್ರದೊಳಾಡಿ
ಪರಮಸಂಜ್ಞಾನರಸಮಂ ಹಿಳಿದು ತೆಗೆವಂತೆ ಎಣ್ಣೆಯಂ ತೆಗೆದು ಬಿಡದೆ
ಅರರೆ ನಿಸ್ಸಾರ ಪ್ರಾರಬ್ಧದುಷ್ಕರ್ಮಮೆಂ
ಬರುತರದ ಹಿಂಡಿಯಂ ತೆಗೆದೊಡಲ ಗಾಣಮಂ
ಭರದಿಯಾಡಂತ್ತಿರ್ದ ಶಿವಸಿದ್ಧಕುಲಲಲಾಮಂ ಮಹಾತೆಲ್ಲಿಗನೊಳು ॥

೨-೩-೭೪

ರೇವಣಸಿದ್ಧನಿಂದ ಕಲ್ಲಿಸೆಟ್ಟಿಗೆ ಇಹಪರಗಳ ದೃಷ್ಟಿಭಾಗ್ಯ ದೊರಕೊಂಡಿತು.

ರೇವಣಸಿದ್ಧ ಬಿಲ್ವವನವನ್ನು ಪ್ರವೇಶಿಸಿದಾಗ ಅಲ್ಲಿದ್ದ ವೀರಶೈವ ಶರಣರು ತಾವೂ ಆತನೊಡನೆ ಬರುವುದಾಗಿ ಕೇಳಿಕೊಂಡಾಗ:

ಎಲೆ ಸಂಗಮೇಶ ನಂದೀಶನೇ ಮರ್ತ್ಯದೊಳ್
ಸಲೆ ವೀರಶೈವ ಶಿವಮತವನುದ್ಧರಿಸಲ್ಕೆ
ಬಲವಂತ ಬಸವಾಭಿಧಾನಮಂ ವಹಿಸಿ ಪ್ರಮಥರ ಕೂಡುತಾನಂದದಿಂ

ನೆಲೆಯಾಗಿ ಮುಂದೆ ಕಲ್ಯಾಣದೊಳ್ ನೆಲಸುವಂ
ಪೊಲವಿನಿಂದಾ ಸಮಯಂಕೈದುವದೆನುತ್ತವರ
ತಲೆದಡಹಿ ನಿಲಿಸಿ ಮುಂದಕೆ ಬರಲ್ ಪಾತಾಳಗಂಗೆಯಂ ಕಂಡು ನಲಿದಂ ॥
೨-೪-೭೧

ಈ ರೀತಿ ಅವರಿಗೆ ಹೇಳಿ ಸಮಾಧಾನಪಡಿಸುವನು. ಆಮೇಲೆ ಮಲ್ಲಿಕಾರ್ಜುನನ ದರ್ಶನ ಮಾಡಿದಾಗ ಶಿವನು ಪ್ರತ್ಯಕ್ಷನಾದುದನ್ನು ಕಂಡ ರೇವಣಸಿದ್ಧ ಪ್ರಾರ್ಥಿಸಿ ಕೊಂಡದ್ದು ಹೀಗೆ.

ಸಲೆ ನೋಡಿ ನಲಿದು ವಂದಿಸಿ ಕಂಗಳೊಳು ಹರುಷ
ಜಲಕಣಂ ಥಳಥಳನೆಯಿಳಿಯೆ ದೇಹಂ ಬಳೆಯೆ
ವೊಳೆಯೆ ಪುಳಕಾಂಕುರಂ ಘರ್ಮಾಂಬುಸುರಿಯೆ ಸೈಗರೆಯೆ ಮನವಾನಂದದಿಂ
ಚಲಿಸೆ ಕಂಪನದಿ ತನು ಗದ್ಗದ ಸುಕಂಠದಿಂ
ದುಲಿದಂ ಪೇಳಿದ ಸಾಂಬ ಶಾಂತಮಲ್ಲೇಶ್ವರನೆ
ಲಲಿತ ಶಾಂಭವಲೋಕಕಾಂ ಬಹೆನೆನಲ್ಕೆ ನಸುನಗುತಪ್ಪಿ ಮುಂಡಾಡುತೆ ॥
೨-೪-೭೫

ಆದಕ್ಕೆ ಶಿವನು ''ಮುಂದಚಲ ಮಹಾತ್ಮಪದದ ಮಹಿಮೆಯು ನಿನ್ನ ಕಂದ ನಿಂದಾಗಬೇಹುದು. ಇಲ್ಲಿಗೆ ಸಪ್ತಶತವರ್ಷ ಪ್ರಚ್ಛನ್ನವೇಷದಿಂದ ಸಂದಿತು. ಇನ್ನು ನಿಜವೇಷದಿಂದ ಅಷ್ಟಸಿದ್ಧಿಯನ್ನು ಕೊಡುವ ಅಕ್ಷಯಪಾತ್ರೆ ಬಲಮುರಿಶಂಖ ಇವೇ ಮೊದಲಾದುವನ್ನು ಹೊಂದಿ ಯತಿರಾಜನಾಗಿ ನೀನು ಚೋಳ ಮಲಯಾಳ ಕುಂತಳ ಮಗಧ ಮಾಳವ ಮಹಾರಾಷ್ಟ್ರ ಪಾಂಚಾಳ ಕಳಿಂಗ ಅಂಗ ವಂಗ ದೇಶಾದಿ ರಾಜ ಪುತ್ರಿಯರನ್ನು ಮದುವೆಯಾಗಿ ವೀರಶೈವವನ್ನು ಧರೆಗೆ ಪಸರಿಸುತ್ತ ಮಂಗಳವಾಡ ದೊಳಗೆ ನೆಲಸಂ'' ಎಂದು ಹೇಳಿ ಅಂತರ್ಧಾನನಾದನು. ಆದರಂತೆ ರೇವಣಸಿದ್ಧ ಮಂಗಳವಾಡದಲ್ಲಿ ನೆಲಸಿ ಅನೇಕ ರಾಜಪುತ್ರಿಯರನ್ನು ಮದುವೆಯಾದದ್ದು; ಮಾಸ ನೂರಿನ ಮಡುವಿನಿಂದ ಸುರಗಿಯನ್ನು ಹೊರತೆಗೆದದ್ದು; ಖರ್ಪರ ಬಲಿಗಾಗಿ ಏರ್ಪಡಿ ಸಿದ್ದನ್ನು ಬಿಡಿಸಿದ್ದು; ತ್ರಿಪುರಾಂತಕೇಶ್ವರ ಕೆರೆಯನ್ನು ಕಟ್ಟಿಸುವ ಸಂದರ್ಭದಲ್ಲಿ ತನ್ನ ಪತ್ನಿ ಸೌಂದರಿಯ ಗರ್ಭಪಿಂಡವನ್ನು ಭೂಮಿಯಲ್ಲಿ ಹುದುಗಿಸಿದ್ದು ; ರುದ್ರಮುನಿಯ ಜನನ–ಇವನ್ನೆಲ್ಲಾ ಪರ್ವತೇಶ ಸುಸಂದರ್ಭಿತವಾಗಿ ವಿವರಿಸಿದ್ದಾನೆ. ಈ ಸಂಗತಿಗಳೆಲ್ಲ ರೇವಣಸಿದ್ಧೇಶ್ವರರಗಳೆ, ರೇವಣಸಿದ್ಧೇಶ್ವರಪುರಾಣ, ವೀರಶೈವಾಮೃತ ಮಹಾಪುರಾಣ ಗಳಲ್ಲಿ ನಿರೂಪಿತವಾಗಿವೆ.

ರೇವಣಸಿದ್ಧ ಸುಲಕ್ಷಣೆಯರ ಜೋಡಿಯನ್ನು ಅನನ್ವಯಾಲಂಕಾರದಿಂದ ಕವಿ ಮನಮೋಹಕವಾಗಿ ವರ್ಣಿಸಿದ್ದಾನೆ.

ಶಿವಸತ್ಕಥಾಲಾಪೆ ಶೃಂಗಾರರಸಕೂಪೆ
ಸುವಿಶಾಲಗುಣಮಾಲೆ ಶೋಭನಕಲಾಶೀಲೆ
ನವರಸಾಲಂಕಾರೆ ನಾನಾಕಳಾಕಾರೆ ಕವಿಜನನುತಾವತಾರೆ
ನವಲಿಂಗಸಂಗಿ ನೂತ್ನಾಂಗಿ ಹೆಂಗಳರನ್ನೆ
ಭುವಿಯೊಳೀ ರೇವಣೇಶಂಗಿವಳೆಯೆಣೆಯೆನುತ
ಸವಿಶೇಷದಿಂ ಸುಲಕ್ಷಣೆಯ ಕೊಂಡಾಡಿದರ್ ಸರ್ವರಾನಂದಮುದಿಸೆ ॥

೨-೫-೩೩

ರಾಜೇಂದ್ರಚೋಳನಲ್ಲಿಗೆ ಬಂದ ರೇವಣಸಿದ್ಧನ ಚಿತ್ರ ಹೀಗಿದೆ.

ಇದೆ ಬಂದ ಶಿವಮತೋದ್ಧರಣ ಮಾಯಾಹರಣ
ನಿದೆ ಬಂದ ವೀರಶೈವರ ಪುಣ್ಯಕಾರುಣ್ಯ
ನಿದೆ ಬಂದ ಕಾಲಕಾಮರಗಂಡ ಹೃತ್ಪುಂಡರೀಕಹಿತ ಶಂಭುಲಿಂಗ
ಇದೆ ಬಂದ ಮಾವರನನಿರಿಸಿದತಿಸಾಹಸಂ
ಇದೆ ಬಂದ ಮೋಕ್ಷಕಾಂತೈಕವಲ್ಲಭನೆಂದು
ಮುದದಿ ಮುನ್ನೆಯ್ದಿ ರಾಜೇಂದ್ರಂಗೆ ಪೇಳಿ ಪೊನ್ನುಡುಗೊರೆಯನಿತ್ತು
ನಲಿದಂ ॥ ೨-೬-೩೬

ರೇವಣಸಿದ್ಧ ರುದ್ರಮುನಿಗೆ ಅನಾದಿಭಕ್ತ ಅನಾದಿಜಂಗಮ ಮೂರ್ತಿಶಕ್ತಿಗಳು ಶಿವನ ಪಂಚವಿಂಶತಿಲೀಲೆಗಳನ್ನು ವಿವರವಾಗಿ ಬೋಧಿಸಿದ್ದಾನೆ. ಹಲವಾರು ಸಂಸ್ಕೃತ ಶ್ಲೋಕಗಳನ್ನು ಉದ್ಧರಿಸಿದ್ದಾನೆ. ಜಂಗಮಂದ ನಿರೂಪಣೆ ಇದು.

ಜಂಗಮಂ ಜಗದೀಶ ಜಂಗಮಂ ಹತಪಾಶ
ಜಂಗಮಂ ಮದನಾರಿ ಜಂಗಮಂ ಪುರವೈರಿ
ಜಂಗಮಂ ಮುನಿಶೀಲ ಜಂಗಮಂ ಘನಲೋಲ ಜಂಗಮಂ ಜನನದೂರ
ಜಂಗಮಂ ಸ್ಥಿತಿರಹಿತ ಜಂಗಮಂ ಮೃತಿರಹಿತ
ಜಂಗಮಂ ಸೃಷ್ಟಿಪಾಲನಹರಣಕಾರಣಂ
ಜಂಗಮಂ ವಿಧಿವಿಷ್ಣುರುದ್ರರಂ ನಿರ್ಮಿಸಿದನಾದಿಜಂಗಮ ಪರಶಿವಂ ॥

೨-೭-೨೩

ವೀರಶೈವ ಸಿದ್ಧಾಂತವನ್ನು ರುದ್ರಮುನಿಗೆ ಬೋಧಿಸುವ ಸಂದರ್ಭದಲ್ಲಿ ರೇವಣ ಸಿದ್ಧ ಕೆಲವು ಚಾರಿತ್ರಿಕ ಸಂಗತಿಗಳನ್ನೂ ತಿಳಿಸುತ್ತಾನೆ. ಅದರಲ್ಲಿ ಬಸವಣ್ಣನ ಜನ್ಮ ವೃತ್ತಾಂತವೂ ಒಂದು. ವಿಭಾಂಡಂಕನ ಹೆಂಡತಿಯು ನಂದಿಯೇ ತನಗೆ ಮಗನಾಗ ಬೇಕೆಂದು ಉಗ್ರತಪಸ್ಸನ್ನು ಮಾಡಲು ಶಿವನು ಪ್ರತ್ಯಕ್ಷನಾಗಿ ಅವರ ಅಭೀಷ್ಟವನ್ನು

ಕೇಳಿ ನೀವು ದನುಜರೂಪವನ್ನು ನೀಗಿ ಭೂಲೋಕದ ರಜತಗಿರಿಯ ದಕ್ಷಿಣ ಭಾಗದ ಭರತಖಂಡದ ನೈರುತ್ಯದಲ್ಲಿರುವ ದೇಶದಲ್ಲಿ ಬ್ರಾಹ್ಮಣರವಂಶದಲ್ಲಿ ಹುಟ್ಟಿ ನಂದಿಯ ವ್ರತವನ್ನು ಆಚರಿಸುವಂತೆ ತಿಳಿಸುವನು.

ಸೃಷ್ಟಿಯೊಳ್ ಶಿವಮತೋದ್ಧರಣಕಾರಣ ನಿಮ್ಮ
ಭೀಷ್ಟಕೋಸುಗ ನಮ್ಮ ಕಟ್ಟಳೆಯೊಳಂದಿಸಿ ನಿಮ
ಗಿಷ್ಟವಂ ಕೊಡುತಲಂಪನಯನವಂ ಜರೆದು ವರವೀರಶೈವಾಚಾರದ
ನಿಷ್ಠೆಯಂ ಪೊಂದಿ ಮಂಗಳಪುರಿಗೆ ಪೋಗಿಯು
ತೃಷ್ಟ ಶಿವಮಹಿಮೆಯಂ ದೃಷ್ಟಿಗೋಚರವೆನಿಸಿ
ಕಷ್ಟಬಿಜ್ಜಳಗರುಹಿ ನಮ್ಮೊಳೊಂದುವನೆಂದುಯಂತರ್ಧಿಯಂ ಪೊರ್ದಿದಂ ॥
೨-೭-೬೫

ಈ ರೀತಿ ಹೇಳಿದ ಶಿವನು ಕೈಲಾಸಕ್ಕೆ ಹೋಗಿ ಈ ವಾರ್ತೆಯನ್ನು ರುದ್ರಗಣವೃಂದಕ್ಕೆ ತಿಳಿಸಿ ಗೋಕರ್ಣಯಜ್ಞಕುಂಡವನ್ನು ನಿರ್ಮಿಸಲು ಆದರ ಮೂಲಕ ಅವರು ಭೂಲೋಕ ವನ್ನು ತಲಪಿದರು.

ವಿಭಾಂಡುಕ ಮತ್ತು ಅವನ ಹೆಂಡತಿ ಮಾದರಸ ಮಾದಲಾಂಬಿಕೆಯರಾಗಿ ಭೂಲೋಕದಲ್ಲಿ ಹುಟ್ಟಿ ಬಸವನನ್ನು ಕುಮಾರನನ್ನಾಗಿ ಪಡೆಯುವರು. ಆಮೇಲೆ ಉಳಿದ ಗಣವೃಂದ ಆ ಪಟ್ಟಣದಲ್ಲಿ ನೆಲೆಗೊಳ್ಳುವರು. ಚನ್ನಬಸವ ಮುಂತಾದವರು ಅವತರಿಸಿದದು; ಅನುಭವಮಂಟಪದ ರಚನೆ; ಹನ್ನೆರಡುಸಾವಿರ ಪಟ್ಟಸ್ಥಲಬ್ರಹ್ಮಿಗಳು ವೀರಮಾಹೇಶ್ವರರು ವಿಚಾರಮಂಟಪದಲ್ಲಿ ನೆಲೆಸಿದ್ದು; ಲಕ್ಷತೊಂಬತ್ತಾರು ಸಾವಿರ ಕಂಠೀರವರೂ ಅಷ್ಟೇ ಸಂಖ್ಯೆಯ ಚರಲಿಂಗಸ್ವಾಮಿಗಳು ಬಂದು ಸೇರುವುದನ್ನು ರುದ್ರ ಮುನಿಗೆ ಹೇಳುವನು.

ಬಿಜ್ಜಳನ ಅರಮನೆಯನ್ನು ನೋಡಲು ಬಂದ ವಿಟಜಂಗಮ ಮಲ್ಲಿನಾಥನನ್ನು ರಾಣಿವಾಸದಲ್ಲಿದ್ದ ರಾಜಕುವರಿ ಲೋಹಿತಾಂಬರೆ ಎಂಬುವಳು ಕಂಡು ಮೋಹಗೊಂಡು ಕಾಮಕೇಳಿಗೆಳಸಿದಳು. ಅದಕ್ಕೆ ಅವನು ಸಮ್ಮತಿಸದಿದ್ದಾಗ ಹಾಹಾಕಾರವನ್ನು ಮಾಡಿ ಬಿಜ್ಜನಿಳಗೆ ದೂರುಹೇಳಲು ಅವನು ಬಸವಣ್ಣನನ್ನು ಕರೆಸಿ ಆಕ್ಷೇಪಿಸಿದನು. ಆಗ ಬಸವಣ್ಣ.

ಎಲೆ ರಾಯ ಅರಸಿಂಗೆ ಆರುಬಾಯೆಂಬುದು
ನೆಲೆಯಾಯ್ತು ನಾಣ್ಣುಡಿಯು ನಮ್ಮ ಜಂಗಮ ನಿಮ್ಮ
ಲಲಿತಭವನವ ನೋಡ ಬಂದನಲ್ಲದೆ ಪಾಪಕೃತ್ಯಕೆಳಸುವನಲ್ಲವೈ

ಲಲನೆಯರ್ಗನೃತವಂಸ್ಥಿರ ಬಂಧ್ಧಿ ಕಡುಮಾಯೆ
ಸಲೆ ಮೂರ್ಖಮತಿ ಮಹಾಕಾಮುಕತೆಯಪವಿತ್ರ
ಮಿಳಿತ ನಿರ್ದಯಮೆಂಬ ಗುಣಗಳಿವು ಸಹಜ ನೀಂ ತಿಳಿಯದುಸರುವರೆ ಭೂಪ॥

೨-೭-೮೪

ಎಂದು ಹೇಳಿ ನಿಜವನ್ನು ನಿರೂಪಿಸುವ ಪ್ರಸಂಗ ರಮಣೀಯವಾಗಿದೆ. ಸ್ತ್ರೀಯರ ಗುಣಲಕ್ಷಣಸ್ವಭಾವಗಳ ಒಂದು ಸುಂದರ ನೈಜಚಿತ್ರವನ್ನು ಪರ್ವತೇಶ ಕೊಟ್ಟಿದ್ದಾನೆ. ನಾಣ್ಣುಡಿಗಳನ್ನು ಸಂದರ್ಭೋಚಿತವಾಗಿ ಪೋಣಿಸಿದ್ದಾನೆ.

ಮಿಂಡಮಲ್ಲಿನಾಥನ ಕಂಥೆಯು ಹರಿದು ಜಂಗಮದ್ರೋಹವಾದುದಕ್ಕಾಗಿ ಬಿಜ್ಜಳನು ಭಕ್ತಿಯಿಂದ ಸಾವಿರ ಸಂಖ್ಯೆಯ ಕಂಥೆಗಳನ್ನು ಬಸವಣ್ಣನ ಆದೇಶದಂತೆ ಮಾಡಿಸಿಕೊಡುವನು. ಕಾಲಾಂತರದಲ್ಲಿ ಆಯಾ ಕಂಥೆಗಳಿಂದಲೇ ನಾನಾಬಗೆಗಳಾಗುವರು. ಈ ವಿಶಿಷ್ಟ ಮಾಹಿತಿ ಇಂತಿದೆ :

ಕನಕಕಂಥೆಯು ರನ್ನಕಂಥೆ ಬಜ್ಜರಕಂಥೆ
ಮಿನುಪ ಬೆಳ್ಳಿಯ ಕಂಥೆ ಹರಿಮಣಿಯ ಕಂಥೆ ಚ
ನ್ನನಂ ಪಡೆದ ಪಂಚವರ್ಣದ ಪಟ್ಟುಕಂಥೆ ಕಬ್ಬುನ ಕಂಥೆ ನಾರ ಕಂಥೆ
ಘನಮಾದ ಹಂಚುಕಂಥೆಯು ತಾಂಬ್ರಕಂಥೆಯ
ತ್ಯನಘ ಪುಲಿಸಮ್ಮ ಕಂಥೆಯು ಕರಿಯ ಹತ್ತಿಯಿಂ
ದನುವಾದ ಕಂಥೆ ಮೊದಲಾದವಂ ಮಾಡಿಸುತೆ ಜಂಗಮಕೆ ಕೊಡುವನನಾಗ॥

೨-೭-೯೦

ಮಂಗನೆ ಕೇಳಾಯಾ ಸುಕಂಥೆಗಳ ಜಂಗಮಂ
ಸೊಗಸಿನಿಂ ಧರಿಸುವರು ಅವರವರ ವಂಶದಿಂ
ದೊಗೆದ ಶಿಷ್ಯಪ್ರಶಿಷ್ಯಪ್ರತತಿಗಳ್ ನೋಡಲಾ ಕಂಥೆಗಳ ನಾಮವಂ
ಜಗದೊಳಗೆ ಪ್ರಖ್ಯಾತವಾಗಿ ಕಂಥೆಗಳ ಬಗೆ
ಮಿಗೆ ಮಿಗೆಯೆನುತ್ತ ಪೇಳ್ವರ್ ಮುಂದೆ ಚರದೇವ
ರಗಣಿತದ ಬಗೆಬಗೆಗಳಹರು ಕಲಿಯುಗದೊಳಗೆ ಎಂದನಾ ರೇವಣೇಶಂ ॥

೨-೭-೯೧

ಈ ಕಂಥೆಗಳಲ್ಲಿ ಕೆಲವನ್ನು ಇಂದಿಗೂ ನಾವು ಕಾಣಬಹುದಾಗಿದೆ.

ತೃತೀಯಕಾಂಡದಲ್ಲಿ ಮರಳಸಿದ್ಧನ ಚರಿತ್ರೆಯು ನಿರೂಪಿತವಾಗಿದೆ. ಮರಳು ಸಿದ್ಧ ಕೊಲ್ಲಾಪುರಕ್ಕೆ ಹೋಗಿ ಮಾಯೆಯನ್ನು ಭಂಗಿಸಿದ್ದು, ದಧೀಚಿಗೆ ಹರಲೀಲೆ, ಭಿಕ್ಷಾಟನ ಲೀಲೆ, ಕಾಮದಹನ, ಕಾಲವಿಜಯದ ಲೀಲೆ, ತ್ರಿಪುರದಹನ, ಜಲಂಧರ ಸಂಹಾರಲೀಲೆ, ದಕ್ಷಯಾಗ ಧ್ವಂಸಮಾಡಿದ್ದು–ಈ ವಿಷಯಗಳನ್ನು ತಿಳಿಸಲಾಗಿದೆ.

ಮರುಳಸಿದ್ಧ ಕೊಲ್ಲಾಪುರಕ್ಕೆ ಬಂದಾಗ ಕಹಳೆಗಳು ಈ ರೀತಿ ಧ್ವನಿ ಮಾಡಿದವಂತೆ :

ಇದೆ ಬಂದ ಮಾಯಾಂಧಕಾರಸೂರಂ ಧೀರ
ನಿದೆ ಬಂದ ಮಾಯಾದಿವಾಂಧಕ್ಕೆ ದಿವಸೇಂದ್ರ
ನಿದೆ ಬಂದ ಮಾಯಾಘನಗಭೇದಿ ಶತಕೋಟಿರೂಪ ನಿರ್ಲೇಪನಿತ್ಯಂ
ಇದೆ ಬಂದ ಮಾಯಾಬ್ಜನೇತ್ರಕೈರವ ಮಿತ್ರ
ನಿದೆ ಬಂದ ಮಾಯಾಕುಮುಂದಷಂಡ ಚಂಡರವಿ
ಯಿದೆ ಬಂದ ಮಾಯಾರಿ ಮರಳುಂಸಿದ್ಧೇಶನೆಂದೊದರಿದವು ಕಹಳೆ ಮುದದಿಂ॥
೩-೧-೧೦

ನವಕೋಟಿ ಸಿದ್ಧರು "ಎಲೆ ಗುರುಂವೆಯಾಳಿನವಮಾನವಾಳ್ದಂಗೆಂಬ ಚಲದ ಭಾಷೆಯುಂ ನಿಮಂಗೆ ಸಂದುದೈ ಗುರುವರ್ಯ" ಎಂದುಂ ತಮ್ಮನ್ನು ಸಲಹಲಂ ಬಂದ ಮರುಳಸಿದ್ಧನನ್ನು ಕೊಂಡಾಡುತ್ತಾರೆ. ಶಿವನ ತಾಂಡವನೃತ್ಯವನ್ನು ಕವಿ ವರ್ಣಿಸಿರುವ ಬಗೆ ತುಂಬ ಪರಿಣಾಮಕಾರಿಯಾಗಿ ಬಂದಿದೆ.

ಡಮರುರವ ದಂ ಡಮೃಡಂ ದಂ ಡಮೃಡ ಮರುಢಣ
ಡಮರು ಢಣಢಣ ಢಣಢಣಂ ಢಿಮರು ಢಿಮುರೆನಂತ
ಕ್ರಮದೆ ಘಂಟಾನಾದ ಘಣಘಣಘಣಾಯೆನುತಲುಣ್ಮೆ ಬ್ರಹ್ಮಾಂಡ ಭಿತ್ತಿ
ಒಡೆದು ಸಾಸಿರಭಾಗದಿಂ ಚಿಪ್ಪುಚೀರಾಗೆ
ಜಡಧಿಗಳು ಬತ್ತಿದವು ವಡಬಾಗ್ನಿ ಸತ್ತಿತ್ತು
ಮೃಡನಿಂತು ತಾಂಡವಮನಾಡುತಿರ್ದಂ ಕೇಳ್ ದಧೀಚಿ ಗಣರತ್ನರೋಚಿ॥
೩-೨-೯೪

ಶಿವನ ತಾಂಡವನೃತ್ಯದ ವರ್ಣನೆಯಲ್ಲಿ ತಲ್ಲೀನನಾದ ಕವಿ ಪ್ರಾಸಭಂಗವಾದುದನ್ನೂ ನಿರ್ಲಕ್ಷಿಸಿದ್ದಾನೆ. ಪೂರ್ವಾರ್ಧ ಉತ್ತರಾರ್ಧದ ಪಾದಗಳಲ್ಲಿ ಭಿನ್ನಪ್ರಾಸವಿದ್ದರೂ ಪ್ರಾಸಕ್ಕೆ ದಾಸನಾಗಿ ಭಾವಕ್ಕೆ ಸಾವನ್ನು ತಂದಿಲ್ಲ. ಪ್ರಾಸೋಲ್ಲಂಘನೆಗೆ ಇದು ದಿಟ್ಟ ಉದಾಹರಣೆ. ಪರ್ವತೇಶ ಕಾವ್ಯದ ಆದಿಯಲ್ಲಿಯೇ ಸಮಾಸ ಪ್ರಾಸ ಛಂದ ಇವನ್ನು ಶಿವಕವಿಗಳುತ್ತಮಬುಧರ್ ವ್ಯತ್ಯಾಸವರಿದು ತಿದ್ದುವುದು ಎಂದು ಪ್ರಾರ್ಥಿಸಿಕೊಂಡಿದ್ದಾನೆ.

ಶಿವಭಕ್ತನಾದ ಶ್ವೇತನನ್ನು ಎಳೆದೊಯ್ಯಲು ಬಂದ ಯಮನಿಗೆ ಆವನು ದಿಟ್ಟತನದಿಂದ ಕೊಡುವ ಉತ್ತರ ಇದು:

ಎಲೆ ಕಾಲ ಕೇಳ್ ಹರಂ ಮುಳಿಯೆ ಗುರು ರಕ್ಷಿಪಂ
ಸಲೆ ಗುರುವೆ ಕೋಪಿಸಲ್ ಹರ ಸಲಹಲಾರ ಕೇಳ್
ಮಲಹರನ ಭಕ್ತರಂ ಕೊಲಲು ಕಾಯಲ್ಕೆಯಾಚಾರ್ಯನೇ ಕರ್ತನಲ್ತೆ
ನೆಲದಾಣ್ಮನಣುಗನಂ ನೀ ರಕ್ಷಿಸಲ್ಕಳವೆ
ಯಳಿಕಾಕ್ಷಭಕ್ತರಂ ಮುಟ್ಟಲಾರಳವಲ್ಲ
ನೆಲೆಯಿದಂ ಮರೆದಂ ಕೊಲಲೆಣಿಸಿದಡೆ ನಿನಗೆ ಕೊಲೆ ತಪ್ಪದೀವಚನ ಸತ್ಯಂ॥
೩-೫-೧೦

ಪೂರ್ವಾಪರ ವಿವೇಚನೆಯಿಲ್ಲದೆ ಜಲಂಧರನಿಗೆ ವರವನ್ನುಕೊಟ್ಟ ಬ್ರಹ್ಮ ಚಿಂತೆಗೀಡಾದುದನ್ನು ಕವಿ ತುಂಬ ಮಾರ್ಮಿಕವಾಗಿ ಹೇಳಿದ್ದಾನೆ :

ಬಿಡದೆಯಿಾಚಲಿಗೆರೆಯೆ ನೀರ ಜಾಲಿಯ ಬಿತ್ತ
ಲಡಿಗೆ ಮುಳ್ಮೂಡೆ ಕಾಲ್ಕೊಳಿವವೊಲ್ ಭುಜಗಂಗೆ
ತಡೆಯದಮೃತವನೆರೆಯಲಧಿಕ ಹಾಲಾಹಲಂ ಪೆರ್ಚುವೊಲ್ ನೀಚನವಗೆ
ಸಡಗರದ ಸಂಪದವನಿತ್ತೊಡೆನ್ನಂ ಪಿಡಿದು
ಜಡಿದೆಸೆಗು ಪೊಣರನೆಂದಳುಪುತಿಹನೀ ಪಾಪಿ
ಯೊಡೆಯನಂ ಕಂಡು ಗಳಹುವ ಸುನಿಯೊಲಾಯ್ತಿದಕ್ಕೇನೆಂದು ಚಿಂತಿಸಿದನಂ॥
೩-೭-೧೫

ನುಡಿಗಟ್ಟುಗಳನ್ನು ಲೋಕರೂಢಿಗಳನ್ನು ಪರ್ವತೇಶ ಎಷ್ಟು ಶಕ್ತಿಯುತವಾಗಿ ಬಳಸಬಲ್ಲ ಎಂಬುದಕ್ಕೆ ಕೆಲವಾರು ಉದಾಹರಣೆಗಳನ್ನು ಈ ಕಾವ್ಯದಲ್ಲಿ ಕಾಣಬಹುದಾಗಿದೆ, ಕ್ಷುಪನೆಂಬ ರಾಜ ದಧೀಚಿಯನ್ನು ವಿಡಂಬಿಸುವ ರೀತಿಯಿದು :

ಚಿರಕಾಲ ಹರಭಕ್ತಿಯಿಂದೆರಲೆಸಮ್ಮ ಮ
ತ್ತರಿದೆನಿಪ ಭಾಗ್ಯಮಿದೆ ನಿನ್ನ ತಿಕಕೊಂದಂ ಪಳೆ
ಯರಿವೆಯಂ ಕಾಣೆಯಾಂ ಹರಿಯಿಂದೆ ಸಕಲಸೌಭಾಗ್ಯಮಂ ಭೋಗಿಪೆ ಗಡ
ತಿರುಕ ಗೊರವನ ಭಕುತರೆನಲು ಮುನಿ ಕೋಪದಿಂ
ದರಸಿನುರೆ ಬಾಯ್ಬಿಡಿದು ಚೀಯೆಂನಲ್ಕವ ಕ್ರೋಧ
ದುರಿಯನುಗುಳ್ವಂತೆ ವಜ್ರಗದೆಯಿಂದ ಬಡಿಯಲ್ಕೆ ಸಿಡಿದವೆಣ್ದೆಸೆಗಸ್ಥಿಯು ॥
೩-೭-೪೪

ದಕ್ಷಬ್ರಹ್ಮ ಅಳಿಯನಾದ ಪರಶಿವನ ಮೇಲಿನ ಕೋಪದಿಂದ ಹರರಹಿತಯಾಗವನ್ನು ಮಾಡುತ್ತಿದ್ದಾಗ ನಾರದ ಈ ರೀತಿ ಹೇಳುತ್ತಾನೆ.

ಹರರಹಿತ ಯಜ್ಞವಂ ಮಾಡುತಿರೆ ನಾರದಂ
ಭರದಿಂದಲೆಯ್ದಿ ಶಿರವಿರಲು ಮೇಣ್ ಮೊಳಕಾಲಿ
ಗರಸುಪಟ್ಟಂ ರಚಿಸುವಂತೆ ಶಿರವಿಲ್ಲದ ಕಬಂಧಕುರೆ ಸೇಸೆಯಿಡುವ
ತೆರನಾಯ್ತು ಹಾ ಭಾಗ್ಯವೇ ಎನ್ನ ಪುಣ್ಯದಿಂ ?
ತೆರದ ಕಾಲಂ ದೊರೆವುದರಿದೆಂದು ಕಲಹಕತಿ
ಭರದಿಂದಲಿಚ್ಛೈಸುತೆಯ್ದಿದಂ ರಜತನಗಕೇನೆಂಬೆ ಕಲಹಾಶನಂ॥

೩-೮-೨೨

ಹರರಹಿತಯಾಗ "ಬಾಲಕರ ತಲೆಗೆ ಹೆಡಗೆಯು ಭಾರ"ದಂತೆ. ಗಣನಾಥ ದಕ್ಷನನ್ನು ಈ ರೀತಿ ಪ್ರಶ್ನಿಸುತ್ತಾನೆ :

ಅಧಮಂದಕ್ಷನೆ ನೆಮ್ಮ ಮೊಡೆಯಂ ಬೆಟ್ಟವಂ
ವೊಡೆಯಂಬಹುದೇ ನೀನು ಘನಗರ್ವದಿಂ ಹರನ
ಸದರವಂ ಮಾಡಿಯಿ ಕೀಳ್ದೈವಗಳನಗ್ರಪೂಜಾರ್ಹರೆಂದು ಬಗೆದು
ಮಧುಸೂದನಾದ್ಯರಂ ಯಜಿಸಿ ಜನ್ಮವನು ನೀ
ನೊದಗಿಸಲ್ಬಹುದೆ ಬಿಡು ನೀನವರ ರುದ್ರನೇ
ಪುದಿದಗ್ನಿಯಗ್ನಿಯಾಳೇ ಪುರೋಹಿತಮೆಂಬ ವೇದವಂ ಮರೆವರಕಟ ॥

೩-೮-೪೫

ಈ ಕಾಂಡದಲ್ಲೇ ಬರುವ ಬ್ರಹ್ಮ ಮತ್ತು ವಾಣಿ ಇವರ ಪ್ರೇಮಪ್ರಕರಣ ತುಂಬ ಸ್ವಾರಸ್ಯವಾಗಿದೆ. ಇವರಿಬ್ಬರ ಸಂಭಾಷಣೆ ನಾಟಕೀಯವಾಗಿದೆ. "ಲಾವಣ್ಯ ಲಕ್ಷಣ ರೂಪ ಸೌಂದರ್ಯಯುತೆ"ಯಾದ ವಾಣಿಯನ್ನು ಕಂಡು ಭ್ರಮಿಸಿ ಕಾಮಾತುರದಿಂದ ಬ್ರಹ್ಮ ಅವಳನ್ನು ಹಿಡಿದುಕೊಳ್ಳಲು ಹೋದಾಗ "ಕ್ರಮ ತಪ್ಪುವರೆ ಪಾಪಿಯೆಂದು ಕೈಕೊಸರಿಡುತೆ ಸುಮನಸರು ನಗರೆ ನವಬ್ರಹ್ಮರೊಡಬಡುವರೇ ಲೋಕಕತಿಹಾಸ್ಯ ಮಲ್ತೆ ; ಲೋಕೇಶ ಲೋಕಜನಕಂ ವಾವಿತಪ್ಪಿದೊಡೆ ಯಾಕೆವಾಳರು ತಪ್ಪಿ ನಿನ್ನಂತೆ ನಡೆಯರೇ ಯಾಕೆ ನೀನೆನಗೆ ಜನಕಂ ನಾನಂ ಶಿಶುವಲ್ಲವೇ" ಎಂದು ಪ್ರಶ್ನಿಸುವಳು. ಅದನ್ನು ಕೇಳಿದ ಕಾಮಾತುರನಾದ ಬ್ರಹ್ಮ "ಸಾಕು ನಿನ್ನಯ ಚಾಟುಮಾತಂಬುಜದ ಜೇನು ಕಾಕಕೊಂಬುದೆ ಭ್ರಮರನಂತೆ ಎನ್ನಂ ದಯದೊಳ್, ಲೋಕಬಲ್ಲುದೆ ಕಾಮ ಕೇಳಿಗನುವಾಗು ಪೆಣ್ಣೊಂದುಂ ಗಂಡೊಂದುಂ ಕುಲವು ; ಮತ್ತೆ ಕೇಳ್ ಶಿವಶಕ್ತಿರೂಪ ಮಿಂತೆರ ಜಗಂ ಪಥ್ಯಮಿಂತುಳಿದುದೆಲ್ಲಂ ಮಿಥ್ಯಂ" ಎಂದು ಉತ್ತರಕೊಡುವನಂ.

ಪರಶಿವನ ಲೀಲೆಗಳ ಮಧ್ಯೆ ಶ್ವೇತ, ಮಾರ್ಕಂಡೇಯ, ನರವರ್ಮರಾಜ, ವಿದಳ, ಸುಕುಮಾರ, ಕ್ಷುಪ ಮೊದಲಾದ ಶಿವಭಕ್ತರ ಕಥೆಗಳನ್ನು ಸಮಯೋಚಿತವಾಗಿ ಪರ್ವತೇಶ ಸಮಾವೇಶಗೊಳಿಸಿದ್ದಾನೆ. ಇದು ಈತನ ಸಮಯಪ್ರಜ್ಞೆಗೆ ಸಾಕ್ಷಿಯಾಗಿದೆ. ಸುಕುಮಾರನ ಕಥೆ ವೀರಶೈವಾಮೃತ ಮಹಾಪುರಾಣ ಕಾಂಡ ೨ ಸಂಧಿ ೭ರಲ್ಲಿ

ಬಂದಿದೆ. ಅಲ್ಲಿ ಕುಬ್ಜಕ ಎಂಬ ಪಟ್ಟಣವಿದ್ದುದನ್ನು ಪರ್ವತೇಶ ಅಬ್ಜಕ ಎಂದು ಮಾಡಿಕೊಂಡಿದ್ದಾನೆ. ಉಳಿದಂತೆ ಯಾವ ಬದಲಾವಣೆಯನ್ನೂ ಮಾಡಿಕೊಂಡಿಲ್ಲ.

ಸಮುದ್ರಮಥನ ಕಾಲದಲ್ಲಿ ಹುಟ್ಟಿದ ಹಾಲಾಹಲವನ್ನು ಕಂಡು ಬೆದರಿದ ದೇವತೆಗಳು ಪರಮೇಶ್ವರನನ್ನು ಪ್ರಾರ್ಥಿಸಿದ್ದು ಹೀಗೆ :

ಪಾಲಿಸು ಸಹಸ್ರಶ್ರೀರ್ಷನೆ ಸಹಸ್ರಾಕ್ಷನೇ
ಪಾಲಿಸು ಸಹಸ್ರಬಾಹುವೆ ಸಹಸ್ರಾಂಘ್ರಿಯೇ
ಪಾಲಿಸು ವಿಶಾಲಾತ್ಮ ವಿಶ್ವ ವಿಶ್ವಾಧಿಪತಿ ವೀತರಾಗದ್ವೇಷನೆ
ಪಾಲಿಸಂ ಸಮಸ್ತ ನಿಗಮಸ್ತುತ್ಯ ಘನಕೃತ್ಯ
ಪಾಲಿಸು ಪರಾಶಕ್ತಿ ಪೀಠ ವಿಶ್ರುತಕೂಟ
ಪಾಲಿಸು ಮಹಾದೇವನೆಂದು ಬ್ರಹ್ಮಾದ್ಯರಾಮೋದದಿಂ ನುತಿಸುತಾಗ ॥

೪-೫-೩೩

ಎಮಗಾರುಂ ಗತಿಮತಿಯುಂ ನೀವಲ್ಲದೆಲೆ ದೇವ
ಕ್ರಮದೆ ಮಾತಾಪಿತರು ನೀವೆ ಇನ್ನೊಂದುಂಟೆ
ಶ್ರಮಂಪಡುತ್ತಿರುವರಿಂಗಾರಾಗುವರು ಲೋಕದೊಳಗಿರ್ವರುಂಟು ದೇವ
ಅಮರಕಟಕದೊಳಾರೆನಲ್ಕೆ ಹೆತ್ತಹನೊರ್ವ
ಕ್ರಮದಿ ತೆತವ್ತನೊರ್ವನರ್ಥಮಂ ಭೂಮಿವ್ಯಾದಿ
ಸುಮಹಚ್ಛರೀರಂಗಳಿಂದೆಮ್ಮ ಪೊತ್ತವನು ತೆತ್ತವನು ಹರ ನೀನಲ॥

೪–೫–೩೪

ಅಮೃತಕುಂಡವನ್ನು ಮೋಸದಿಂದ ವಶಪಡಿಸಿಕೊಂಡ ಸುರರನ್ನು ವಿಡಂಬಿಸಿದ ಚಿತ್ರ :

ಉಪಕಾರಮಂ ಮಾಡಬಂದ ದನುಜರನೆಲ್ಲ
ರಪಹರಿಸಿ ವಸ್ತುಗಳನವರ ಸಂಹರಿಸುತ್ತ
ಲಪಕರಿಸಿದರು ಲೋಕದೊಳಗೆ ಕಾಮಾತುರರ್ಗಿಲ್ಲ ದಾಕ್ಷಿಣ್ಯಲೇಶಂ
ಚಪಲಾಕ್ಷಿ ಕುಂತಿ ಕೃಷ್ಣರ್ ಕೂಡಿ ಕರ್ಣನಿಂ
ದಪರಿಮಿತ ನಂಬುಗೆಯಿನೆಂದು ಕೊಲಿಸಿದಳು ಕೇ
ಳುಪಮಿಸಲ್ ದೇವತೆಯರಿಂತಪ್ಪ ಘಾತಕರು ಶಿವಶಿವಾ ನರರೆಂತುಂಟೊ ॥

೪–೫–೪೬

ಲೋಕನೀತಿಯನ್ನು ಸಮಯೋಚಿತವಾಗಿ ಕವಿ ಹೇಗೆ ಪೋಣಿಸುತ್ತಾನೆ ಎಂಬುದಕ್ಕೆ ಮನ್ಮಥನನ್ನು ಶಿವನೆಡೆಗೆ ಕಳಿಸುವ ಸಂದರ್ಭದ ಪದ್ಯ ಸಮರ್ಥವಾಗಿ ಪ್ರತಿಬಿಂಬಿಸುತ್ತದೆ :

ಪುಲುಮನಂಜರೇಕಾಂತರತಿಕೇಳಿಯೆಡೆಗನ್ಯ
ಘಳಿಲನೈದಲ್ಕವನ ಪ್ರಾಣಕ್ಕೆ ಮುನಿವರಿಂ
ಗಳಗಣ್ಣನೆಡೆಗೆಂತು ಪೋಪೆ ನಾನೊಲ್ಲೆನೆನಲಾಗ ಹರಿ ವಿನಯದಿಂದೆ

ಎಲೆ ವಹ್ನಿಯುತ್ತಮರು ತಾ ಕೆಟ್ಟು ಪರರನಂ
ತಂಳುಹುವರು ಪರರ ಕಷ್ಟವೆ ತಮ್ಮದೆಂಬುವರು
ಮಲಹರನ ತನುವಲ್ಲವೇ ನೀನಂ ಸಂದೇಹವಂಳಿದಂ ಪೋಪುದಂ ಧರ್ಮವೈ॥
೪-೮-೧೫

ಧರ್ಮ ಯಂಗಯುಗಗಳಲ್ಲಿ ಹೇಗೆ ಪ್ರವರ್ತಿಸುತ್ತದೆ ಎಂಬುದನ್ನು ಕವಿ ಹೀಗೆ ನಿರೂಪಿಸಿದ್ದಾನೆ.

ತ್ರೇತೆಯೊಳ್ ಧರ್ಮವೇ ಮೂರು ಪಾದಂ ನಡೆದು
ದಾ ತೆರದ ದ್ವಾಪರದ ಯುಗದೊಳಾ ಧರ್ಮ ತಾಂ
ಸಾತಿಶಯುಮೆರಡುಂ ಪಾದಂ ಕಲಿಯೊಳಾಯ್ತೇಕಪಾದ ಧರ್ಮಂ ನಡೆವುದಂ
ಭೂತೇಶ ವೃಷಭ ಮೂರ್ತಿಯೆ ಧರ್ಮಮೂರ್ತಿಯೆಂ
ದೀ ತೆರದಿ ಧರ್ಮಮಂ ಯಂಗಯುಗಾಂತರದಲೀ
ಖ್ಯಾತಿಯಿಂ ಸ್ಥಾಪಿಸುವನೆಂಬುದಕೆ ಲಿಂಗದಿದಿರಿನ ವೃಷಭಪಾದ ಸಾಕ್ಷಿ ॥
೪-೧೧-೩೦

ಈ ಕಾಂಡದಲ್ಲಿ ಬರುವ ಅನ್ನದಾನದ ಕಥೆ ಒಂದು ರಸಘಟ್ಟಿಯಂತಿದೆ. ಬರಗಾಲದಲ್ಲಿ ತಮ್ಮನ್ನು ಕಾಪಾಡಿದ ಗೌತಮನನ್ನು ಅವನಿಂದಲೇ ಉಪಕೃತರಾದ ವಿಪ್ರರು ದ್ರೋಹ ಬಗೆದು ಅದಕ್ಕಾಗಿ ಪ್ರಾಯಶ್ಚಿತ್ತಪಡುವುದನ್ನು ಪರ್ವತೇಶ ಮನವಂಟ್ಟುವಂತೆ ಚಿತ್ರಿಸಿ "ಅನ್ನದಾನಕ್ಕಧಿಕದಾನ ಮಿಗಿಲಿಲ್ಲ" ಎಂಬುದನ್ನು ಸಾರಿದ್ದಾನೆ. ಇದಕ್ಕೆ ಉಪಕಥೆಯಾಗಿ ಬರುವ ಕಾಳಮೇಘನೆಂಬ ಲುಬ್ಧಕನ ಕಥೆ ಮನನೀಯವಾಗಿದೆ, ಉಪಕಾರ ಮಾಡಿದ ಶಬರ ಅಪಮೃತ್ಯುವಿಗೊಳಗಾದಾಗ ಅವನ ಹೆಂಡತಿ ಮಾಡುವ ಪ್ರಲಾಪ ಕರುಳು ಕಲಕುವಂತಿದೆ :

ಚನ್ನಿಗನೆ ಚಲುವನೇ ಪಕ್ಕಿಯೋಲಿರ್ವರುಂ
ಗನ್ನವಿಲ್ಲದೆ ಕೂಡಿ ಬಾಳಿದೆವು ನಿನ್ನನುಳಿ
ದನ್ನಮಂ ತಿಂದು ನೀರ್ಗುಡಿದಂ ನಾ ಜೀವಿಸಲೆ ಹಾ ಗಂಡಯೇನು ಮಂಳಿಸು
ನನ್ನಮೇಲೆಂದೆರ್ದೆಯ ಬಾಯ ಬಡಿದಾರ್ಭಡಿಸೆ
ತನ್ನರೇಂದ್ರಂ ಕೇಳಿಳಿದಂ ಬಂದಕಟಕಟಾ
ಪನ್ನಗಾಭರಣ ಹಾಹಾಯೆಂದು ಮರುಗಿ ಶಬರಿಯ ಕರವ ಪಿಡಿದಂ ರಾಜಂ॥
೪-೧೨-೪೧

ತನ್ನಿಂದಾಗಿ ಸಂಭವಿಸಿದ ಈ ಅಪಘಾತಕ್ಕಾಗಿ ಮರುಗಿದ ರಾಜ ಆ ಶಬರಿಯನ್ನು ತನ್ನೊಡನೆ ಅರಮನೆಗೆ ಬಂದು ಸುಖದಿಂದಿರುವಂತೆ ಕೇಳಿಕೊಂಡಾಗ ಆಕೆ ಹೇಳುವ

''ಕಾಂತಿಯಿಂದಿಳಿದ ಮಣಿಜೀವವಿಲ್ಲದ ಕಾಯಮಿಟ್ಟಂತೆ ನನ್ನ ದೇಹಂ ನಿಂತಿರ್ದಡೇನು ಫಲವಿಲ್ಲ'' ಈ ಆದರ್ಶನುಡಿಗಳು ನಮ್ಮ ಸಂಸ್ಕೃತಿಗೆ ನಿದರ್ಶನವಾಗಿವೆ.

ನಿರ್ದೋಷಿಯಾದ ತನ್ನನ್ನು ವಂಚಿಸಿದ ಪಾರ್ವರಿಗೆ ಶಾಪ ಸಲ್ಲತಕ್ಕದೆಂದು ಗೌತಮಂ ಈ ರೀತಿ ಯೋಚಿಸುತ್ತಾನೆ.

ಪಗೆಯ ಭಾವಿಯ ತಳ್ಳಲೇಕವನ ಮನ್ನಿಸುತ
ಅಗಲವಾದೀ ಕೂಪದಿರವ ನೋಡೆನುತಿಳುಹೆ
ಮಿಗೆಯೇಳದೇ ತಾನೆ ಸಾವ ತೋಟವ ಕಡಿಯಲೇಕೆ ನೀರ್ತಪ್ಪಿಸಿದೊಡೆ
ಮಿಗೆಯೊಣಗಿ ಪೋಪುದನ್ಯರ ತಲೆಯ ಪೊಡೆಯಲೇ
ಕಗಣಿತದ ರಾಜನಿಂದೆಯ ಕಲಿಸೆ ಸಾಲದೆಂ
ದಗಜಾಧಿಪತಿಗೆ ಹರಿಯಜರಧಿಕವೆಂದೂಳಿ ನರಕದೊಳಗಾಳಿನುತ್ತಂ ॥

೪-೧೩-೧೫

ಗೌತಮನು ದಾರುವನದ ಮುನಿಗಳನ್ನೂ ಶಂಭುಭಟ್ಟನನ್ನೂ ವಾದದಲ್ಲಿ ಸೋಲಿಸಿ ಶಿವಪಾರಮ್ಯವನ್ನು ಸ್ಥಿರಪಡಿಸುವಲ್ಲಿನ ಸಂದರ್ಭಗಳನ್ನು ಕವಿ ಸಂಸ್ಕೃತೋದ್ಧರಣ ಗಳಿಂದ ಸಮರ್ಥವಾಗಿ ನಿರೂಪಿಸಿದ್ದಾನೆ. ದಾರುವನದ ಮುನಿಸತಿಯರು ಮಾರಂ ವೇಷದಿಂದ ಬಂದ ಶಿವನನ್ನು ಕಂಡು ಮೋಹಗೊಳ್ಳುವುದು; ಶಿವನ ನಿರೂಪದಿಂದ ವಿಷ್ಣು ಸುಂದರ ಸ್ತ್ರೀರೂಪದಿಂದ ಆ ಮುನಿಗಳ ಮುಂದೆ ಸುಳಿದಾಡುವುದು; ಅವರೆಲ್ಲ ಅವಳ ''ಕೂಟಕಿಚ್ಚೈಸಿ ಮೇಟಿಯ ಪಶುಗಳಂತವಳ ಸುತ್ತುತ್ತ ಜಪತಪಗಳ ಆಟಗಳ ನುಳಿದು ಭ್ರಷ್ಟಾಗಿ ಲಜ್ಜೆಯನೀಗಿ'' ಅವಮಾನಿತರಾಗುವ ಪ್ರಕರಣಗಳನ್ನು ರಸ ವತ್ತಾಗಿ ಚಿತ್ರಿಸಿದ್ದಾನೆ.

ಪಂಚಮಕಾಂಡದಲ್ಲಿ ಏಕೋರಾಮನು ದೇವಲಮುನಿಗೆ ದಿವ್ಯಾಗಮಗಳಲ್ಲಿ ನಿರೂಪಿತವಾಗಿರುವ ಬ್ರಹ್ಮಾಂಡವಿಚಾರ, ಕರ್ಪರದ ರೀತಿ, ಕುಲಗಿರಿಗಳ ವಿವರ, ಮೇರು ವಿನ ಬಳಿಯ ಗಿರಿ ನಗರ ಗಗನ ಮೇಘಾವರಣಗಳ ವಿವರ, ಬ್ರಹ್ಮಾಂಡದ ಮೇಲಣ ಲೋಕಗಳ ವರ್ಣನೆ ರುದ್ರನಾಮಗಳು-ಇವೇ ಮೊದಲಾದ ಸಂಗತಿಗಳನ್ನು ವಿವರವಾಗಿ ತಿಳಿಸುತ್ತಾನೆ.

''ಪರತರ ಸ್ವಚ್ಛಂದ ಲಲಿತ ಭೈರವ ಮುಖ್ಯ ಪರಿವಿಡಿಯ ದಿವ್ಯಾಗಮಂಗಳೋ ತುಸುರ್ದುದಂ ಮೊರೆವೆನೈ ಭುವನಕೋಶವ ಕೇಳು ದೇವಲ ಮುನೀಶ ನೀತಿಪ್ರಕಾಶ'' ಎಂದಿದ್ದಾನೆ ಕವಿ. ಏಕೋರಾಮನ ಸಂಗತಿಗಳು ವ್ಯಕ್ತಪಡುವುದು ಈ ಕಾಂಡದಲ್ಲೇ. ಶಂಕುಕರ್ಣ ಮುದ್ರಾಪುರಿಯ ರಾಮೇಶ ದೇವಾಲಯಕ್ಕೆ ಬರಲು ಏಕೋರಾಮ ಅವ ರನ್ನು ಭಯಭಕ್ತಿಯಿಂದ ಉಪಚರಿಸಿ ಬಂದ ಕಾರಣವನ್ನು ಕೇಳಲು ಅವರು:

ಎಲೆಲೆ ಘಂಟಾಕರ್ಣ ಗಣಪ ಹರನಾಜ್ಞೆಯಿಂ
ದಿಳೆಯ ಸಜ್ಜನರ ಪಾಲಿಸಲೆಂದು ಬಂದಂ ನಿ
ರ್ಮಳ ವೀರಶೈವಮಂ ಮರೆದು ನೀಂ ಶುದ್ಧಶೈವವನಾಂತು ನಿಜಮೋಕ್ಷದ
ನೆಲೆಯನಿಳಿಕ್ಕೆದನೆಂದಾನು ಬಂದೆಂ ದೇವ
ಲಲನಾಧಿಪತಿ ರಾಮನಾಥನಿಂ ದೀಕ್ಷೆಯಂ
ಸಲೆ ಪಡೆದು ವೀರಶೈವೋದ್ಧರಣಮಂ ಮಾಡಲಚಲಪದವಪ್ಪುದೆನಲು ॥
೫-೪-೪

ಎಂದು ಹೇಳುವರಂ. ಅದನ್ನು ಕೇಳಿದ ಏಕೋರಾಮ ಭಯದಿಂದ ತಲ್ಲಣಿಸಿಹೋಗಲಂ ಶಂಕುಕರ್ಣ ಅವನನ್ನು ಸಮಾಧಾನ ಪಡಿಸಿದನು. ಏಕೋರಾಮನು ರಾಮೇಶನಾಲಯಕ್ಕೆ ಬಂದು ಬಾಗಿಲುಂ ಮುಚ್ಚಿರುವುದನ್ನು ಕಂಡು ಶಿವನನ್ನು ಕಂರಿತಂ ಪರಿಪರಿಯಾಗಿ ಪ್ರಾರ್ಥಿಸುವನು. ಏಕೋರಾಮನು ಮಾಡುವ ಈ ಪ್ರಾರ್ಥನೆಗಳಂ ಅಂತರಂಗದ ಭಾವಗೀತೆಗಳಂತಿವೆ :

ದೇವ ಕರುಣಾರಾಮ ದೇವ ಸುರಗಿರಿಧಾಮ
ದೇವ ನತಮಂದಾರ ದೇವ ವಿನುತೋದ್ಧಾರ
ದೇವ ಕೈವಲ್ಯಕಾಂತಾಲೋಲ ಮುನಿಶೀಲ ವರಚಿದಂಬರಚೋಳನೆ
ದೇವ ವಿಶ್ವಾಲಂಬ ದೇವ ಭಕ್ತಕುಟುಂಬ
ದೇವ ಪಾವನನಾಮ ದೇವ ಘನನಿಸ್ಸೀಮ
ದೇವ ವಿಶ್ವಾಭೇದ್ಯ ದೇವ ಸಜ್ಜನವೇದ್ಯ ದೇವ ರಾಮೇಶ ಜಯತು॥
೫-೪-೭

ಗುರುವೆ ತೆಗೆಯಯ್ಯಯಜ್ಞಾನದಾವರಣಮಂ
ಗುರುವೆ ತೆಗೆಯಯ್ಯ ಮಾಯಾಮಹಾವರಣಮಂ
ಗುರುವೆ ತೆಗೆಯಯ್ಯ ದೇವಾಸುರರ್ಗಳವಡದ ಮೋಹಕಾರಾಶರಣಮಂ
ಗುರುವೆ ತೆಗೆಯಯ್ಯ ಕೈವಲ್ಯದ ಕವಾಟಮಂ
ಗುರುವೆ ತೆಗೆ ಮೋಕ್ಷಮಂದಿರದ ಕಣ್ಣಡಕಮಂ
ದಿರದೆ ನುತಿಸಲ್ಕರ್ಗಳಂ ಕಳಚಿಬಿದ್ದು ಘಡ ಘಡಮೆಂದು ಕದ ಪೋಗಲು॥
೫-೪-೮

ಏಕೋರಾಮನ ಸ್ತೋತ್ರಗಳಿಗೆ ಶಿವನು ಪ್ರಸನ್ನನಾಗುವನು. ಮತ್ತೆ ಏಕೋರಾಮಂ:

ಕಂಡೆನೆನ್ನಜ್ಞಾನಕುಮುದ ಮಾರ್ತಾಂಡನಂ
ಕಂಡೆನೆನ್ನಾನಂದವಾರ್ಧಿಪೂರ್ಣೇಂದುವಂ
ಕಂಡೆನಜಹರಿ ಸುರಪ ದಿಕ್ಪಾಲಪೂಜಿತ ಪದಾಂಭೋಜನಂ ಧೀರನಂ

ಕಂಡೆನರಿಷಡ್ವರ್ಗ ಗಿರಿವಜ್ರದಂಡನಂ
ಕಂಡೆನಡಿಮುಂಡಿಯಿಲ್ಲದಪ್ರತಿಮ ರೂಪನಂ
ಕಂಡೆ ಮತ್ಹೃತ್ಪುಂಡರೀಕದೊಳ್ ತೊಳತೊಳಗಿ ಬೆಳಗಂವ
ಪರಂಜ್ಯೋತಿಯಂ॥ ೫-೪-೧೦

ಈ ರೀತಿ ಕೊಂಡಾಡುವನು. ಆಗ ಶಿವನಂ ಅವನಿಗೆ ನೀಡಿದ ಆದೇಶ ಇದು :

ಎಂದು ವಂದಿಸಿದ ಏಕೋರಾಮ ಗುರುಂವರನ
ಇಂದುಲೇಖಾವತಂಸಂ ಶಿರವ ಪಿಡಿದೆತ್ತಿ
ನಂದದಿಂ ಗರ್ದುಗೆಯೊಳಮಳ ಪ್ರಾಙ್ಮುಖವಾಗಿ ಕಂಳಿತು ಗಣವರರ ನಡುವೆ
ಹೆಂದದತಿ ಸಪ್ತೋಪದೇಶಮಂ ಪಾಲಿಸಂ
ತ್ರಿಂದಂ ವೊದಲಾದಖಿಳ ಮತಗಳಂ ಪಳಿದಧಿಕ
ಸುಂದರದ ವೀರಶೈವದೊಳೆಸೆವುದೆಂದು ಹರನಂತರ್ಧಿಯಂ ಪೊರ್ದಲು॥
೫-೪-೧೧

ಏಕೋರಾಮ ಮುದ್ರಾಪುರದ ವಿಪ್ರರನ್ನೆಲ್ಲ ಜರೆದು ವೀರಶೈವ ಧರ್ಮಕ್ಕೆ ಮತ್ತಾವ ಧರ್ಮವೂ ಸಾಟಿಯಿಲ್ಲವೆಂದು ಡಂಗುರ ಹೊಯಿಸಿ ನೆರೆದಿದ್ದ ವಿದ್ವಾಂಸರನ್ನೆಲ್ಲ ವಾದದಲ್ಲಿ ಸೋಲಿಸಿ ವೇದಾಗಮಪುರಾಣ ವಾಕ್ಯಗಳಿಂದ ಅವರ ವಾದಗಳನ್ನೆಲ್ಲ ನಿರಸನಮಾಡಿ ವೀರಶೈವಧರ್ಮವನ್ನು ಎತ್ತಿಹಿಡಿದನು. ಪರ್ವತೇಶ ಈ ಪ್ರಕರಣವನ್ನು ತುಂಬ ಮಾರ್ಮಿಕವಾಗಿ ವರ್ಣಿಸಿದ್ದಾನೆ, ಅಸಂಖ್ಯಾತ ಸಂಸ್ಕೃತ ಶ್ಲೋಕಗಳನ್ನು ಉದ್ಧರಿಸಿ ತನ್ನ ಬಹುಶ್ರುತತ್ವವನ್ನು ವ್ಯಕ್ತಪಡಿಸಿದ್ದಾನೆ. ವ್ಯಾಸ-ಏಕೋರಾಮರ ಸಂವಾದವನ್ನು ಅತ್ಯಂತ ತರ್ಕಬದ್ಧವಾಗಿ ನಿರೂಪಿಸಿದ್ದಾನೆ. ಏಕೋರಾಮನ ಪಾತ್ರವನ್ನು ಕವಿ ಸ್ಫುಟಗೊಳಿಸಿದ್ದಾನೆ.

ವಿಶ್ವೇಶ್ವರಲಿಂಗದಿಂದ ವೀರಶೈವೋಪದೇಶವನ್ನು ಪಡೆದ ಶಿವಲೆಂಕ ಮಂಚಣ್ಣ ಕಾಶಿಯಲ್ಲಿ ನೆಲಸಿ "ಅನ್ಯಸಮಯಿಗಳ ಮೂಗನ್ನು ಕತ್ತರಿಸುವವನು" ಎಂಬ ಬಿರುದಿನ ಬಾವುಟವನ್ನು ಎತ್ತಿಸಿ "ಪರವಾದಿ ಗಿರಿವಜ್ರದಂಡ ಪಂಡಿತ" ಎಂದು ಡಂಗುರವನ್ನು ಹೊಯ್ಸಿಕೊಂಡಿದ್ದನು. ಅನ್ಯಸಮಯಿಗಳು ಮಂಚಣ್ಣನನ್ನು ಅಡ್ಡಗಟ್ಟಿ ವಾದಕ್ಕೆ ನಿಲ್ಲಲು ಅನೇಕ ದೃಷ್ಟಾಂತಗಳಿಂದ ಅವರ ವಾದಗಳನ್ನೆಲ್ಲ ನಿರಸನಮಾಡಿ ಶಿವನೇ ಸರ್ವೋತ್ತಮನೆಂಬುದನ್ನು ಸಾರಿತೋರುವನು.

ಶಿವಲೆಂಕಮಂಚಣ್ಣ ಕಲ್ಯಾಣಕ್ಕೆ ಬಂದು ಬಸವೇಶ್ವರನೇ ಮೊದಲಾದ ಪ್ರಮುಖ ಶರಣರನ್ನು ಸಂದರ್ಶಿಸುವನು, ಈತನಲ್ಲಿ ಶಿವಲಿಂಗನಿಷ್ಠೆ ಬಲಿದು ತ್ರಿಕಾಲ

ದಲ್ಲೂ ಶಿರವನ್ನು ಕತ್ತರಿಸಿಕೊಂಡು ಆರತಿಯನ್ನು ಬೆಳಗಿ ಮತ್ತೆ ಶಿರವನ್ನು ಪಡೆದು. ಕೊಳ್ಳುತ್ತಿದ್ದನು. ಶಿವಯೋಗಾನುಭವಶರಧಿಯಲ್ಲಿ ಸದಾ ಮುಳುಗಿರುತ್ತಿದ್ದನು.

ವಾಮನಮುನೀಶ್ವರನಂ ಶಿವಲೆಂಕಮಂಚಣ್ಣನಿಗೆ ನಮಸ್ಕರಿಸಿ ಈ ಭೂಮಿಯಲ್ಲಿ ಅವರು ಅವತರಿಸಿದ್ದು, ಅವರ ಪೂರ್ವಾಪರವನ್ನು ತಿಳಿಸುವಂತೆ ಕೇಳಿಕೊಳ್ಳುವನು. ಶಿವನು ಗಿರಿಜೆಗೆ ಚತುರಾಚಾರ್ಯರ ಪೀಳಿಗೆಯನ್ನೂ ವೀರಶೈವ ಗುರುಮಠದ ಇರವನ್ನೂ ವಾತೂಳ ವೀರಾಗಮ ಪ್ರಮಾಣದಲ್ಲಿ ಹೇಳಿದುದನ್ನು ನಿರೂಪಿಸುವನು.

ಎಲೆ ಮುನಿಯೆ ವೀರಶೈವರ ದೀಕ್ಷೆಯಿಲ್ಲದಿಹ
ಮಲದೇಹಿಯಮಳಲಿಂಗವ ಮುಟ್ಟಬಾರದೆಂ
ದೊಲಿದು ಪರಶಿವನೆ ಗುರುವಾಗನುಗ್ರಹಮೆಸಗಲೆಂದು ಪಂಚಾಚಾರ್ಯರ
ನೆಲೆಯನಾಂತುದಿಸಿದೆವು ಪಂಚಲಕ್ಷಣಕ್ರಮದೊ
ಳಲಘು ಪಂಚಾರ್ಣಮಾರ್ಗದೊಳಾವೆ ತಿಳಿಯಲ್ಕೆ
ಬಲವಂತ ಪಾವನ್ನಮೂರ್ತಿ ಕೃತಯುಗದೊಳೆಂತೆಂದನಾ ಗುರುಪಂಡಿತಂ॥

೫-೬-೫

ಮಹೇಶ್ವರನ ಮೂರ್ತಿಸ್ವರೂಪಗಳು ಅವನ ಇಪ್ಪತ್ತೈದು ಮೂರ್ತಿಗಳಿಗನುಸಾರವಾದ ಇಪ್ಪತ್ತೈದುತತ್ವಗಳಂ ಯುಗಕ್ಕನುಗುಣವಾದ ಆಚಾರ್ಯರ ಹೆಸರುಗಳನ್ನು ವಿವರಿಸುವನು: (೫–೬, ೨೦–೨೩)

ಚತುರಾಚಾರ್ಯಚಾರಿತ್ರದಲ್ಲಿ ಷಷ್ಠಮಕಾಂಡ ಸಾರವತ್ತಾದ ಕಾಂಡ. ವೀರಶೈವಧರ್ಮದ ಸಾರಸರ್ವಸ್ವವನ್ನು ಸಂಪಾದನೆಯ ಪರ್ವತೇಶ ಈ ಕಾಂಡದಲ್ಲಿ ನಿರೂಪಿಸಿದ್ದಾನೆ. ಪುರಾಣಾಗಮ ಶಾಸ್ತ್ರಗಳಿಂದ ಅನೇಕ ಸಂಸ್ಕೃತ ಭಾಗಗಳನ್ನು ಉದ್ಧರಿಸಿದ್ದಾನೆ. ಹಲವಾರು ವೀರಶೈವ ಧಾರ್ಮಿಕ ವಿಷಯಗಳನ್ನು ಪ್ರತಿಪಾದಿಸಿದ್ದಾನೆ.

ಪಂಡಿತಾರಾಧ್ಯಚಕ್ರೇಶ್ವರನು ವಾಮನಮುನಿಗೆ "ವೀರಶೈವಾಚಾರಮಂ ಪುರಾತನ ಪ್ರಚಾರಮನುಕೂಲಿಸುವ ತೆರದಿ" ಹೇಳಿದ್ದಾನೆ. ದೀಕ್ಷಾಕಾಲ, ಮಂಟಪೋಪಕರಣ, ಯೋಗದ ಪ್ರಭೇದಗಳು, ಕರಣದ ಫಲಾಫಲಗಳು, ತಿಥಿರಾಶಿಗಳಂ, ಮಂಟಪರಚನೆ, ಪಂಚಕಲಶಸ್ಥಾಪನೆ, ಋತ್ವಿಜರ ಕಲಶದ ಲಕ್ಷಣಗಳನ್ನು ವಿವರಿಸಿದ್ದಾನೆ.

ಪರಮಋತ್ವಿಜರೆ ಮಠಸ್ಥಲದ ಗುರುಗಳ
ತ್ಯುರುತೆರದ ಭೂಲೋಕ ಮಠಗಳಾವಾವೆನ
ಲ್ಕೊರೆವೆ ಚಂಪಾರಾಮ ಕಾಶಿಯುಜ್ಜಯಿನಿ ಕೊಲ್ಲಿಪಾಕಿ ನಾಲ್ಕುಂ ಮಠಗಳು
ಆರಿಯಲಾ ಮಠಪೀಠ ನಾಲ್ಕುತೆರದಾ ಭಿಕ್ಷೆ
ಗುರುಯೋಗ್ಯರೇ ಕಲಶಕಧಿಕಾರಿಗಳು ನಾಲುಂ
ವರುಂ ತಿಳಿಯೆ ಘನಲಿಂಗತೀತ ಸುವಿರಕ್ತ ಸುಮಹಂತರೆಂದೀ ಧರೆಯುಲಿ ॥

೬-೧-೮೭

ದೀಕ್ಷಾಕಾಲದಲ್ಲಿ ಈ ಕಲಶಾಚಾರ್ಯರಿಲ್ಲದಿದ್ದರೆ ಜಂಗಮರನ್ನೇ ಆಚಾರ್ಯರೆಂದು ತಿಳಿಯಬೇಕು. ಅವರಿಂದಲೇ ದೀಕ್ಷೆ ಪಡೆಯಬಹುದೆಂಬುದನ್ನು ಮುಂದೆ ಈ ರೀತಿ ಹೇಳಿದ್ದಾನೆ :

''ಎಲೆ ಗುರುವೆ ತದ್ವಂಶಜನರಿಲ್ಲದಿರಲೆಂತು
ನೆಲೆಯಾಗಿ ಪೇಳ್ದುದೆನಲಾ ಸಮಯದೊಳಗೆ ಬ
ಲ್ಲಲಘು ಜಂಗಮವನಾ ಪೂರ್ವದಾಚಾರ್ಯರೇದೇ ಬಗೆದು ನೆಲೆಗೊಳಿಪುದು
೬-೧-೮೯

ಆಚಮನ, ಅಭಿಷೇಕಕ್ರಮಗಳನ್ನು ವಿವರಿಸಿದಮೇಲೆ ಲಿಂಗಧಾರಣವಿಧಾನ ವನ್ನು ಹೇಳುವನು : ಶರಣಸತಿ ಲಿಂಗಪತಿ ಎಂಬುದನ್ನು ಈ ಪದ್ಯದಲ್ಲಿ ತಿಳಿಸಿದ್ದಾನೆ.

ಇದುವೆ ನಿನ್ನಾತ್ಮಮಯಲಿಂಗವಾ ಲಿಂಗಕಂ
ವಿದಿತ ನಿನ್ನಯ ಪ್ರಾಣಕಂ ತತ್ತುಗೊತ್ತೆಲ್ಕೆ
ಸದಮಲನೆ ಈ ಲಿಂಗಮುಖದಿಂದಲಂಗಕ್ರಿಯೆಂಗಳನೆಲ್ಲ ಮಾಳ್ಪುದನಿತಂ
ಮುದದಿಂದ ಈ ಲಿಂಗವೇ ಪತಿಯು ಸತಿ ನೀನೆ
ಯೊದವಿ ಈ ಲಿಂಗಮಂ ಬಿಟ್ಟನ್ಯದೈವಗಳ
ಪದಫಲಂಗಳ ಕುರಿತು ಭಜಿಸದೊಡೆಯುದು ನಿಷ್ಫಲಂ ನಿರಯಮಭಿಚಾರವು॥
೬-೩-೩೩

ಲಿಂಗಧಾರಣಮಹತ್ವವನ್ನು ಸಾಂಗವಾಗಿ ವರ್ಣಿಸಿದ್ದಾನೆ. ಯಜುರ್ವೇದ, ಸ್ಕಾಂದ, ಕಾಶೀಕಾಂಡವೇ ಮೊದಲಾದವುಗಳಿಂದ ಸಾಕ್ಷಿಯಾಗಿ ಸಂಸ್ಕೃತ ಭಾಗಗಳನ್ನು ಉದ್ಧರಿಸಿದ್ದಾನೆ.

ಈ ಲಿಂಗವೇ ನಿನಗನಿಷ್ಟಮಂ ಪರಿಹರಿಪು
ದೀ ಲಿಂಗಮಿಷ್ಟಾರ್ಥಸಿದ್ಧಿಯಂ ಪಾಲಿಸುವು
ದೀ ಲಿಂಗ ನಿನ್ನ ಕೈಸಾರಿದಾಕ್ಷಣ ಭೋಗ ಮೋಕ್ಷಂಗಳಹವು ನಂಬು
ಈ ಲಿಂಗದೊಳಗಖಿಳ ತೀರ್ಥಕ್ಷೇತ್ರಗಳಿಹವು
ಈ ಲಿಂಗದೊಳಗಮಿತ ತತ್ವಮೂರ್ತಿಗಳಿರ್ಪ
ವೀ ಲಿಂಗದಿಂದ ಪರವಿಲ್ಲ ದುಃಖಮಂ ಬಿಟ್ಟು ನಿತ್ಯಸುಖಿಯಾಗಿರ್ಪುದು॥
೬-೩-೩೬

ವರ ನಾಲ್ಕುವೇದಗಳುಂ ಶಾಸ್ತ್ರ ಪೌರಾಣತತಿ
ಪರಮ ಕಾಮಿಕ ವಾತುಲಾಂತಮೂದಾಗಮಂ
ಸ್ಥಿರದುಪನಿಷದ್ವಾಕ್ಯ ಮುಂತಾದವೆಲ್ಲವುಂ ಲಿಂಗಧಾರಣವಿಧಿಯನೆ

ಒರೆವುತಿಹವದರಿನಿಂ ಲಿಂಗಧಾರಣವ ನಿನ
ಗಿರದಂಸುರಿದೆವು ವೀರಶೈವಂಗೆಯೊಗಳುಂ
ವರಲಿಂಗಧಾರಣವೆ ಕಾರಣವನಾದಿಸಂಸಿದ್ಧವಾ ವೀರಶೈವಂ ॥

೬-೩-೫೦

ತರುವಾಯ ಲಿಂಗಪೂಜಾವಿಧಾನ, ವಿವಿಧ ಪತ್ರಪುಷ್ಪಗಳ ಅರ್ಚನೆ, ನಾನಾವಿಧವಾದ ನೈವೇದ್ಯಗಳನ್ನು ಸಮರ್ಪಿಸುವ ಕ್ರಮಂಗಳನ್ನು ತಿಳಿಸಿ ಶಿವಪೂಜೆಯ ಫಲವನ್ನು ಹೇಳುತ್ತಾನೆ.

ವೀರಶೈವ ಧರ್ಮದಲ್ಲಿ ಗುರುಲಿಂಗ ಜಂಗಮಕ್ಕೆ ಮಹತ್ತರವಾದ ಸ್ಥಾನವಿದೆ, ಗುರುವಿಗೆ ವಿಶೇಷ ಪ್ರಾಧಾನ್ಯ : ಅದನ್ನೇ ಕವಿ ಹೀಗೆ ಹೇಳಿದ್ದಾನೆ.

ಕೇಳಯ್ಯ ವೀರಶೈವಾಚಾರವೆಂಬುದಕೆ
ಮೂಲವೇ ಗುರುಸೇವೆ ಗುರುಸೇವೆಯಿಲ್ಲದವ
ಮೇಲಾವುದಾಚರಿಸಲಾತಗಾ ಫಲಸಿದ್ಧಿಯಾಗದಿದು ಶಾಸ್ತ್ರಸಿದ್ಧಂ
ಆಲೋಚನೆಯಂಗೈದಂ ಮನದೊಳಗೆ ಗುರುಪಾದ
ದೂಳಿಗವನೇ ಮಾಡಬೇಕೆಂದಂ ನಿರ್ಧರಿಪು
ದೇ ಲಲಿತಚಾರಿತ್ರ ಮಾನಸಿಕ ಗುರುಪೂಜೆಯೆಂದು ಪೇಳ್ವರ್ ಪಿರಿಯರುಂ॥

೬-೬-೩

ಶಿವನೆ ಗುರು ಗುರುವೆ ಶಿವ ಗುರುವುಳಿದು ಶಿವನಿಲ್ಲ
ಶಿವನುಳಿದು ಗುರುವಿಲ್ಲ ಶಿವನೆ ಗುರುರೂಪದಿಂ
ಭುವನದೊಳಂ ಚರಿಸುತಿಹನದರಿಂದ ಗುರುಹಸ್ತಮಂ ಮಸ್ತಕದೊಳಿಡಲ್ಕೆ
ಸವೆದಘಮಂದಂ ವಿಶ್ವಭೇಷಜಮೆನುತ್ತ ವೇ
ದವೆ ಪೇಳ್ವುದಾವ ತಾತ್ಪರ್ಯಮಂ ಸಂಗ್ರಹಿಸಿ
ಶಿವನೆಂಬ ಪರವಸ್ತು ಗುರುಹಸ್ತಗತಮಾದ ಧನವೆಂದು ಭಾವಿಸುವುದು॥

೬-೬-೯

ಷಡ್ವಿಧದ ಸಂಸ್ಕಾರವನ್ನು ತಿಳಿಸಿ ಅದಕ್ಕೆ ತಾತ್ಪರ್ಯಸಂಗ್ರಾಹಕ ಶ್ಲೋಕಗಳು ವೀರಶೈವಾಮೃತ ಪುರಾಣದಲ್ಲಿರುವುದಾಗಿಯೂ ಗ್ರಂಥವಿಸ್ತಾರ ಭಯದಿಂದ ಅವನ್ನು ಬಿಟ್ಟಿರುವುದಾಗಿಯೂ ಹೇಳಿದ್ದಾನೆ. ಷಡ್ವಿಧ, ಧರ್ಮಷಡ್ವರ್ಗ, ವೀರಶೈವಾಚಾರ –ಇವನ್ನು ಮುಂದಿನ ಪದ್ಯಗಳಲ್ಲಿ ಸೂತ್ರರೂಪದಲ್ಲಿ ವಿವರಿಸಿದ್ದಾನೆ :

ಧರಣಿಯಂಲಿ ಭೃತ್ಯನೆನಿಸುವ ತನ್ನ ದೇಹಮಂ
ಚರಲಿಂಗಕಿತ್ತವಂ ವೀರಭೃತ್ಯಂ ಗೃಹಾ
ಭರಣ ಪಶುಪುತ್ರದಾರಾದಿಗಳ ಜಂಗಮಕ್ಕಿತ್ತವಂ ಸಮಯಿಯೆನಿಪಂ
ಮರಳಿ ಮೋಹಕ್ಕೆ ಮೈಗೊಡದವಂ ಸಜ್ಜನವಿ
ಸರದಿ ಸಕಲಾವಸ್ಥನೆನಿಪನೀ ಷಡ್ವಿಧದ
ಪರಮ ಸಜ್ಜನಿಕೆಯಂ ತಿಳಿದು ಶಿವಶಾಸ್ತ್ರ ರೀತಿಯಲಿ ತಾನಾಚರಿಪುದು ॥

೬–೬–೧೮

ಶಿವಭಕ್ತರಲಿ ಕುಲವನೋಡದೇ ತರಬೇಕು
ಯುವತಿಯರ ಮೇಣವರಿಗಂ ತನ್ನೊಳಿರ್ದೊಡಂ
ಯುವತಿಯರ ಕೊಡಬೇಕು ಚರ್ಮಪಾತ್ರೆಯಲಿ ಘೃತತೈಲ ಜಲಮಿರ್ದೊಡದನು
ಸವಿಯಂದೇ ಬಿಡಬೇಕು ಕಾಲಕಾಲದಲಿ ಲಿಂ
ಗವ ಪೂಜಿಸದೆ ಭೋಜನವ ಮಾಡಲಾಗದಾ
ಶಿವನಲ್ಲದನ್ಯದೈವವ ಭಜಿಸಲಾಗದೆಂದುದು ವೀರಭದ್ರೀಯವು ॥

೬–೬–೧೯

ಕಾಮವಿರಬೇಕು ಮುಕ್ತಿಯ ವರಿಸುವಲ್ಲಿ ದು
ರ್ನಾಮಕಾ ಧರ್ಮದೊಳ್ ಕ್ರೋಧವಿರಬೇಕಂ ಗಿರಿ
ಜಾಮನೋಹರನಂಘ್ರಿಯರ್ಚನೆಯೊಳಿರಬೇಕು ಲೋಭಂ ಶಿವಾಗಮದಲಿ
ವ್ಯಾಮೋಹವಿರಬೇಕು ದುರ್ವಾದಿ ವರ್ಗದೊಳ್
ಭೂಮಮದವಿರಬೇಕು ತನ್ನ ವಂಚಿಪ ಯುವತಿ
ಹೇಮಭವನನಾರಾಮಗಳಲಿ ಮತ್ಸರವಿರಲ್ಕಿವೆ ಧರ್ಮಷಡ್ವರ್ಗವು ॥

೬–೬–೨೦

ತರುವಾಯ ಲಿಂಗಾಚಾರ ಸದಾಚಾರ ಭೃತ್ಯಾಚಾರ ಶಿವಾಚಾರ ಗಣಾಚಾರ ಎಂಬ ಪಂಚಾಚಾರ ಲಕ್ಷಣಗಳನ್ನು ವಿವರಿಸಿದ್ದಾನೆ. ಷಡ್ವಿಧವ್ರತಗಳನ್ನೂ ಅವುಗಳ ಸ್ವರೂಪವನ್ನೂ ತಿಳಿಸಿ ಅರುವತ್ತುಮೂರು ಶೀಲಗಳನ್ನು ನಿರೂಪಿಸಿದ್ದಾನೆ.

ಷಟ್ಸ್ಥಲ ನಿರೂಪಣೆ ಅದರ ಭೇದೋಪಭೇದಗಳನ್ನು ವರ್ಣಿಸಿದ್ದಾನೆ. ಅವಧಾನದ ಬಗೆಗೆ ಹೀಗೆ ಹೇಳಿದ್ದಾನೆ.

ಅವಧಾನಮುಳವಟ್ಟೊಡಾತನೇ ನಿಜಭಕ್ತ
ನವಧಾನಮುಳವಟ್ಟೊಡಾತನೇ ಮಾಹೇಶ
ನವಧಾನಮುಳವಟ್ಟೊಡಾತಂ ಪ್ರಸಾದಿಯೈ ಪ್ರಾಣಲಿಂಗಿಯು ಶರಣನೈ

ಅವಧಾನವಂಳವಟ್ಟೊಡಾತನೈಕ್ಯಂ ರೇಣಂ
ಕವೇರಣ್ಮ ಮುಂಖ್ಯ ಶಿವಪ್ರಮಥರೊಳಗಾಲಿಸ
ಲ್ಕವನೊರ್ವನಲ್ಲದೀ ಭುವನದಲಿ ಸಂಚರಿಪ ಜಂತುಗಳೊಳೊರ್ವನಲ್ಲ॥

೬-೭-೬೨

ಇದಕೆ ವಿಸ್ತಾರವಂರಿವುದು ತೋಂಟದಾರ್ಯರಿಂ
ದುದಿಸಿರ್ದ ಷಟ್ಸ್ಥಲದದೀಪಿಕೆಯೊಳಾಮೇಲೆ
ಇದರರ್ಥವನೆ ಚನ್ನಬಸವೇಶ್ವರಂ ರಾಜಯೋಗವಚನದಲ್ಲಿ ಪೇಳ್ದಂ
ಅದರಿಂದ ವಿಸ್ತರಿಸಲಿಲ್ಲದೀ ಕೃತಿಯಲ್ಲಿ
ಚದುರರಾಲಿಪುದರ್ಪಿತವನುವಂವಧಾನವಂ
ಮಂದದಿಂದ ಸಾಮರಸ್ಯವ ತಿಳಿದವನೆ ಮಂಹಾವೀರಶೈವಂ ಶಾಂಭವಂ ॥

೬-೭-೬೮

ಸದಾಚಾರ ನಿಯಂತಾಚಾರ ಗಣಾಚಾರ, ಇಷ್ಟಲಿಂಗ ಪ್ರಾಣಲಿಂಗ ತೃಪ್ತಿಲಿಂಗ ಸ್ವಯಲಿಂಗ ಚರಲಿಂಗ ಪರಲಿಂಗ ಇವುಗಳ ವಿವರಗಳನ್ನು ತಿಳಿಸಿ ನಿಜವೀರಶೈವನ ಲಕ್ಷಣವನ್ನು ಈ ರೀತಿಯಾಗಿ ತಿಳಿಯಪಡಿಸಿದ್ದಾನೆ:

ಇಂತು ಷಟ್ಸ್ಥಲದ ಬೇದೋಪಭೇದಂಗಳಂ
ಸಂತತಂ ತಿಳಿದಿದರೊಳಾಸಕ್ತನಾಗಿ ಮೇ
ಣೆಂತು ಸಂಸಾರಿಕದ ತಾಪವೊತ್ತರಿಸಿದೊಡಮಲ್ಲಿ ಧೈರ್ಯಂಗುಂದದೆ
ಜಂತುವರ್ಗದಲಿ ನರತನುವೆತ್ತಿ ಮೇಣಿಲ್ಲಿ
ಕಂತುವೈರಿಯ ಪಾದವಂ ಸೇರಿದೀಚೆಗೆ
ನ್ನೆಂತಾದೊಡಂ ಭವದಿ ಬರಬಾರದೆಂಬನೇ ನಿಜವೀರಶೈವನಪ್ಪಂ ॥

೬-೭-೯೨

ವಾಮನ ಮುನಿಗೆ ಪಂಡಿತಾರಾಧ್ಯರು ಸಕಲರಾಹಸ್ಯಾರ್ಥವನ್ನು ತಿಳಿಸಿ ಆತನನ್ನು ಬೀಳ್ಕೊಂಡರಂ. ಆ ಮೇಲೆ ಚತುರಾಚಾರ್ಯರು ನಡೆಸಿದ ಮತ್ತು ನಡೆಸಬೇಕಾದ ಕರ್ತವ್ಯಗಳನ್ನು ಅರುಹಂವನಂ:

ಇಂತು ಚತುರಾಚಾರ್ಯವರರಿಳೆಗೆ ಬಂದು ಘನ
ಕಂತುರಿಪುಮತವಂ ಪ್ರತಿಷ್ಠಿಸಿ ಕೃತಾದಿಯುಂಗ
ಸಂತತಿಯೊಳೀತು ನಡಸಿದರೊ ನಿರ್ಭರವಾಗಿ ವೀರಶೈವಾಚಾರವಂ
ಅಂತು ಕಲಿಯುಗದೊಳಗೆ ನಡಸಿ ಭಕ್ತರ್ಗೆ ಬಿಡ
ದಂತಿರಂವ ಸಂಸಾರಪಾಶವಂ ಪರಿದು ನಿ
ಶ್ಚಿಂತಪದಮಂ ಪಾಲಿಸುತ್ತಿರ್ದರೀಶಾಜ್ಞೆ ಯಾವಪರಿಯಿಂದಿರ್ಪುದೊ ॥

೬-೭-೧೧೬

ಆ ರೀಶಿಯಿಂದಲೇ ಕೃತವಿವಾಹಂಗಳಿಂ
ದೌರಸರ ಪುತ್ರರಂ ಪಡೆದು ಕರಕಮಲದೊಳ್
ಬೇರೆ ಕೆಲರಂ ಪುತ್ರರಂ ಪಡೆದು ವೇಣವರಿಗಾಚಾರ್ಯಪಟ್ಟವಿತ್ತು
ಈ ರೀತಿಯಂ ಮೀರದೇ ನಿಮ್ಮ ನಿಮ್ಮ ಕಲ
ಶಾರಂಭದಲ್ಲಿ ಪರಿಣತರಾಗಿ ಲಿಂಗ ಸಂ
ಸ್ಕಾರಮಂಗೈದು ಭವದಲ್ಲಿ ಬೇಸರನಾಂತ ಸನ್ಮುಮುಕ್ಷುವ್ರಾತಕೆ ॥

೬-೭-೧೧೯

ಮುಮುಕ್ಷುವ್ರಾತಕ್ಕೆ ಶಾಂಕರಸ್ಥಾನವನ್ನು ಕೊಟ್ಟು ಅವರವರ ಯೋಗ್ಯತೆಗೆ ಅನುಸಾರವಾಗಿ ಕ್ರಿಯಾಪಾದ ಚರ್ಯಾಪಾದ ಯೋಗಪಾದಗಳಲ್ಲಿ ಯುಕ್ತವಾದುದನ್ನು ವೀರಶೈವ ಜ್ಞಾನವನ್ನು ಸಾಂಗವಾಗಿ ತಿಳಿಸಿ ಸಾಲೋಕ್ಯಪೌರುಷ ಸಾರೂಪ್ಯಪೌರುಷ ಸಾಯುಜ್ಯ ಪೌರುಷವನ್ನು ಕರತಲಾಮಲಕಮಾಡಿಕೊಟ್ಟು "ಮೂರುವೇಳೆಗು ನಮ ವಾಕ್ಯಮಂ ಮರೆಯದೇ ವೀರಶೈವ ಪ್ರತಿಷ್ಠೆಯಂ ಮಾಡಿ ಮಕ್ಕಳಿರ ಶಿಷ್ಯರ್ಕಳಿರ ನಿಶ್ಚಯಂ" ಎಂದು ಆಜ್ಞೆಮಾಡುವನು. ಭವಸಾಗರದಲ್ಲಿ ತೊಳಲಾಡುತ್ತಿರುವ ಜೀವಜಾಲಗಳಿಗೆ ಶಿವವನ್ನುಂಟುಮಾಡಬೇಕೆಂಬುದೇ ಶಂಭುವಿನ ಚಿತ್ತ. ಈ ಕೆಲಸಕ್ಕಾಗಿಯೇ ನಮ್ಮನ್ನು ಈ ಲೋಕಕ್ಕೆ ಕಳುಹಿಸಿದ್ದಾನೆ ಎಂಬುದನ್ನು ಈ ಪದ್ಯಗಳಲ್ಲಿ ವಿವರಿಸಿದ್ದಾನೆ.

ಭವದಿ ಬೇಗುದಿಗೊಂಬ ಜೀವಜಾಲಂಗಳಿಗೆ
ಶಿವವೀಯಬೇಕೆಂಬುದೇ ಶಂಭುಚಿತ್ತದೊಳ್
ಪ್ರವಣವಾಗಿಹುದು ಎಳೆಮಕ್ಕಳೆತ್ತಾನೊಂದು ನೆವದಿ ಕೆಂಡವ ಮುಟ್ಟಲುಂ
ತವೆ ಕಂಡ ತಂದೆತಾಯಿಗಳೆಂತು ಸಂತಾಪ
ದವಸರಕೆ ಗುರಿಯಾಗುವರೊ ಬಳಿಕ ಶಂಭು ತಾ
ನಿವರಂತೆ ವಿಷಯದಾಸೆಗೆ ಸಿಕ್ಕಿ ಕೆಡಲೆಳಸುತಿಹ ಜಂತುಜಾಲಂಗಳಂ ॥

೬-೭-೧೨೦

ನೋಡಲಾರದೆ ಪರಮ ದಯೆಯಿಂದ ನಮ್ಮನೀ
ನಾಡಿಗಟ್ಟಿದ ಮೇಣದಿಲ್ಲದಿರ್ದೊಡೆ ನಮಗೆ
ಕೂಡಲನುವಾದ ಪ್ರಯೋಜನಗಳೇನಿರ್ದಪೀಯಶಂದ್ವಾಧ್ವದಲ್ಲಿ
ಆಡಿದಂತಾಡಿದೆ ಉಮಾಪತಿಯನದರಿಂದ
ಮಾಡಿ ಶಿವದೀಕ್ಷೆಯಂ ಜನರನುದ್ಧರಿಸೆಂದು
ಕೂಡೆ ಕಯ್ಯೆತ್ತಿ ತ್ರಿರಾವೃತ್ತಿ ದೃಢವಾಗಿ ಪೇಳಿದರ್ ತನಯತತಿಗೆ ॥

೬-೭-೧೨೧

ಇದನ್ನು ಕೇಳಿದ ರುದ್ರಮುನಿ "ಭಕ್ತಿಯಿಂದ ತಾನಾಗಿ ಬಂದವರ್ಗ ಶಿವ ದೀಕ್ಷೆಯಂ ಕೊಡುವುದಾವಶ್ಯಕಂ ತಿಳಿಯದವರ್ಗೆ ಯೋಗಾನುಯೋಗದಿಂ ಬಂಧಂಗಳ

ನಿಜಜಠರ ಭಾಗಮಂ ಪೊರೆಯಲ್ಕೆ ದೀಕ್ಷೆಯೊಂತವರಿಗಿನ್ನೇಗತಿ ಘಟಿಪುದು'' ಎಂಬ ಶಂಕೆಯನ್ನು ವ್ಯಕ್ತಪಡಿಸುವನಂ. ಆಗ ರೇವಣಸಿದ್ದ, ಇದೇ ಶಂಕೆಯನ್ನು ಹಿಂದೆ ನಂದೀಶ್ವರನು ಶಿವನಲ್ಲಿ ವ್ಯಕ್ತಪಡಿಸಿದಾಗ ''ಪಶುಪತಿಯುಸುರ್ದನೆಲೆ ವೃಷಾಧಿಪ ಕೇಳು ಮೇಣಾವಮತಿಯಿಂದ ಪೆರ್ಬೆಲೆಯನ್ನೈದದಿಹ ಕಾರ್ಬೊನ್ನಿಗಾವುದೊಂದು ನೆವದಿಂ ಕ್ಷಿತಿಯೊಳಗೆ ಸಿದ್ಧರಸ ಸಂಪರ್ಕವಾಗಲುನ್ನತ ಕನಕವಾಗಿ ಪೂರ್ವಾವಸ್ಥೆ ಐದುವದೆ'' ಎಂದು ಹೇಳಿದ್ದನ್ನು ತಿಳಿಸುವನಂ. ಮತ್ತೆ ''ಮತಿವಂತ ಕಾಡಕಲ್ಲಂ ತಂದು ಪಂಚ ಸೂತ್ರಪ್ರಕಾರದಿಂ ಲಿಂಗಮಂ ಗೈದು ಪೂಜಿಸಿದ ಮೇಲಾರಿಂದ ವಂದನೆಗೆ ಮೇದಿನಿ ಯೊಳದು ಯೋಗ್ಯಮಾಗದು'' ಎಂಬ ದೃಷ್ಟಾಂತವನ್ನು ನೀಡುವನಂ. ಆದುದರಿಂದ ದೀಕ್ಷೆಯನ್ನು ಹೊಂದಿ ಶಿವಭಕ್ತರಾದವರು ಒಂದು ಅಥವಾ ಎರಡೇ ಭವಗಳಲ್ಲಿ ಮುಕ್ತಿ ಯನ್ನು ಪಡೆಯುತ್ತಾರೆ. ಅವರಿಗೆ ಮೂರನೆಯ ಜನ್ಮವೆಂಬುದೇ ಇಲ್ಲ. ಈ ಕಾರಣಕ್ಕಾಗಿಯೇ ನಾವು ''ಶಂಭುವಿಂದಿಳೆಯೊಳವತರಿಸಿದೆವು'' ಎಂದು ಹೇಳಿ ಜನತೆಗೆ ಉದ್ಧಾರಮಾರ್ಗವನ್ನು ತೋರಿ ಶಂಭುವಿನ ಸಂದೇಶವನ್ನು ಸಾರಿದ ಮೇಲೆ :

ಯಾವಾವಲಿಂಗದಿಂದಿಳೆಗೆ ಬಿಜಯಂಗೈದ
ರಾವಾವ ಲಿಂಗಸನ್ನಿಧಿಗೈದಿ ಕೈಮುಗಿದು
ದೇವದೇವನೆ ಮಹಾದೇವನೇ ಶಂಭುವೆ ವಿರೂಪಾಕ್ಷನೇ ಗಿರಿಶನೆ
ನೀವಿಲ್ಲಿಗೆಮ್ಮಟ್ಟಿದೂಳಿಗವ ಮಾಡಿದೆವು
ತೀವಿ ಮೇಲಣ ಜಗತ್ಪಾವನೋದ್ಯೋಗಕ್ಕೆ
ಸೇವಕರ ಶಿಷ್ಯರಂ ತನಯರಂ ನಿಲಿಸಿದೆವು ಮುಂದಾವುದೆಮಗೆ ಬೆಸಗೈ ॥
೧-೭-೧೨೮

ಎಂದು ದಂಡಪ್ರಣಾಮವನ್ನು ಮಾಡಿ ಪ್ರಾರ್ಥಿಸಿಕೊಳ್ಳುವರು. ತಾವು ಉದ್ಭವಿಸಿದ ಲಿಂಗಗಳೊಳಗೇ ಐಕ್ಯವಾಗುವರು.

ಚತುರಾಚಾರ್ಯ ಚಾರಿತ್ರವನ್ನು ಸಮಗ್ರವಾಗಿ ವ್ಯಾಸಂಗಮಾಡಿದ ಮೇಲೆ ಹಲವಾರು ಸಮಸ್ಯೆಗಳು ಎದುರಾಗುತ್ತವೆ. ಸಂಪಾದನೆಯ ಪರ್ವತೇಶ ತನ್ನ ಕೃತಿಯ ಆದಿಯಲ್ಲಿ ಪಂಚಕ ಕಲಶದಾಚಾರ್ಯರ ಸ್ವಾಚಾರ್ಯಚಾರಿತ್ರವನ್ನು ಹೇಳುವುದಾಗಿ ಘೋಷಿಸಿದ ಅನಂತರ 'ಚತುರ್ಗುರು ಚಾರಿತ್ರ' ವನ್ನು ರಚಿಸಿರುವುದಾಗಿ ಹೇಳಿದ್ದಾನೆ. ಇವನು ಹೇಳಿರುವ ರೇವಣೇಶ, ಮರುಳೇಶ, ಪಂಡಿತ, ಏಕರಾಮಾರಾಧ್ಯರ ಸದಮಲ ಸುಚಾರಿತ್ರವಾದ ಈ ಚತುರ್ಗುರುಚರಿತದಲ್ಲಿ ವಿಶ್ವಾರಾಧ್ಯರ ಹೆಸರೇ ಬಿಟ್ಟುಹೋಗಿದೆ. ಆದರೆ ಈ ಕೃತಿಯ ಐದನೆಯ ಕಾಂಡದಲ್ಲಿ ಶಿವಲೆಂಕಮಂಚಣ್ಣ ಪಂಡಿತಾರಾಧ್ಯರ ಚರಿತ್ರೆಯನ್ನು ನಿರೂಪಿಸಿದ್ದಾನೆ. ಈ ಶಿವಲೆಂಕಮಂಚಣ್ಣ ಪಂಡಿತನೇ

ವಿಶ್ವೇಶ್ವರಾಚಾರ್ಯನೆಂದಂ ಭಾವಿಸಿ ಆತನೊಡನೆ ಸವಿಸ್ತರಿಸಬೇಕಾಗಿದೆ, ಕವಿ ಈ ರೀತಿ ಮಾಡಿರುವುದರ ಉದ್ದೇಶವಾಗಲಿ ಹಿನ್ನೆಲೆಯಾಗಲಿ ಅರ್ಥವಾಗುವುದಿಲ್ಲ.

ಪಂಚಾಚಾರ್ಯರ ಚರಿತ್ರೆ ಇಡಿಯಾಗಿ ಎಲ್ಲಿಯೂ ಲಭ್ಯವಾಗುವುದಿಲ್ಲ. ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣದಲ್ಲಿ ಪಂಡಿತಾರಾಧ್ಯರ ಚರಿತ್ರೆ ವಿಸ್ತಾರವಾಗಿ (8ನೆಯ ಕಾಂಡ ಸಂಧಿ 5-6-7) ಬಂದಿದೆ. ಕ್ರಿ. ಶ. ಸು. 1650 ರಲ್ಲಿದ್ದ ಸಿದ್ಧನಂಜೇಶನ ಗುರುರಾಜಚಾರಿತ್ರದಲ್ಲಿ ಈ ಆಚಾರ್ಯರ ಚರಿತ್ರೆ ಸಂಕ್ಷೇಪವಾಗಿ ನಿರೂಪಿತವಾಗಿದೆ. ಪರಮಶಿವಧರ್ಮೋತ್ತರದಲ್ಲಿ ಶಂಕರನು ಪಾರ್ವತಿಗೆ ದೀಕ್ಷಾ ವಿಧಿಯನ್ನು ಆಚಾರ್ಯರ ಉದ್ಭವವನ್ನು ಹೇಳಿದ್ದಾನೆ. ಅದನ್ನೇ ಸಿದ್ಧನಂಜೇಶ,

ಒರೆವೆನಾಚಾರ್ಯರುದ್ಭವವನಾ ಪರಮ ಸ
ದ್ಗುರುವಂಶವಂ ಶಿವನ ಪಂಚವಿಂಶತಿಲೀಲೆ
ಹರಪೂಜೆಯಂ ಪಂಡಿತಾರಾಧ್ಯರೊರೆದ ಗಣಸಾಹಸ್ರನಾಮಂಗಳಂ
ಧರೆಯಲ್ಲಿ ಮತ್ತೆ ಶಿವಕೃಪೆವಡೆದ ನೂತನದ
ಹರಪುರಾತರ ಕಥೆಗಳಂ ಸಿದ್ಧನಂಜೇಶ
ಗುರುನಿರೂಪದೊಳು ಗುರುರಾಜಚಾರಿತ್ರದೊಳು ಬುಧರ ಬಗೆ ಬಯಸುವಂತೆ

(ಗುರುರಾಜ ಚಾರಿತ್ರ ೧-೮)

ಈ ಪದ್ಯದಲ್ಲಿ ಹೇಳಿದ್ದಾನೆ,

ಪಾರ್ವತಿ ಪರಶಿವನನ್ನು ಕುರಿತು "ಸರ್ವೇಶ ಯುಗ ನಾಲ್ಕರೊಳು ನೀವು ಗುರು ರೂಪಿನಿಂ ಜಗವ ಪಾಲಿಸಿದ ಪರಿಯ ಲೇಸಾಗಿ ಪೇಳ್ವುದು" (1-50) ಎಂದು ಕೇಳಿ ಕೊಂಡಳು. ಆದರಂತೆ ಪರಮೇಶ್ವರನು ಚತುರಾಚಾರ್ಯರ ಚರಿತ್ರೆಯನ್ನು ಹೇಳು ವನು. ಆ ಚತುರಾಚಾರ್ಯರು ರೇಣುಕ, ಮರುಳಸಿದ್ಧ, ಮಲ್ಲಿಕಾರ್ಜುನ ಪಂಡಿತಾ ರಾಧ್ಯ, ಏಕೋರಾಮಿ ತಂದೆ. ಆದರೆ ಸಂಧಿ 3ರಲ್ಲಿ ಮತ್ತೆ ಪಾರ್ವತಿ.

ಎಲೆ ದೇವ ನಾಲ್ವರಾಚಾರ್ಯರುಜ್ವಲ ಮಹಿಮೆಂ
ಗಳ ನಿರೂಪಿಸಿದಿರಿನ್ನಾರಾಧ್ಯ ಕಳಶದ
ಗ್ಗಳ ಗುರುವೆನಿಪ್ಪ ವಿಶ್ವೇಶ್ವರಾಚಾರ್ಯರನ್ವಯವ ನಂತವರ ಘನವ
ಒಲಿದೆನಗೆ ಪೇಳಿ ರಕ್ಷಿಸವೇಳ್ಕು ದಯದಿಂದ
........ಮಲಹರಾತ್ಮಕ

ಗುರುರಾಜಚಾರಿತ್ರ (3-2)

ಎಂದು ಪ್ರಾರ್ಥಿಸಿಕೊಳ್ಳುವಳು. ಅನಂತರ ಶಿವನು ವಿಶ್ವೇಶ್ವರನೆಂಬ ಗುರುವರನಾಗಿ ಪಾಲಿಸಿ ಅನುಗ್ರಹ ಮಾಡಿದನು.

ಸಂಪಾದನೆಯ ಪರ್ವತೇಶ ಚತುರಾಚಾರ್ಯಚಾರಿತ್ರದಲ್ಲಿ ರೇವಣ, ಮರುಳೇಶ ಪಂಡಿತ, ಏಕೋರಾಮಾರಾಧ್ಯರ ಚರಿತ್ರೆಯನ್ನು ಹೇಳುವುದಾಗಿ ಘೋಷಿಸಿದ್ದರೂ ಪಂಡಿತಾರಾಧ್ಯರ ಚರಿತ್ರೆಯನ್ನು ಸಂಪೂರ್ಣವಾಗಿ ಬಿಟ್ಟಿದ್ದಾನೆ. ವಿಶ್ವೇಶ್ವರಾಚಾರ್ಯರನ್ನು ಶಿವಲೆಂಕಮಂಚಣ್ಣಪಂಡಿತನೊಡನೆ ಸಮೀಕರಿಸಿದ್ದಾನೆ. ಇದಕ್ಕೆ ಕಾರಣವಾದರೂ ಏನಿರಬಹುದು ಎನ್ನುವುದು ವಿಚಾರಣೀಯ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪಂಚಾಚಾರ್ಯರನ್ನು ಕುರಿತು ಒಂದೆಡೆ ಹೇಳುವ ಕೃತಿಗಳು ಯಾವುವೂ ಉಪಲಬ್ಧವಿಲ್ಲ. ಪ್ರಾಸಂಗಿಕವಾಗಿ ಅಲ್ಲಲ್ಲಿ ಇವರ ಚರಿತ್ರೆ ಅಲ್ಪಸ್ವಲ್ಪ ನಿರೂಪಿತವಾಗಿರುವುದನ್ನು ನಾವು ಕಾಣಬಹುದು. ಆದರೆ ಚತುರಾಚಾರ್ಯರಲ್ಲಿ ಒಬ್ಬೊಬ್ಬರನ್ನೂ ಕುರಿತು ಸ್ವತಂತ್ರಕೃತಿಗಳು ರಚಿತವಾಗಿವೆ. ಅವುಗಳಲ್ಲಿ ನೀಲಕಂಠಾಚಾರ್ಯ ವಿರಚಿತ ಪಂಡಿತಾರಾಧ್ಯ ಚಾರಿತ್ರ (ಸು. 1485) ಹರದನಹಳ್ಳಿ ನಂಜಣಾರ್ಯನ ಏಕೋರಾಮೇಶ್ವರ ಪುರಾಣ (ಸು. 1650) ಹರಿಹರನ ರೇವಣಸಿದ್ಧ ರಗಳೆ (ಸು.1200) ಚತುರ್ಮುಖ ಬೊಮ್ಮರಸನ ರೇವಣಸಿದ್ಧೇಶ್ವರ ಪುರಾಣ (ಸು.1500)ಬಸವ ಕವಿ ರೇವಣ ಸಾಂಗತ್ಯ(ಸು.1700) ದೇವಕವಿ ವಿರಚಿತ ಮರುಳಸಿದ್ಧ ಚಾರಿತ್ರ (1587) ಸದಾಶಿವಯೋಗಿ ವಿರಚಿತ ರಾಮನಾಥ ವಿಲಾಸ (1554) ಗಳನ್ನು ನೋಡಬಹುದು. ಅಲ್ಲದೆ ಈ ಆಚಾರ್ಯರಿಗೆ ಸಂಬಂಧಿಸಿದ ಮಾಹಿತಿಗಳು ಹಲವಾರು ಪ್ರಾಚೀನ ಕಾವ್ಯಗಳಲ್ಲಿ ದೊರೆಯುತ್ತವೆ. ಏಕೋರಾಮಾರಾಧ್ಯರ ವಿಷಯ ವಿರಕ್ತ ತೋಂಟದಾರ್ಯನ ಪಾಲ್ಕುರಿಕೆ ಸೋಮೇಶ್ವರ ಪುರಾಣ ಸಿದ್ಧನಂಜೇಶನ ಗುರುರಾಜ ಚಾರಿತ್ರಗಳಲ್ಲೂ, ಮರುಳಸಿದ್ಧನ ವಿಷಯ ಇದೇ ಗುರುರಾಜ ಚಾರಿತ್ರದಲ್ಲೂ, ರೇವಣಸಿದ್ಧನ ಸಂಗತಿ ಪಾಲ್ಕುರಿಕೆ ಸೋಮೇಶ್ವರ ಪುರಾಣ, ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ, ಶಾಂತೇಶನ ತೋಂಟದ ಸಿದ್ದೇಶ್ವರಪುರಾಣ, ಉತ್ತರದೇಶದ, ಬಸವಲಿಂಗನ ಬಸವೇಶ್ವರ ಪುರಾಣದ ಕಥಾಸಾಗರ, ಸಿದ್ಧನಂಜೇಶನ ಗುರುರಾಜ ಚಾರಿತ್ರ ಶಾಂತಲಿಂಗ ದೇಶಿಕನ ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ, ಪಂಡಿತಾರಾಧ್ಯರ ಚರಿತ್ರೆ ಪಾಲ್ಕುರಿಕೆ ಸೋಮೇಶ್ವರ ಪುರಾಣ, ಲಕ್ಕಣ್ಣದಂಡೇಶನ ಶಿವತತ್ವಚಿಂತಾಮಣಿ, ಗುಬ್ಬಿಯ ಮಲ್ಲಣಾರ್ಯರ ವೀರಶೈವಾಮೃತ ಮಹಾಪುರಾಣ, ಉತ್ತರದೇಶದ ಬಸವಲಿಂಗನ ಬಸವೇಶ್ವರ ಪುರಾಣದ ಕಥಾಸಾಗರ, ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ, ಸಿದ್ಧನಂಜೇಶನ ಗುರುರಾಜಚಾರಿತ್ರ, ಎಳಂದೂರು ಹರೀಶ್ವರನ ಪ್ರಭುದೇವರ ಪುರಾಣ ಇತ್ಯಾದಿ. ಚತುರಾಚಾರ್ಯರನ್ನು ಕುರಿತು ಸಮಗ್ರವಾಗಿ ರಚಿತವಾಗಿರುವ ಕೃತಿಯೆಂದರೆ ಸಂಪಾದನೆಯ ಪರ್ವತೇಶನ ಚತುರಾಚಾರ್ಯ ಚಾರಿತ್ರ ಎಂದು ಧಾರಾಳವಾಗಿ ಹೇಳಬಹುದು.

ಇವನಾದ ಮೇಲೆ ಬಂದ ಕ್ರಿ.ಶ. 1830ರ ಸೋಮನೆಂಬ ಕವಿ ಚತುರಾಚಾರ್ಯ ಪ್ರಬಂಧವನ್ನು ಭಾಮಿನಿಷಟ್ಪದಿಯಲ್ಲಿ ಬರೆದಿದ್ದಾನೆ. ಇದರಲ್ಲಿ 29 ಸಂಧಿಗಳೂ 1413 ಪದ್ಯಗಳೂ ಇವೆ.

ಚತುರ್ಯುಗಗಳಿಗೆ ಯಾರು ಗುರುಗಳು, ಶಿವಭಕ್ತಿ ಯಾರಿಂದ ಉತ್ಪತ್ತಿಯಾಯಿತು ಎಂದು ಶೌನಕನಂ ಪ್ರಶ್ನಿಸಲು ಸೂತನು ಹೇಳಿದನು. ಆದರಂತೆ-

ಶುದ್ಧರೇವಣಸಿದ್ಧ ಮರುಳು
ಸಿದ್ಧನೇಕೋರಾಮಪಂಡಿತ
ರಾಧ್ಯರೆಂಬಭಿಧಾನವಿಟ್ಟು ಯುಗಕ್ಕೆಯೋರೋರ್ವ
ಮುದ್ದಿತದಿ ಗುರುವಾಗಿ ಭಕ್ತರ
ನುದ್ಧರಿಸಿ ಪರವಾದ ವರ್ಜಿಸಿ
ಬದ್ಧ ಭವಿಗಳಿಗೆಲ್ಲ ಲಿಂಗವ ಬಿಂಬಿಸಿದ ಬಳಿಕ॥

ಚತುರಾಚಾರ್ಯ ಪ್ರಬಂಧ (೧-೧೯)

ಯುಗಯುಗಕ್ಕೋರೋರ್ವರಂಗಳತಿ
ಸೊಗಸಿನಿಂದೆಮ್ಮುದರದಲಿ ಬಂ
ದೊಗುಮಿಗೆಯೊಳಡಕಾಗುವುದು ನೀವೆಂದು ನೇಮಿಸುತ
ಆಗಜೆಯರಸನದೃಶ್ಯಮಾಗಲು
ಗಗನಮಾರ್ಗದಿ ಸುರರು ನೋಡಿ ಬೆ
ರಗುವಡೆದರೇನೆಂಬೆನೈ ಮುನಿವರರೆ ಕೇಳೆಂದ॥

ಚತುರಾಚಾರ್ಯ ಪ್ರಬಂಧ (೧-೨೦)

ಎಂದು ಹೇಳಿದ ಸೋಮಕವಿ ಚತುರಾಚಾರ್ಯ ಚರಿತ್ರೆಗೆ ಗಣನೀಯ ಪ್ರಾಮುಖ್ಯತೆಯನ್ನು ಕೊಡದೆ ಶಿವಶರಣರ ಕಥೆಗಳನ್ನೇ ಹೇಳಿಕೊಂಡು ಹೋಗಿ ಕೊನೆಯಲ್ಲಿ.

ಚಿತ್ರದಿಂ ಸೂತಮುನಿಯುಸುದರ್ಾ
ಸೂತ್ರದಿಂ ಗಂಗಾಧರ ಘನ ಸು
ಶಾಸ್ತ್ರಿಯಾಂಧ್ರದಿ ಪೇಳಿದನುವವರಡಿಗಳಿಗು ಮಣಿದು
ಧಾತ್ರಿ ಸತ್ಕವಿ ಜನಕೆ ನಮಿಸಿ ಪ
ವಿತ್ರ ಚತುರಾಚಾರ್ಯರ ಕೃತ
ಸ್ತೋತ್ರ ಮಾಡಿದೆನಿಳೆಯೊಳಾನಿರದೊಲಿದು ಕೇಳುವುದು॥

ಚತುರಾಚಾರ್ಯ ಪ್ರಬಂಧ (೨೯-೨೩)

ಎಂದು ಹೇಳಿ ಕೃತಿಯನ್ನು ಮುಗಿಸಿದ್ದಾನೆ.

ಚತುರಾಚಾರ್ಯ ಪುರಾಣಕ್ಕೆ ಯಾವುದು ಆಕರಗ್ರಂಥ ಎಂಬುದನ್ನು ಪರ್ವತೇಶ ತಿಳಿಸಿಲ್ಲ. ಈತನಿಗಿಂತ ಹಿಂದಿನ ಪ್ರಾಚೀನ ಕಾವ್ಯಗಳಲ್ಲಿ ಬಿಡಿಬಿಡಿಯಾಗಿ ಬಂದಿರುವ ಈ ಆಚಾರ್ಯರ ಚರಿತ್ರೆಗಳನ್ನು ಒಟ್ಟುಗೂಡಿಸಿರಬಹುದೆಂದು ಭಾವಿಸಬಹುದು. ವೀರಶೈವಧರ್ಮದ ವಿಶಿಷ್ಟ ಮಾಹಿತಿಯನ್ನು ವೀರಶೈವಾಮೃತ ಮಹಾಪುರಾಣದಿಂದ ಸ್ವೀಕರಿಸಿರುವುದಕ್ಕೆ ಸಾಕಷ್ಟು ಆಧಾರಗಳಿವೆ. ವೀರಶೈವಾಮೃತ ಮಹಾಪುರಾಣದ ಏಳು ಮತ್ತು ಎಂಟನೆಯ ಕಾಂಡಗಳಲ್ಲಿ ಬರುವ ಈ ಧಾರ್ಮಿಕ ಪ್ರಕ್ರಿಯೆಗಳನ್ನು ವಿಧಿವಿಧಾನಗಳನ್ನು ಚತುರಾಚಾರ್ಯ ಪುರಾಣದ ಆರನೆಯ ಕಾಂಡದಲ್ಲಿ ನಿರೂಪಿಸಿದ್ದಾನೆ. ಅನೇಕ ಶಿವಶರಣರ ಕಥೆಗಳನ್ನು ಪರಶಿವನ ಪಂಚವಿಂಶತಿಲೀಲೆಗಳನ್ನು ವೀರಶೈವಾಮೃತ ಮಹಾಪುರಾಣದಿಂದಲೇ ಸಂಗ್ರಹಿಸಿದ್ದಾನೆ. ಸಿದ್ಧನಂಜೇಶನ ಗುರುರಾಜ ಚಾರಿತ್ರದಲ್ಲಿ ಸಂಕ್ಷೇಪವಾಗಿ ಬಂದಿರುವ ಈ ಚತುರಾಚಾರ್ಯರ ಚರಿತ್ರೆಯನ್ನು ಪರ್ವತೇಶ ಆಧರಿಸಿ ವಿಸ್ತರಿಸಿರುವ ಸಾಧ್ಯತೆಯೂ ಉಂಟು. ದುರ್ದೈವದ ಸಂಗತಿಯೆಂದರೆ ಸಂಪಾದನೆಯ ಪರ್ವತೇಶ ತನಗಿಂತ ಹಿಂದೆ ಇದ್ದ ಗುಬ್ಬಿಯ ಮಲ್ಲಣಾರ್ಯನನ್ನಾಗಲಿ ಬಹುಶಃ ತನ್ನ ಹಿರಿಯ ಸಮಕಾಲೀನನಾಗಿದ್ದ ಸಿದ್ದನಂಜೇಶನನ್ನಾಗಲಿ ಎಲ್ಲಿಯೂ ಸ್ಮರಿಸಿಲ್ಲ. ಇದಕ್ಕೆ ಕಾರಣವಾದರೂ ಏನಿರಬಹುದು ?

ವೀರಶೈವ ಧರ್ಮದಲ್ಲಿ ಪಂಚಾಚಾರ್ಯರಿಗೆ ಪ್ರಮುಖ ಸ್ಥಾನವಿದೆ. ವಿದ್ವಾಂಸರಲ್ಲಿ ಇವರ ಕಾಲದೇಶ ವರ್ತಮಾನಗಳ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಇವರು ಅಂಗೋದ್ಭವರೆಂದೂ ಲಿಂಗೋದ್ಭವರೆಂದೂ ಕೃತಿಗಳು ಸಾರುತ್ತವೆ. ಹೀಗಿದ್ದರೂ ಪಂಚಾಚಾರ್ಯರ ಅಸ್ತಿತ್ವವನ್ನೇ ಪ್ರಶ್ನಿಸುವ ಪಂಥವೂ ಉಂಟು. ರೇಣುಕರು ಲಂಕೆಗೆ ಹೋಗಿ ವಿಭೀಷಣನಿಂದ ಮೂರುಕೋಟಿ ಲಿಂಗಗಳನ್ನು ಪ್ರತಿಷ್ಠಾಪನೆ ಮಾಡಿಸಿದ್ದು, ಅಗಸ್ತ್ಯರಿಗೆ ಧರ್ಮಬೋಧೆ ಮಾಡಿದ್ದು ಮುಂತಾದ ಸಂಗತಿಗಳು ಚಾರಿತ್ರಿಕ ದೃಷ್ಟಿಯಿಂದ ಅಸಂಗತಗಳೆನಿಸುತ್ತವೆ ಎನ್ನುತ್ತಾರೆ.

ಪಂಡಿತಾರಾಧ್ಯರು ಬಸವೇಶ್ವರರನ್ನು ಕಾಣಲು ಹೋದದ್ದು ಮಾರ್ಗಮಧ್ಯೆ ಬಸವೇಶ್ವರರ ಅವಸಾನವನ್ನು ತಿಳಿದು ಪರಿಪರಿಯಾಗಿ ದುಃಖಿಸಿದ್ದು, ಶಿವಲೆಂಕ ಮಂಚಣ್ಣ ಕಲ್ಯಾಣಕ್ಕೆ ಹೋಗಿ ಶಿವಶರಣರನ್ನು ಸಂದರ್ಶಿಸಿ ಬಂದದ್ದು-ಇವು ಇವರಿಬ್ಬರೂ ವಚನಕಾರರ ಸಮಕಾಲೀನರೆನ್ನಲು ಆಧಾರಗಳಾಗುತ್ತವೆ. ಈ ದಿಸೆಯಲ್ಲಿ ವ್ಯಾಪಕವಾದ ವ್ಯಾಸಂಗ ಮತ್ತು ಸಂಶೋಧನೆಗಳಿಗೆ ಅವಕಾಶಗಳಿವೆ.

ಚತುರಾಚಾರ್ಯ ಚಾರಿತ್ರದಲ್ಲಿ ಕೆಲವಾರು ಚಾರಿತ್ರಿಕ ಸಂಗತಿಗಳೂ ಕಂಡುಬರುತ್ತವೆ. ಮಲ್ಲಿಕಾರ್ಜುನನೆಂಬ ಶಿವಯೋಗಿ ''ಜಗದೊಳತಿ ಖುಲ್ಲ ತುರುಕರ ಗುರು ಕಬೀರನಂ ಜೈಸಿ'' (2-7-92) ಮಳೆಯ ಮಲ್ಲೇಶ ''ಏಳ್ಳೂರ್ ಕಲಂಧರರ ಸಮ್ಮೇಳದಿಂ ಶಿಷ್ಯರಂ ಮಾಡಿ ಮಕ್ಕೆಗೆ ಪೋಗಿ ಬಾಳ ಮಹಿಮೆಯ ಮೆರೆದು''

(2-7-93) "ಒಡ್ಡಿಯ ಜಗನ್ನಾಥದೊಳಗೊದವಿ ಮೂರ್ತಿಯ" (4-11-13) ಇವೇ ಮೊದಲಾದ ಮಾಹಿತಿಗಳ ಹಲವಾರು ದೃಷ್ಟಿಗಳಿಂದ ಉಪಯುಕ್ತವಾಗಿವೆ.

ಸಂಪಾದನೆಯ ಪರ್ವತೇಶ ವೀರಶೈವ ಸಂಪ್ರದಾಯವನ್ನು ಸಮರ್ಥವಾಗಿ ಪರಿಪಾಲಿಸಿಕೊಂಡು ಬಂದ ಒಬ್ಬ ನಿಷ್ಠಾವಂತ ಕವಿ. ಚತುರಾಚಾರ್ಯಚಾರಿತ್ರದ ಆರನೆಯ ಕಾಂಡದಲ್ಲಿ ವೀರಶೈವ ಧರ್ಮದ ವಿಧಿವಿಧಾನಗಳನ್ನು ವಿಸ್ತಾರವಾಗಿ ಕ್ರಮಬದ್ಧವಾಗಿ ವಿವರಿಸಿದ್ದಾನೆ. ಈ ಕೃತಿಯಲ್ಲಿ ಪರಶಿವನ ಪಂಚವಿಂಶತಿಲೀಲೆಗಳನ್ನು 'ಅನೇಕ ಶಿವಶರಣರ ಚರಿತ್ರೆಗಳನ್ನು ಹಾಸು ಹೊಕ್ಕಾಗಿ ಹೆಣೆದಿದ್ದಾನೆ. ಈ ಕಥೆಗಳು ತುಂಬ ಲವಲವಿಕೆಯಿಂದ ಕೂಡಿವೆ, ಧಾರ್ಮಿಕ ಗ್ರಂಥವಾದರೂ ಈ ಕೃತಿ ತನ್ನ ಸಾಹಿತ್ಯಿಕ ಗುಣಗಳಿಂದ ಓದುಗರನ್ನು ಆಕರ್ಷಿಸುತ್ತದೆ.

ಸಂಪಾದನೆಯ ಪರ್ವತೇಶ ಈ ಕೃತಿ ರಚನೆಗೆ ಪರಿಶೀಲಿಸಿದ ಹಲವಾರು ಗ್ರಂಥಗಳ ಪಟ್ಟಿಯನ್ನು ಕೊಟ್ಟು ಇವೆಲ್ಲವುಗಳಿಂದ ಮಾಹಿತಿಯನ್ನು ಸಂಗ್ರಹಿಸಿರುವುದಾಗಿಯೂ ಹೇಳಿಕೊಂಡಿದ್ದಾನೆ, ತನ್ನ ಕೃತಿ ಅಜರಾಮರವಾಗಿ ನಿಲ್ಲಲೆಂಬ ಆಶಯವನ್ನು ವ್ಯಕ್ತಪಡಿಸಿದ್ದಾನೆ.

ಸಂಪಾದನೆಯ ಪರ್ವತೇಶ ಶಾಸ್ತ್ರವಿಷಯಗಳಲ್ಲಿ ಎಷ್ಟು ಪಾರಂಗತನೋ ಸಂಗೀತ ಲಲಿತಕಲೆಗಳಲ್ಲೂ ತನ್ನ ಅಭಿರುಚಿಯನ್ನು ವ್ಯಕ್ತಪಡಿಸಿದ್ದಾನೆ, ಉದಾಹರಣೆಗೆ 1-4-69ರಿಂದ 72ನೆಯ ಪದ್ಯಗಳವರೆಗೆ ನೋಡಬಹುದು.

ಲಲಿತ ಭೂಪಾಳಿ ಸಾಳಗ ಗೌಳ ರಾಮಕ್ರಿ
ಮಲಹರಿ ವಸಂತ ಗುರ್ಜರಿ ನಾಟಿ ಕಾಂಬೋದಿ
ಘಳಮಂಜರಿಯು ಮೇಘ ದೇಶಿ ಧನ್ಯಾಸಿ ಗಾಂಧಾರಿ ಬಂಗಾಳಿ ಪಹಡಿ
ಸಲೆ ಶಂಕರಾಭರಣ ಮುಖ್ಯರಾಗಂಗಳಂ
ಕಲ ಮಂದ್ರ ಗಂಭೀರ ತಾರ ಸ್ವರಯುಕ್ತದಿಂ
ದೊಲವಿನಲಿ ಸಾರಿಣಿ ಮುಖ್ಯಮಾದೇಳುತಂತ್ರಿಗಳಿಂದ ಪಾಡುತಿಹರು ॥

೧-೪-೭೧

ಸಂಪಾದನೆಯ ಪರ್ವತೇಶನ ಜೀವಮಾನದ ಏಕೈಕ ಕೃತಿಯಾಗಿ ಹೊರಬಂದಿರುವ ಚತುರಾಚಾರ್ಯಚಾರಿತ್ರ ಕಾವ್ಯಗುಣದಿಂದಷ್ಟೇ ಅಲ್ಲದೆ ಗ್ರಂಥಪ್ರಮಾಣದಿಂದಲೂ ಕನ್ನಡ ಸಾಹಿತ್ಯದ ವಾರ್ಧಕಷಟ್ಪದಿ ಕಾವ್ಯಗಳಲ್ಲಿ ಉಲ್ಲೇಖಾರ್ಹವಾಗಿದೆ. ಇದು ವೀರಶೈವ ಧರ್ಮದ ಪ್ರಕ್ರಿಯೆಗಳನ್ನು ಒಗ್ಗೂಡಿಸಿರುವುದರಿಂದ ಆ ಧರ್ಮಕ್ಕೆ ಒಂದು ಕೈಪಿಡಿಯಂತಿದೆ. ದಿ॥ ಎಂ. ಆರ್. ಶ್ರೀನಿವಾಸಮೂರ್ತಿಯವರು ಚತುರಾಚಾರ್ಯ ಚಾರಿತ್ರವನ್ನು ಕುರಿತು 'ಒಂದು ಕಡೆ ಶಾಸ್ತ್ರ ವಿಚಾರಗಳ ನಿಧಿ ಶರಣರಾನಂದ

ಮತ್ತೊಂದು ಕಡೆ ಲೌಕಿಕರಿಗೆ ರಸಭಾವನಿಧಿ ರಸಿಕರಿಗೆ ಕಾವ್ಯಾನಂದ. ಈ ಉಭಯ ಮತಗಳಿಗೂ ಹೊಂದಿಕೆಯಾಗಿ ಬರೆದಿರುತ್ತೇನೆಂದು ಹೇಳಿಕೊಂಡಿದ್ದಾನೆ. ಅದರಲ್ಲಿ ಸತ್ಯಾಂಶವಿದೆ' ಎನ್ನುವ ಮಾತುಗಳು ಯಥಾರ್ಥವಾದುವು.

## ೪. ಗ್ರಂಥಸಂಪಾದನೆ

ಚತುರಾಚಾರ್ಯ ಚಾರಿತ್ರವನ್ನು ನಾಲ್ಕು ಹಸ್ತಪ್ರತಿಗಳಿಂದ ಸಂಪಾದಿಸಲಾಗಿದೆ. ಇವುಗಳಲ್ಲಿ ಮೂರು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಹಸ್ತಪ್ರತಿ ಭಂಡಾರಕ್ಕೆ ಸೇರಿದುವು. ಇನ್ನೊಂದು ಪ್ರತಿ ಶ್ರೀ ಪಿ. ಎಂ. ಗಿರಿರಾಜು ಅವರಿಂದ ಬಂದದ್ದು. ಈ ಹಸ್ತಪ್ರತಿಗಳ ವಿವರಗಳು ಹೀಗಿವೆ—

**ಕ** : ಕಾಗದದ ಪ್ರತಿ. ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಗ್ರಂಥ ಭಂಡಾರದ ಹಸ್ತಪ್ರತಿಯ ಕ್ರಮಸಂಖ್ಯೆ ಕೆ. ಎ. ೮೦ ಮತ್ತು ಕೆ. ಎ. ೮೧. ಈ ಹಸು ಪ್ರತಿ ಎರಡು ಸಂಪುಟಗಳಲ್ಲಿ ಸಂಪ್ರತಿಯಾಗಿದೆ. ಕೆ. ಎ. ೮೦ ಹಸ್ತಪ್ರತಿಯ ಉದ್ದ 12 ಅಂಗುಲ ಮತ್ತು ಅಗಲ 7.6 ಅಂಗುಲ. 1–168 ಪತ್ರಗಳಿವೆ. ಪ್ರತಿ ಪತ್ರದಲ್ಲಿ ಸರಾಸರಿ 20 ಪಂಕ್ತಿ ; ಪ್ರತಿ ಪಂಕ್ತಿಯಲ್ಲಿ 28 ಅಕ್ಷರಗಳಿವೆ. ಈ ಸಂಪುಟದಲ್ಲಿ 1-3ಕಾಂಡಗಳಿವೆ. ಕೆ. ಎ. ೮೧ ಹಸ್ತಪ್ರತಿಯ ಉದ್ದ 12 ಅಂಗುಲ ಮತ್ತು ಅಗಲ 7.6 ಅಂಗುಲ 1-192 ಪತ್ರಗಳಿವೆ. ಪ್ರತಿ ಪತ್ರದಲ್ಲಿ ಸರಾಸರಿ 20 ಪಂಕ್ತಿ ; ಪ್ರತಿ ಪಂಕ್ತಿಯಲ್ಲಿ 28 ಅಕ್ಷರಗಳಿವೆ. ಈ ಸಂಪುಟದಲ್ಲಿ 4-6 ಕಾಂಡಗಳಿವೆ. ಪ್ರತಿಯ ಕಡೆಯ.ಲ್ಲಿ "ಅಂತು ಕಾಂಡ ೬ಕ್ಕೆ ಸಂಧಿ ೫೪ಕ್ಕಂ ಪದ ೩೧೮೬ ಪಲ್ಲ ೨೭ ಕಾಂಡ ಮುಕ್ತಪದ ೧೨ ಅಂತು ಪದಂ ೩೨೨೬ಕ್ಕೆ ಸಲೆಗ್ರಂಥ ೧೯೦೪ ಶ್ರುತಿವಾಕ್ಯ ವೃತ್ತ ಸಾಕ್ಷಿ ಗ್ರಂಥ ೩೩೨ ಉಭಯ ಗ್ರಂಥಂ ೩೨೩೬ಕ್ಕಂ ಜಯಮಂಗಳಂ ಇಲ್ಲಿಗೆ ಚತುರಾಚಾರ್ಯ ಪುರಾಣ ಸಮಾಪ್ತಮಾದುದು ಶ್ರೀ" ಎಂದಿದೆ. ಈ ಪ್ರತಿಯಲ್ಲಿ ೬ ನೆಯ ಕಾಂಡ ೭ ನೆಯಂ ಸಂಧಿ ೨೯ ನೆಯ ಪದ್ಯದಿಂದ ೫೦ ನೆಯ ಪದ್ಯದವರೆಗೆ ಮತ್ತು ೯೨ ರಿಂದ ೧೧೨ ಪದ್ಯಗಳವರೆಗೆ ಲುಪ್ತವಾಗಿದೆ. ಈ ಪ್ರತಿಯ ಅಕ್ಷರಗಳು ತುಂಬ ಸ್ಫುಟವಾಗಿಯೂ ಸುಂದರವಾಗಿಯೂ ಇವೆ. ಮುದ್ರಣಪ್ರತಿಯನ್ನು ಇದರಿಂದ ಸಿದ್ಧಪಡಿಸಲಾಗಿದೆ. ಇದರ ಪಾಠಗಳು ಬಹುಮಟ್ಟಿಗೆ ಶುದ್ಧವಾಗಿವೆ.

**ಗ** : ಓಲೆಯ ಪ್ರತಿ ; ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿಭಂಡಾರದ ಹಸ್ತಪ್ರತಿಯ ಕ್ರಮಸಂಖ್ಯೆ ಕೆ. ೧೯೯೮. ಇದರಲ್ಲಿ ೧-೧೪೮ ಪತ್ರಗಳಿವೆ. ಪ್ರತಿಯ ಉದ್ದ ೨೦.೭. ಅಂಗುಲ. ಅಗಲ ೨ ಅಂಗುಲ. ಪ್ರತಿಪುಟದಲ್ಲಿ ಸರಾಸರಿ ೧೨ ಪಂಕ್ತಿ: ಪ್ರತಿಪಂಕ್ತಿಯಲ್ಲಿ ಸರಾಸರಿ ೧೩.೨ ಅಕ್ಷರಗಳಿವೆ. ಹಸ್ತಪ್ರತಿಯ ಕಡೆಯಲ್ಲಿ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದಾಃ ಪ್ರಯೋತ್ತರ ಷಷ್ಟ ಸಪ್ತಶತಾಧಿಕ ಸಹಸ್ರ ಸಂಖ್ಯೆ ಪ್ಲವನಾಮ ಸಂವತ್ಸರೇ ಉತ್ತರಾಯಣೇ ಶಶಿರುತ್ತ

ಫಾಲ್ಗುಣ ಮಾಸೇ ಶುಕ್ಲಪಕ್ಷೇ ಬಿದಿಗೆ ಶ್ಯಾಂತಿಥ್ಯಾಂ ಭಾನುವಾಸರ ಯುಕ್ತಾಯಾ ಶ್ರೀಮಾನ್ ಪದ್ಮರಾಜ ಪಂಡಿತವಂಶವಾರಿಧಿ ಚಂದ್ರ...ಮಲ್ಲಿಕಾರ್ಜುನರಾಧ್ಯರಜಠರಾಬ್ಧಿ ಸುಧಾಕರರಾದ ಮಲ್ಲಿಕಾರ್ಜುನಾರಾಧ್ಯರ ಗರ್ಭೋದ್ಭವಿಗಳಾದ ಮಲ್ಲಿಕಾರ್ಜುನಾರಾಧ್ಯರ ಪ್ರಥಮಪತ್ನಿ ಕುಮಾರನಾದ ಮಲ್ಲಿಕಾರ್ಜುನ ದೇವರು ಬರೆದಂತೆ ಆಚಾರ್ಯ ಪುರಾಣಲೇಖನ ಲಿಖಿತಾಂತ ಸ್ಥಾಪಿತಾಯಂ ಶುಭ ಮಂಗಲಂ ಭದ್ರಂ ಭೂಯಾತ್ ಶ್ರೀ ಶ್ರೀ ಶ್ರೀ.

ಕರಕೃತಪರಾಧಂ ಕ್ಷಂತು ಮರ್ಹಂತಿ ಸಂತಃ
ಅಕ್ಷರಂ ಯತ್ಪರಿಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್
ಕ್ಷಂತುಮರ್ಹಸ್ತು ವಿದ್ವಾಂಸಃ ಪಿತಾ ಪುತ್ರಾಪರಾಧವತ್.

ಪ್ಲವಸಂವತ್ಸರೇ ಮಾಸೇ ಫಾಲ್ಗುಣೇ ಶುಕ್ಲ ಪಕ್ಷಕೆ ಬಿದಿಗಿ ಶ್ಯಾಂ ಭಾನುವಾರೇಚ ಮಲ್ಲಣಾರ್ಯೇಣ ಲಿಖ್ಯತಃ

ಬಸವಾಕ್ಷರ ತ್ರಯಂ ಪೂರ್ವಂ ಅಲುಮಾಕ್ಷರ ಪಶ್ಚಿಮಂ
ಉತ್ತರಂ ಷಡಾಕ್ಷರಂಚೈವ ಪಂಚಪ್ರಸಾದ ದಕ್ಷಣಾತ್
ಪಂಚಾಕ್ಷರೀ ದ್ವಾದಶಂಗ್ರಂಥಿ ದ್ವಿಗ್ರಂಥಿಚ ನವಪ್ರದಕ್ಷಣಾತ್
ಅಷ್ಟೋತ್ತರ ಶತಂ ಕುರ್ಯಾತ್ ಸದ್ಯೋಮುಕ್ತಿನ ಸಂಶಯಂ
ಶ್ರೀಶಿವಾಯ ನಮಃ ॥

ಈ ಪ್ರತಿ ಸಮಗ್ರವಾಗಿಯೂ ಸಾಧ್ಯವಾದಷ್ಟು ಶುದ್ಧವಾಗಿಯೂ ಇದೆ. ಈ ಪ್ರತಿ 'ಕ' ಪ್ರತಿಯನ್ನು ಸಂಪೂರ್ಣವಾಗಿ ಹೋಲುತ್ತದೆ. 'ಕ' ಪ್ರತಿಯ ಲುಪ್ತಭಾಗ ಇಲ್ಲಿ ಲಭ್ಯವಿದೆ.

**ಚ :** ಓಲೆಯ ಪ್ರತಿ. ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದ ಹಸ್ತಪ್ರತಿಯ ಕ್ರಮಸಂಖ್ಯೆ ಕೆ. ೭೯೮. ಪ್ರತಿಯ ಉದ್ದ ೧೩.೫ ಅಂಗುಲ. ಅಗಲ ೧.೮ ಅಂಗುಲ. ೧-೬೭ ಪತ್ರಗಳಿದ್ದು ಪ್ರತಿಪುಟದಲ್ಲಿ ೬ ಪಂಕ್ತಿ ಮತ್ತು ಪ್ರತಿ ಪಂಕ್ತಿಯಲ್ಲಿ ಸರಾಸರಿ ೭೪ ಅಕ್ಷರಗಳಿವೆ, ಇದರಲ್ಲಿ ಆರಂಭದಿಂದ ದ್ವಿತೀಯ ಕಾಂಡ ಪೂರ್ತಿ ಇದೆ. ಈ ಅಸಮಗ್ರ ಪ್ರತಿಯ ಪಾಠಗಳು ಬಹುಮಟ್ಟಿಗೆ ಶುದ್ಧವಾಗಿವೆ. ಅಕ್ಷರಗಳು ತುಂಬ ಮುದ್ದಾಗಿದೆ.

**ಜ :** ಶ್ರೀಮಾನ್ ಪಿ. ಎಂ. ಗಿರಿರಾಜು ಅವರಿಂದ ಲಭ್ಯವಾದ ಓಲೆ ಪ್ರತಿ. ಇದರಲ್ಲಿ ೧-೧೩೯ ಓಲೆಗಳಿವೆ. ಇದರ ಉದ್ದ ೪೩ ಮಿಮಿ, ಅಗಲ ೩ ಮಿಮಿ. ಪ್ರತಿ ಓಲೆಯಲ್ಲಿ ಸರಾಸರಿ ೫ ಪಂಕ್ತಿಗಳಿವೆ. ಪ್ರತಿಪಂಕ್ತಿಯಲ್ಲಿ ಸರಾಸರಿ ೬೪ ಅಕ್ಷರ ಗಳಿವೆ. ಇದು ಅಸಮಗ್ರ ಪ್ರತಿ. ಇದರಲ್ಲಿ ಪಂಚಮ ಕಾಂಡ ೧ನೆಯ ಸಂಧಿಯಿಂದ

ಷಷ್ಠಮಕಾಂಡ ೪ನೆಯ ಸಂಧಿ ೨೯ನೆಯ ಪದ್ಯದವರೆಗಿದೆ. ಇದು ಮೇಲ್ಕಂಡ ಪ್ರತಿಗಳ ಪಾಠಗಳಿಗಿಂತ ಶೀರ ಭಿನ್ನಸಂಪ್ರದಾಯಕ್ಕೆ ಸೇರಿದ ಪ್ರತಿ. ಈ ಪ್ರತಿಯಲ್ಲಿ ಪ್ರಾಸ ಮತ್ತು ಅದೇ ಅಭಿಪ್ರಾಯವನ್ನು ಉಳಿಸಿಕೊಂಡು ಬೇರೆ ಬೇರೆ ಪದ್ಯಗಳೇ ರಚಿತವಾಗಿವೆ. ಹೀಗಾಗಿ ಇದರ ಪಾಠಗಳನ್ನು ಅನಿವಾರ್ಯವಾಗಿ ಅಡಿಟಿಪ್ಪಣಿಯಲ್ಲಿ ಕೊಡಬೇಕಾಯಿತು. ಈ ಹಸ್ತಪ್ರತಿಯನ್ನು ಎರವಲಾಗಿ ನೀಡಿದ ಶ್ರೀ ಪಿ. ಎಂ. ಗಿರಿರಾಜು ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಮೇಲಿನ ಹಸ್ತಪ್ರತಿಗಳಲ್ಲಿ ಯಾವುದೊಂದೂ ಸರ್ವಸಮರ್ಪಕವಾದುದಲ್ಲ. ಸಂದರ್ಭೋಚಿತವಾಗಿ ಸಮ್ಮಿಶ್ರಪಾಠಗಳನ್ನು ಉಳಿಸಿಕೊಳ್ಳಲಾಗಿದೆ. ಸಾಧ್ಯವಿದ್ದ ಮಟ್ಟಿಗೂ ಕವಿಯ ಮೂಲಪಾಠ ಏನಿರಬಹುದೆಂಬುದನ್ನು ಆಂತರಿಕ ಮತ್ತು ಬಾಹ್ಯ ಆಧಾರಗಳಿಂದ ನಿರ್ಣಯಿಸಲಾಗಿದೆ.

**೫. ಉಪಸಂಹಾರ :**

ಈ ಕೃತಿಯನ್ನು ಸಂಪಾದಿಸುವಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ಸಹೋದ್ಯೋಗಿಗಳು, ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು ಮತ್ತು ವಿದ್ವಾನ್ ಎಂ. ಎಸ್. ಬಸವರಾಜಯ್ಯನವರು ವಿಶೇಷ ನೆರವನ್ನು ನೀಡಿದ್ದಾರೆ.

ಹಸ್ತಪ್ರತಿಯಿಂದ ಮುದ್ರಣಪ್ರತಿಯನ್ನು ಶ್ರೀ ಕೆ. ಆರ್, ಶೇಷಗಿರಿಯವರು ಮತ್ತು ಶ್ರೀಮತಿ ವೈ. ಸಿ. ಭಾನುಮತಿ ಅವರು ಸಿದ್ಧಪಡಿಸಿಕೊಟ್ಟಿದ್ದಾರೆ. ಪಾಠಾಂತರಗಳನ್ನು ಗುರುತಿಸುವಲ್ಲಿ ಶ್ರೀ ಕೆ. ಆರ್. ಶೇಷಗಿರಿ, ಶ್ರೀ ಜಿ. ಜಿ. ಮಂಜುನಾಥನ್ ಮತ್ತು ಶ್ರೀಮತಿ ವೈ. ಸಿ. ಭಾನುಮತಿಯವರು ನೆರವು ನೀಡಿದ್ದಾರೆ. ಈ ಕೃತಿಯ ಮುದ್ರಣದಿಂದ ಹಿಡಿದು ಪೀಠಿಕೆ ಅನುಬಂಧಗಳನ್ನು ಸಿದ್ಧಪಡಿಸುವಲ್ಲಿ ಕರಡಚ್ಚುಗಳನ್ನು ತಿದ್ದುವಲ್ಲಿ ಶ್ರೀ ಜಿ. ಜಿ. ಮಂಜುನಾಥನ್ ಅವರು ವಿಶೇಷವಾಗಿ ಸಹಕರಿಸಿದ್ದಾರೆ. ಅರ್ಥಕೋಶ, ವ್ಯಕ್ತಿ ವಿಶಿಷ್ಟಪದ ಸೂಚಿ, ಪಾರಿಭಾಷಿಕ ಪದಕೋಶ ಮೊದಲಾದ ಕಷ್ಟಸಾಧ್ಯ ಕೆಲಸಗಳನ್ನು ತರುಣಮಿತ್ರರಾದ ಡಾ. ಎನ್. ಎಸ್. ತಾರಾನಾಥ ಅವರು ಅತ್ಯಂತ ಶ್ರದ್ಧೆಉತ್ಸಾಹಗಳಿಂದ ಸಮರ್ಪಕವಾಗಿ ಮಾಡಿಕೊಟ್ಟಿದ್ದಾರೆ. ಇವರೆಲ್ಲರಿಗೂ ನಾನು ತುಂಬ ಆಭಾರಿಯಾಗಿದ್ದೇನೆ.

ಈ ಕಾವ್ಯದ ಪ್ರಾರಂಭದ ಕೆಲವು ಭಾಗಗಳನ್ನು ವಿದ್ವಾನ್ ಎಂ.ಎಸ್. ಬಸವರಾಜಯ್ಯನವರು ಪರಿಶೀಲಿಸಿ ಕೊಟ್ಟಿದ್ದಾರೆ. ಈ ಕಾವ್ಯದಲ್ಲಿ ವಿಪುಲವಾಗಿ ಬಂದಿರುವ ಸಂಸ್ಕೃತ ಭಾಗಗಳನ್ನು ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು ಅತ್ಯಂತ ಶ್ರಮವಹಿಸಿ ಮೂಲಗ್ರಂಥಗಳಿಂದ ತಾಳೆ ನೋಡಿಕೊಟ್ಟಿದ್ದಾರೆ. ಅವರ ಈ ಉಪಕಾರವನ್ನು ನಾನು ತುಂಬುಹೃದಯದಿಂದ ಸ್ಮರಿಸುತ್ತೇನೆ. ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಈ ಕೃತಿಯ ಸಂಪಾದನ ಕಾರ್ಯದಲ್ಲಿ ವಿಶೇಷವಾದ ಆಸ್ಥೆವಹಿಸಿ ಇದರ ಪ್ರಕಟಣೆಗೆ ಎಲ್ಲ ನೆರವನ್ನು ನೀಡಿದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ॥ ಎಚ್. ತಿಪ್ಪೇರುದ್ರಸ್ವಾಮಿಯವರಿಗೆ ನಾನು ಋಣಿಯಾಗಿದ್ದೇನೆ.

ಚತುರಾಚಾರ್ಯ ಚಾರಿತ್ರ ಒಂದು ಮಹತ್ವಪೂರ್ಣಕೃತಿ. ಇದರ ಸಂಪಾದನೆ ಸುಲಭಸಾಧ್ಯವಾದುದೇನಲ್ಲ. ಅತ್ಯಂತ ಶ್ರದ್ಧಾಸಕ್ತಿಗಳಿಂದ ಈ ಕಾರ್ಯವನ್ನು ನಿರ್ವಹಿಸಲು ಪ್ರಯತ್ನಿಸಿದ್ದೇನೆ. ಇಷ್ಟಾದರೂ ಈ ಕಾರ್ಯದಲ್ಲಿ ಸಂಪಾದಕನ ಅಜ್ಞಾನ ಅನವಧಾನಗಳಿಂದ ಸಂಭವಿಸಿರಬಹುದಾದ ಸ್ಖಾಲಿತ್ಯಗಳನ್ನು ಈ ಕೃತಿಯನ್ನು ಪರಿಶೀಲಿಸುವ ವಿದ್ವಾಂಸರು ದಯವಿಟ್ಟು ತಿಳಿಸಬೇಕೆಂದು ಅತ್ಯಂತ ಕಳಕಳಿಯಿಂದ ಪ್ರಾರ್ಥಿಸುತ್ತೇನೆ.

**ಎನ್. ಬಸವಾರಾಧ್ಯ**
ಉಪ ನಿರ್ದೇಶಕ.

ಮೈಸೂರು.
1-2-86